ರಾಷ್ಟ್ರೀಯ ಗ್ರಾಮೀಣ ಆರೋಗ್ಯ ಅಭಿಯಾನ
राष्ट्रीय ग्रामीण स्वास्थ्य मिशन
(2005-2012)

ಕರ್ನಾಟಕ ಸರ್ಕಾರ

# ಹದಿಹರೆಯದ ಹೆಣ್ಣುಮಕ್ಕಳ ಆರೋಗ್ಯ




ಹದಿಹರೆಯದವರೆಂದರೆ 10ರಿಂದ 19 ವರ್ಷ ವಯಸ್ಸಿನವರು. ಬಾಲ್ಯಾವಸ್ಥೆಯಿಂದ ತಾರುಣ್ಯಕ್ಕೆ ಮಾರ್ಪಾಡಾಗುವ ಮಧ್ಯದ ಕಾಲಘಟ್ಟ. ಇದು ತಾರುಣ್ಯವನ್ನು ತಲುಪಲು ಬೇಕಾದ ಎಲ್ಲಾ ತರಹದ ತಯಾರಿ ನಡೆಯುವ ಕಾಲ. ದೈಹಿಕ, ಮಾನಸಿಕ ಹಾಗೂ ಭಾವನೆಗಳಲ್ಲಿ ಬದಲಾವಣೆ ಪಡೆದು, ಮದುವೆಯಾಗಿ ತಾಯಿಯಾಗುವ ಮಹತ್ವದ ಕಾಲ. ಹದಿಹರೆಯದ ಹಂತದಲ್ಲಿ ಶಾರೀರಿಕ, ಮಾನಸಿಕ, ಭಾವನಾತ್ಮಕ ಹಾಗೂ ಸಾಮಾಜಿಕ ಬದಲಾವಣೆಗಳು ಆಗುತ್ತವೆ.

### ಮುಟ್ಟಾದಾಗ ವಹಿಸಬೇಕಾದ ಕ್ರಮಗಳು

• ದಿನನಿತ್ಯ ಸ್ನಾನ ಮಾಡಬೇಕು ಮತ್ತು ಶುಚಿತ್ವ ಕಾಪಾಡಿಕೊಳ್ಳಬೇಕು. • ನಿರ್ಮಲವಾದ ಸ್ಯಾನಿಟರಿ ಪ್ಯಾಡ್‌ನ್ನು ಉಪಯೋಗಿಸಬೇಕು. • ಒಂದು ವೇಳೆ ಬಟ್ಟೆ ಉಪಯೋಗಿಸಬೇಕಾದಲ್ಲಿ, ಸ್ವಚ್ಛವಾದ ಬಟ್ಟೆಯನ್ನೇ ಉಪಯೋಗಿಸಬೇಕು. • ಬಟ್ಟೆಯನ್ನು ಸಾಬೂನಿನಿಂದ ಚೆನ್ನಾಗಿ ತೊಳೆದು ಬಿಸಿಲಿನಲ್ಲಿ ಒಣಗಿಸಿ ಇಟ್ಟುಕೊಳ್ಳಬೇಕು. • ಬೇಕಾದಲ್ಲಿ ಆಗಾಗ್ಗೆ ಸ್ಯಾನಿಟರಿ ಪ್ಯಾಡ್/ಬಟ್ಟೆಯನ್ನು ಬದಲಾಯಿಸಬೇಕು. • ಮುಟ್ಟಿನ ಅವಧಿಯಲ್ಲಿ ಪೌಷ್ಟಿಕ ಆಹಾರ ಸೇವಿಸಬೇಕು. ಕಬ್ಬಿಣಾಂಶ ಮತ್ತು ಕ್ಯಾಲ್ಸಿಯಂ ಇರುವ ಸೊಪ್ಪು, ತರಕಾರಿಗಳನ್ನು ಉಪಯೋಗಿಸಬೇಕು.

### ಋತುಯಾತನೆ

ಹುಡುಗಿಯರಲ್ಲಿ ಸಾಮಾನ್ಯವಾಗಿ ಮುಟ್ಟಾಗುವ ಕೆಲವು ಗಂಟೆ ಅಥವಾ ಒಂದೆರಡು ದಿನಗಳ ಮುಂಚೆ ಹೊಟ್ಟೆ ನೋವು ಶುರುವಾಗಿ ರಕ್ತಸ್ರಾವ ವಾದಂತೆ ನೋವು ಕಡಿಮೆಯಾಗುವುದು. ಕೆಲವರಲ್ಲಿ ಕೆಳಹೊಟ್ಟೆ ನೋವಿನ ಜೊತೆಗೆ ಸೊಂಟ ನೋವು, ಸುಸ್ತು ಹಾಗೂ ವಾಂತಿ ಕೂಡ ಆಗಬಹುದು.

### ಪರಿಹಾರ

• ಪೌಷ್ಟಿಕ ಆಹಾರ ಸೇವಿಸಬೇಕು. • ಇತರೆ ಶಾರೀರಿಕ ಕಾಯಿಲೆಗಳು ಇದ್ದಲ್ಲಿ ಇದಕ್ಕೆ ಚಿಕಿತ್ಸೆ ಪಡೆಯಬೇಕು • ಬಿಸಿ ನೀರಿನ ಸ್ನಾನ ಮಾಡಬೇಕು. • ಬಿಸಿ ನೀರಿನ ಬಾಟಲಿನಿಂದ ಕೆಳ ಹೊಟ್ಟೆಯ ಮೇಲೆ ಶಾಖವನ್ನು ಕೊಡಬೇಕು. • ತಡೆಯಲಾರದ ನೋವಿದ್ದಲ್ಲಿ ವೈದ್ಯರನ್ನು ಸಂಪರ್ಕಿಸಿ ಸೂಕ್ತ ಚಿಕಿತ್ಸೆ ಪಡೆಯಬೇಕು.

(ಹೆಚ್ಚಿನ ವಿವರಗಳಿಗೆ ಹತ್ತಿರದ ಆರೋಗ್ಯ ಕೇಂದ್ರವನ್ನು ಸಂಪರ್ಕಿಸಿ)

**ಹದಿಹರೆಯದವರು ದೇಶದ ಮುಖ್ಯ ಮಾನವ ಸಂಪತ್ತು**

ಪ್ರಕಟಣೆ : ಯೋಜನಾ ನಿರ್ದೇಶಕರು (ಆರ್. ಸಿ. ಹೆಚ್.)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಆನಂದರಾವ್ ವೃತ್ತ, ಬೆಂಗಳೂರು

# ಹೊಸತು

ನೆಮ್ಮದಿಯ ನಾಳೆ ನಮ್ಮದು

## ಒಳಗೇನಿದೆ ...



---


ಚಿತ್ರಗಳು : ಶ್ರೀಹರಿ, ಕಮಲಂ ಅರಸು, ಆಚಾರ್ಯ, ಬಿ. ವಿಲ್ಸನ್,

ಜಿ. ಎಂ. ಬೊಮ್ನಳ್ಳಿ, ರಾಂಚಂದ್ರ ಕೊಪ್ಪಲು, ವಿಜಯಾನಂದ

ಮುಖಪುಟ : ಮಳೆಯ ಹಾವಳಿ; ವರ್ಣಚಿತ್ರ : ಸಾಗ್ಗೆರೆ ರಾಮಸ್ವಾಮಿ

ವಿನ್ಯಾಸ : ನವಕರ್ನಾಟಕ ವಿನ್ಯಾಸ

ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

ರಾಜ್ಯದ ಹಲವು ಜಿಲ್ಲೆಗಳಲ್ಲಿ ಮಳೆ ಮತ್ತು ನೆರೆ ಅಪಾರ ಜೀವಹಾನಿಯನ್ನುಂಟುಮಾಡಿದೆ. ಮನೆ, ಬಟ್ಟೆ, ದಿನಸಿ, ರಾಸು, ಎಲ್ಲವನ್ನೂ ಕಳೆದುಕೊಂಡ ಕುಟುಂಬಗಳು ನೂರಾರು. ಮಳೆಯನ್ನೇ ಕಾಣಲಿಲ್ಲವೆಂದು ಪರಿತಪಿಸುತ್ತಿದ್ದ ಜಿಲ್ಲೆಗಳು ಏಕಾಏಕಿ ಎಂದೂ ಕಂಡರಿಯದಷ್ಟು ಮಳೆ ಪಡೆದವು. ಕೃಷ್ಣ, ತುಂಗಭದ್ರಾ, ಭೀಮಾ, ಎಲ್ಲವೂ ತುಂಬಿ ಹೇರಳವಾದ ನೀರನ್ನು ಕಟ್ಟೆಗಳಿಂದ ಹೊರಬಿಡಬೇಕಾಯಿತು. ದಂಡೆಗಳು ಕೊಚ್ಚಿಹೋದವು, ರಸ್ತೆಗಳು ಕಾಣದಾದವು, ಮನೆಗಳು ಉರುಳಿಹೋದವು. ಅಲ್ಲಿಯ ಜನರ ಸಂಕಷ್ಟವನ್ನು ಪದಗಳಲ್ಲಿ ಹಿಡಿದಿಡುವುದು ಅಸಾಧ್ಯ. 'ಹೊಸತು' ಮತ್ತು 'ನವಕರ್ನಾಟಕ' ಬಳಗ ನೊಂದ ಸಮಸ್ತರಿಗೂ ತಲೆಬಾಗಿ ನಮಿಸುತ್ತದೆ, ಅವರ ನಾಳೆಗಳು ಕರಾಳವಾಗದಿರಲೆಂದು ಹಾರೈಸುತ್ತದೆ. ತಮ್ಮ ಕೈಲಾದಷ್ಟು ಸಹಾಯವನ್ನು ನೀಡಿ ಕಷ್ಟಕ್ಕೆ ಸಿಲುಕಿದವರ ಜೊತೆ ನಿಲ್ಲಲು ಈ ಸಂಸ್ಥೆಗಳು ಮುಂದಾಗಿವೆ. ರಾಜ್ಯ ಮತ್ತು ಕೇಂದ್ರ ಸರ್ಕಾರಗಳು ತಮ್ಮ ಸಾಮಾನ್ಯ ಕಾಳಜಿಗಳನ್ನು ಮೀರಿ ಜನರಿಗೆ ಸಹಾಯಹಸ್ತ ಮತ್ತು ಸಾಂತ್ವನ ನೀಡುತ್ತಿರುವುದು ಸ್ವಾಗತಾರ್ಹವಾಗಿದೆ. ಸಾರ್ವಜನಿಕರು ಎಂದಿನಂತೆ ಸಂಕಷ್ಟದಲ್ಲಿ ಸಿಲುಕಿದವರ ಬೆಂಬಲಕ್ಕೆ ನಿಂತಿದ್ದಾರೆ, ಬಟ್ಟೆ-ಆಹಾರ-ಔಷಧಿ ಮುಂತಾದವನ್ನು ಸರಬರಾಜು ಮಾಡಲು ಮುಂದೆ ಬಂದಿದ್ದಾರೆ. ನಾವು ಮಾಡಬಹುದಾದ ಕನಿಷ್ಠ ಕೆಲಸ ಇದು. ಬೇಗನೆ ಆ ಜಿಲ್ಲೆಗಳ ಜನ ಯಥಾಸ್ಥಿತಿಗೆ ಮರಳುತ್ತಾರೆಂದು ಆಶಿಸೋಣ. ಅತ್ಯಂತ ಭಯಾನಕ ಸನ್ನಿವೇಶಗಳಲ್ಲಿ ಅಲ್ಲಿಯ ಸಹಸ್ರಾರು ಮಂದಿ ಅತಿ ಹೆಚ್ಚಿನ ಸಂಯಮ ತೋರಿ ಪರಸ್ಪರ ಸಹಕಾರ ನೀಡಿಕೊಂಡು ಉನ್ನತಮಟ್ಟದ ನೈತಿಕತೆಯನ್ನು ಮೆರೆದಿದ್ದಾರೆ, ಮಾದರಿಯೊಂದನ್ನು ನಮ್ಮ ಮುಂದಿಟ್ಟಿದ್ದಾರೆ. ಇದಕ್ಕಾಗಿ ಅವರಿಗೆ ಅಭಿನಂದನೆಗಳು ಮತ್ತು ವಂದನೆಗಳು ಸಲ್ಲುತ್ತವೆ. ಈಗ ತಕ್ಷಣದಲ್ಲಿ ನಡೆಯಬೇಕಾದ ಕೆಲಸ ಕಟ್ಟೆ ಮತ್ತು ಕಾಲುವೆಗಳಲ್ಲಿ ದೊಡ್ಡ ಪ್ರಮಾಣದಲ್ಲಿ ಹೂಳೆತ್ತುವುದು. ಇಂದು ಸಂಭವಿಸಿರುವ ಅನಾಹುತವನ್ನು ಮುಂದೆ ತಪ್ಪಿಸಲು ಇದು ಅಗತ್ಯ. ಇದರಲ್ಲೂ ಹಣ ಲಪಟಾಯಿಸುವ ಬಾಬ್ತು ಸಾಕಷ್ಟಿದೆ. ಅದನ್ನು ನಿಯಂತ್ರಿಸಿ ಕೆಲಸ ಮಾಡಬೇಕು. ಹಣ ಎಲ್ಲಿಂದ ಬರುತ್ತದೆ, ಮಣ್ಣನ್ನೆಲ್ಲಿ ಹಾಕಬೇಕು, ಇತ್ಯಾದಿ ಪ್ರಶ್ನೆಗಳು ಕಾಮಗಾರಿಗೆ ಅಡ್ಡ ಬರಕೂಡದು. ಮುಂದೊಮ್ಮೆ ನೆರೆ ಬಂದ ನಂತರ ಸಂತ್ರಸ್ತರಿಗೆ ಮತ್ತೆ ಪರಿಹಾರ ನೀಡಬೇಕಾಗುವುದಿಲ್ಲವಲ್ಲ!

ಜನಸಾಮಾನ್ಯರ ಉದಾತ್ತತೆಯ ನಡುವೆ ಕೆಲವು ಅಹಿತಕರ ಸಂಗತಿಗಳು ಜರುಗಿ ಹೋದದ್ದು ದುಃಖದ ವಿಷಯ. ಕಷ್ಟಕಾಲಗಳಲ್ಲಿ ಇತಿಹಾಸದುದ್ದಕ್ಕೂ ಜರುಗಿರುವುದು ಇದೇ : ಸಾಮಾಜಿಕವಾಗಿ ಸಣ್ಣವರಾಗಿರುವವರು ದೊಡ್ಡ ಮಾದರಿಗಳಾಗುತ್ತಾರೆ ಮತ್ತು ದೊಡ್ಡ ಜನ ಸಣ್ಣತನ ತೋರಿಸುತ್ತಾರೆ. ಇದೊಂದು ದುರಂತ, ಆದರೆ ಸತ್ಯ. ಯಾರನ್ನೋ ವಿನಾಕಾರಣ ಟೀಕಿಸಲು ಈ ಮಾತುಗಳನ್ನು ಹೇಳಲಾಗುತ್ತಿಲ್ಲ, ಆತ್ಮಾವಲೋಕನಕ್ಕೆ ಅಂಜಬಾರದೆಂದು ತಿಳಿದುಕೊಳ್ಳಲೆಂದಷ್ಟೇ ಈ ಮಾತು. ಉದಾಹರಣೆಗೆ, ಹಲವು ತಥಾಕಥಿತ ನಾಯಕರು ಅತ್ಯಂತ ಪ್ರಮುಖ ಕೆಲಸವಿದೆಂದು ತೊಡಗಿಸಿಕೊಳ್ಳಬೇಕಾಗಿದ್ದಾಗ ಎಲ್ಲೋ ನಾಪತ್ತೆಯಾಗಿಬಿಟ್ಟಿದ್ದರು; ಕಾರ್ಯಪ್ರವೃತ್ತರಾದ ಮೇಲೆ ಪಕ್ಷ ರಾಜಕಾರಣದಂತಹ ತುಚ್ಛ ಪ್ರವೃತ್ತಿಗೆ ಯಥಾಪ್ರಕಾರ ಅಂಟಿಕೊಂಡರು. ಐದು ಸಾವಿರ ವರ್ಷಗಳ ಸಾಂಸ್ಕೃತಿಕ ಇತಿಹಾಸವಿರುವ ನಮ್ಮ ದೇಶದ ಜನಸಾಮಾನ್ಯರ ಸಂಸ್ಕೃತಿ ಎದುರು ನಾಯಕರ ನಡತೆ ಬಹಳ ಶೋಚನೀಯವಾಗಿಹೋಯಿತು. ಪರಿಹಾರ ರೂಪದಲ್ಲಿ ಬಂದಿದ್ದನ್ನು ಹಂಚುವಾಗಲೂ ತಾರತಮ್ಯವಿತ್ತೆಂದು ವರದಿಯಾಗಿದೆ. ಅದಕ್ಕಿಂತಲೂ ಹೆಚ್ಚು ಹೀನಾಯವಾದದ್ದು ಪರಿಹಾರ ಸಾಮಗ್ರಿಗಳ ವಿತರಣೆಯಲ್ಲಿಯೂ ಸ್ವಂತ ಜೇಬನ್ನು ತುಂಬಿಕೊಳ್ಳುವ ಭ್ರಷ್ಟಾಚಾರ ತೊಲಗಿಹೋಗಿರಲಿಲ್ಲವೆಂಬುದು. ಈಗಲೂ ಮನೆ ಕಳೆದುಕೊಂಡವರಿಗೆ ಪರಿಹಾರ ಪಡೆಯಲು ಅಗತ್ಯವಾದ ದಾಖಲೆಗಳನ್ನು ಸಂಬಂಧಪಟ್ಟ ಅಧಿಕಾರಿಗಳು ನೀಡುತ್ತಿಲ್ಲ; ಏಕೆಂದರೆ ಅವರು ಸಾಮಾನ್ಯರು, ಬಡವರು, ಕೆಲವೊಮ್ಮೆ ಅನಕ್ಷರಸ್ಥರು ಮತ್ತು ಪ್ರಭಾವಿ ರಾಜಕೀಯ ಪುಢಾರಿಗಳನ್ನು ತಿಳಿಯದವರು. ಅದೇ, ಸ್ವಲ್ಪ ಅನುಕೂಲಸ್ಥರು ಮನೆಗಳು ಬೀಳದಿದ್ದರೂ ಎಂಥದೋ ಸುಳ್ಳು ದಾಖಲೆ ಸೃಷ್ಟಿಸಿಕೊಂಡು ಪರಿಹಾರಕ್ಕಾಗಿ ಅರ್ಜಿ ಸಲ್ಲಿಸುತ್ತಿದ್ದಾರೆಂದು ತಿಳಿದುಬಂದಿದೆ. ರೋಸಿಹೋದ ಜನ ಏನು ಮಾಡಬೇಕು ? ತಪಸ್ಸಿಗೆ ತೆರಳಬೇಕೆ, ನಗರಗಳಿಗೆ ವಲಸೆ ಹೋಗಿ ಬೀದಿಬದಿಯಲ್ಲಿ ಜೀವಿಸಬೇಕೆ, ಯಾರನ್ನೋ ಓಲೈಸುತ್ತಾ ಕುಬ್ಜರಾಗಬೇಕೆ, ಸಿಟ್ಟಿನಿಂದ ಉಗ್ರಗಾಮಿಗಳಾಗಬೇಕೆ, ಅಥವಾ ಸಹಜವಾದ ಸಹನೆಯಿಂದ ಭಗವಂತ ಕೊಟ್ಟಿದ್ದು ಎನ್ನುತ್ತಾ ಜೀವ ಸವೆಸಬೇಕೆ ?

ಸಾಮಾನ್ಯ ಪುಢಾರಿಗಳಿರಲಿ, ಸ್ವತಃ ಮಂತ್ರಾಲಯದ 'ಯತಿವರ್ಯ' ಸುಯತೀಂದ್ರರು ಜನರಿಗೆ ನಿರಾಸೆಯಾಗುವಂತೆ ನಡೆದುಕೊಂಡರು ಮತ್ತು ಅದಕ್ಕೆ ಸರ್ಕಾರವು ಭಾಗಶಃ

(೬ನೇ ಪುಟಕ್ಕೆ)



ತಿಂಗಳ ಪತ್ರಿಕೆ

# ಹೊಸತು

ನಿಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೧೧ ಸಂಚಿಕೆ - ೪ ನವೆಂಬರ್ ೨೦೦೯

ಸಂಪಾದಕ

ಜಿ. ರಾಮಕೃಷ್ಣ

ಸಹಸಂಪಾದಕರು

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ಕೆ. ಎಸ್. ಪಾರ್ಥಸಾರಥಿ
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

ವ್ಯವಸ್ಥಾಪಕ

ಎ. ಆರ್. ಉಡುಪ

ಮುದ್ರಕ-ಪ್ರಕಾಶಕ

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

ಮುದ್ರಣ

ನವಕರ್ನಾಟಕ ಪ್ರಿಂಟರ್ಸ್
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦೦೫೮
ದೂರವಾಣಿ : ೨೮೩೯೭೮೫೩

ಹೊಸತು ಕಚೇರಿಯ ವಿಳಾಸ



ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೯೫
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೨೨೫೭೮೫೯೯, ೨೨೨೦೩೫೫೮
ಫ್ಯಾಕ್ಸ್ : ೨೨೫೭೮೫೨೨
e-mail : navakarnataka@dataone.in
hosathu@gmail.com
website : www.navakarnataka.com
http://navakarnataka.blogspot.com
http://hosathu.blogspot.com




# ಚಿದಂಬರಂ ಸಂಹಿತೆಯ ನಿಷ್ಫಲತೆ

ಇತ್ತೀಚೆಗೆ ರಾಂಚಿಯ ಬಳಿ ಪೊಲೀಸ್ ಇನ್‌ಸ್ಪೆಕ್ಟರ್ ಫ್ರಾನ್ಸಿಸ್ ಇಂದುವರ್ ಅವರನ್ನು ನಕ್ಸಲೀಯರು ಹತ್ಯೆ ಮಾಡಿದ್ದು ಅಸಭ್ಯ ನಡೆವಳಿಕೆ. ನಕ್ಸಲರ ನಾಯಕ ಕೋಬಾಡ್ ಘಾಂಡಿಯವರನ್ನು ಪೊಲೀಸರು ಬಿಡುಗಡೆ ಮಾಡದಿದ್ದುದಕ್ಕೆ ಪ್ರತೀಕಾರವಿದೆಂದು ಹೇಳಲಾಗಿದೆ. ಇಂತಹ ಕ್ರಮಗಳಿಂದ ಜನಹಿತವನ್ನು ಕಾಪಾಡಿದಂತಾಗುತ್ತದೆಯೇ ಎಂಬುದನ್ನು ಅರ್ಥಮಾಡಿಕೊಳ್ಳುವುದು ಅಗತ್ಯ. ''ನಕ್ಸಲೀಯರು ದೇಶದ ಆಂತರಿಕ ಜೀವನಕ್ಕೆ ಅತಿದೊಡ್ಡ ಆತಂಕವಾಗಿದ್ದಾರೆ'' ಎಂದು ಪ್ರಧಾನಿ ಸಿಂಗ್ ಹೇಳಿದ್ದಾರೆ. ಇದು ನಿಜ, ಏಕೆಂದರೆ ಸಿಂಗ್ ಸರ್ಕಾರವು ಅಸ್ತಿತ್ವದಲ್ಲಿರಲು ಯೋಗ್ಯವಲ್ಲವೆಂದು ನಕ್ಸಲೀಯರಲ್ಲದವರೂ ಭಾವಿಸಿರುವುದುಂಟು; ಅದನ್ನು ಕಿತ್ತೊಗೆಯಲು ಮಾಡಲಾಗುವ ಎಲ್ಲ ಯತ್ನಗಳನ್ನೂ ಸಿಂಗ್ ಆತಂಕವೆಂದೇ ಬಗೆಯುತ್ತಾರೆ. ನಕ್ಸಲೀಯರ ''ಅಟ್ಟಹಾಸ''ವನ್ನು ಖಂಡಿಸುತ್ತಾ ಕೇಂದ್ರ ಗೃಹಮಂತ್ರಿ ಪಿ. ಚಿದಂಬರಂ ಹೇಳಿದ್ದಿದು : ''ಚುನಾಯಿತ ಸರ್ಕಾರಗಳನ್ನು ನಕ್ಸಲೀಯರು ಬಂಡವಾಳಶಾಹಿಗಳೆಂದು ದೂಷಿಸುತ್ತಾರೆ. ಭೂ ಕಬಳಿಕೆ, ಗುಡ್ಡಗಾಡು ಜನರ ಶೋಷಣೆ ಮತ್ತು ಉಚ್ಚಾಟನೆ, ಕಾಡುಜನರ ಹಕ್ಕುಗಳನ್ನು ಕಸಿಯುವುದು, ಇತ್ಯಾದಿಗಳೆಲ್ಲಾ ಈ ಸರ್ಕಾರಗಳ ಚಾಳಿಯೆಂದು ಅವರು ಹೇಳುತ್ತಾರೆ. ಚುನಾವಣೆಗಳ ಮುಖಾಂತರ ಅಧಿಕಾರಕ್ಕೆ ಬರಲು ಅವರಿಗೆ ನಿರ್ಬಂಧ ಒಡ್ಡಿರುವವರು ಯಾರೂ ಇಲ್ಲ. ಅಧಿಕಾರಕ್ಕೆ ಬಂದು ಪ್ರಕೃತದ ನೀತಿಗಳನ್ನು ಬದಲಿಸಲಿ ಮತ್ತು ಜನರಿಗೆ ಲಾಭದಾಯಕವೆಂದು ಯಾವ ನೀತಿಯನ್ನವರು ಅಂಗೀಕರಿಸುತ್ತಾರೋ ಅದನ್ನು ಜಾರಿಗೆ ತರಲಿ. ಈ ಸವಾಲಿಗೆ ಅವರ ಉತ್ತರವಿಲ್ಲ, ಎಡ ಚಿಂತನೆಯ ಬುದ್ಧಿಜೀವಿಗಳಿಂದ ಇಲ್ಲ, ಮಾನವ ಹಕ್ಕುಗಳ ಗುಂಪಿನವರಿಂದಲೂ ಇಲ್ಲ. ನಕ್ಸಲೀಯರನ್ನು ಬೆಂಬಲಿಸುವವರು ಅವರ ಹಿಂಸಾತ್ಮಕ ದುಷ್ಕೃತ್ಯಗಳನ್ನು ಮರೆಯುತ್ತಾರೆ. ...ಮಾನವ ಹಕ್ಕುಗಳ ಪ್ರತಿಪಾದನೆ ಮಾಡುವ ಗುಂಪುಗಳು ಮೌನವಾಗೇಕಿವೆ ?''

ಬಹುತೇಕ ಮಾಧ್ಯಮಗಳಲ್ಲಿ ಇದೇ ರೀತಿಯ ಮಾತುಗಳ ಅಬ್ಬರದ ಪ್ರಚಾರವಿದೆ. ''ಹೊಸತು'' ನಕ್ಸಲೀಯರ ಬೆಂಬಲಕ್ಕೆ ನಿಂತಿಲ್ಲ; ಹಾಗೆಂದು ಸರ್ಕಾರವು ನಡೆಸುವ ಮಾನವ ಹಕ್ಕುಗಳ ಉಲ್ಲಂಘನೆಯನ್ನು ಕಣ್ಣುಮುಚ್ಚಿ ಮೆಚ್ಚಿಕೊಳ್ಳುವುದೂ ಇಲ್ಲ. ನಕ್ಸಲೀಯರು ಏಕೆ ಬಂದಿದ್ದಾರೆಂಬುದನ್ನು ರಾಹುಲ್ ಗಾಂಧಿ ಅಭಿವೃದ್ಧಿಯ ನಿಷ್ಫಲತೆಯ ನೆಲೆಯಲ್ಲಿ ವ್ಯಾಖ್ಯಾನಿಸಿದರೆ, ಚಿದಂಬರಂ ಕೇವಲ ಪೊಲೀಸ್ ಶಕ್ತಿಯ ಬಳಕೆಯಿಂದ ಅದನ್ನು ನಿಗ್ರಹಿಸುವುದಾಗಿ ಕೊಚ್ಚಿಕೊಳ್ಳುತ್ತಾರೆ. ಹಿರಿಯನನ್ನು ನಂಬಬೇಕೊ ಅಥವಾ ಯುವಕನನ್ನು ಬೆಂಬಲಿಸಬೇಕೊ ಎಂಬುದನ್ನು ಜನ ತೀರ್ಮಾನಿಸುತ್ತಾರೆ. ಅದಕ್ಕೆ ಚಿದಂಬರಂ ಅನುಮತಿ ಬೇಕಾಗಿಲ್ಲ. ಆತನ ಶುಷ್ಕ ತರ್ಕವು ಪ್ರಜಾಪ್ರಭುತ್ವವನ್ನು ಗಟ್ಟಿಗೊಳಿಸುವುದಿಲ್ಲ, ಏಕೆಂದರೆ ಅದು ಆಡಂಬರದ ಮಾತು. ನಾಲ್ಕುನೂರು ವರ್ಷಗಳಲ್ಲಿ ಈ ಮಾತನ್ನು ವಿಶ್ವದೆಲ್ಲೆಡೆ ನೂರಾರು ಬಾರಿ ಕೇಳಿದ್ದೇವೆ. ಕೇವಲ ಸ್ವರೂಪದಲ್ಲಿ ಪ್ರಜಾಪ್ರಭುತ್ವವಿದ್ದು, ನಿಜವಾದ ಹುರುಳು ಸೊನ್ನೆಯಾದರೆ ಅದನ್ನು ಪೂಜನೀಯ ಪ್ರಜಾಪ್ರಭುತ್ವವೆಂದು ಯಾರೂ ಭ್ರಮಿಸುವುದಿಲ್ಲ. ಚಿದಂಬರಂ ಚುನಾವಣೆಯ ಹಾದಿಯನ್ನು ಸೂಚಿಸಿದ್ದಾರೆ. ಯಾವ ನಕ್ಸಲೀಯನು ಸಾವಿರಕೋಟಿಗಳ ಸರದಾರರನ್ನು ಚುನಾವಣೆಯಲ್ಲಿ ಎದುರಿಸಲು ಸಾಧ್ಯ ? ಕಳೆದ ಚುನಾವಣೆಯ ಸಂದರ್ಭದಲ್ಲಿ ೨೦ ಕೋಟಿ ಇದ್ದವರು ಹಲವರು ಈಚಿನ ಚುನಾವಣೆಯ ವೇಳೆಗೆ ೪೦೦ ಕೋಟಿ ಆಸ್ತಿ ಘೋಷಿಸಿಕೊಂಡಿದ್ದಾರೆ. ಈ ಲೂಟಿ ಎಲ್ಲಿಂದ ಬಂತು, ಮಾನ್ಯ ಚಿದಂಬರಂ ತಂತ್ರಿಗಳೆ ? ತಂತ್ರಿಯೋ ಕಂತ್ರಿಯೋ ಏನೇ ಇರಲಿ, ಜನರ ಮನಸ್ಸನ್ನು ಗೆಲ್ಲಲು ನೈಜ ಪ್ರಜಾಪ್ರಭುತ್ವವಾದಿಗಳಿಗೆ ಅವಕಾಶ ಉಳಿದಿದೆಯೆ ? ಇತ್ತೀಚೆಗೆ ಪಿ. ಸಾಯಿನಾಥ್ ಲೆಕ್ಕಮಾಡಿ ಹೇಳಿದಂತೆ ಹರ್ಯಾಣ ರಾಜ್ಯದ ಶಾಸಕರಾಗಿದ್ದು ಮತ್ತೆ ಚುನಾವಣಾ ಕಣದಲ್ಲಿರುವ ೪೨ ಮಂದಿ ತಲಾ ಶೇಕಡ ೩೮೮ರಷ್ಟು ಆಸ್ತಿ ವೃದ್ಧಿಸಿಕೊಂಡಿರುವವರು. ಅವರು ಶಾಸಕರಾಗಿದ್ದಾಗ ಪ್ರತಿ ಒಂದು ಗಂಟೆಗೆ ಈ ಮಹನೀಯರು (!) ತಲಾ ೧೧೦೦ ರೂಪಾಯಿಗಳನ್ನು ಹೆಚ್ಚಿಸಿಕೊಂಡಿದ್ದಾರೆ. ಇದು ಹೇಗಾಯಿತು ? ಅಘೋಷಿತವಾಗಿ ಇನ್ನೂ ಎಷ್ಟಿದೆ ? ಎಲ್ಲ ರಾಜ್ಯಗಳ ಕತೆಯೂ ಸರಿಸುಮಾರು ಇದೇ ಆಗಿದೆ. ಆದರೂ ಚಿದಂಬರಂ ಯಾವ ಅಂಜಿಕೆಯೂ ಇಲ್ಲದೆ ಬಂಡವಾಳಶಾಹಿಯ ಸಮರ್ಥಕರಾಗಿದ್ದಾರೆ, ಮತ್ತು ಭೂಕಬಳಿಕೆ ಮುಂತಾದ ದುಷ್ಟನೀತಿಗಳನ್ನು ತಮ್ಮ ಸರ್ಕಾರದ ಅಂಗೀಕೃತ ಕಾರ್ಯಕ್ರಮವೆಂದು ಒಪ್ಪಿಕೊಂಡಿದ್ದಾರೆ. ಅವರು ಅವನ್ನೆಲ್ಲಾ ಖಂಡಿತ ಬದಲಿಸುವುದಿಲ್ಲವೆಂದು ಹೇಳಿ ಅಪ್ಪಟ ಜನವಿರೋಧಿ - ಪ್ರಜಾಪ್ರಭುತ್ವ ದ್ರೋಹಿಯಾಗಿ ತಮ್ಮನ್ನು ತೆರೆದಿಟ್ಟುಕೊಂಡಿದ್ದಾರೆ. ಇಲ್ಲದಿದ್ದರೂ ಅವರು ಯಾರ ಏಜೆಂಟರೆಂದು ಮೊದಲೇ ತಿಳಿದಿರಲಿಲ್ಲವೆಂದಲ್ಲ. ಭೂಕಬಳಿಕೆ, ಗುಡ್ಡಗಾಡು ಜನರ ಶೋಷಣೆ, ಕಾಡುಜನರ ಉಚ್ಚಾಟನೆ, ಗಣಿಸಂಪತ್ತಿನ ಲೂಟಿ, ಹೀಗೆ ಯಾವುದರ ವಿರುದ್ಧ ಹೋರಾಟ ನಡೆಸಿದರೂ ಚಿದಂಬರಂ ಕೂಟ ಅದನ್ನು ಬಗ್ಗುಬಡಿಯುತ್ತದೆ. ಭ್ರಷ್ಟಾಚಾರ ವಿರೋಧಿ ಆಂದೋಲನವನ್ನು ಸಹಿಸುವುದಿಲ್ಲ. ದೇವಾಧಿದೇವತೆಗಳನ್ನು ಮತ್ತು ಮಠಾಧಿಪತಿ-ಮುಲ್ಲಾ-ಪಾದ್ರಿಗಳನ್ನು ತನ್ನ ತೆಕ್ಕೆಗೆ ತೆಗೆದುಕೊಂಡು ಜನರನ್ನು ಅಶಕ್ತರನ್ನಾಗಿಸುತ್ತದೆ. ಶಿಕ್ಷಣವನ್ನು ತನ್ನ ಮೂಗಿನ ನೇರಕ್ಕೆ ನೀಡುತ್ತದೆ. ದೇಶದ ಸಂಪತ್ತನ್ನು ಹೇರಳವಾಗಿ ದೋಚಿದವರನ್ನು ಸನ್ಮಾನಿಸುತ್ತದೆ. ಚುನಾವಣೆಯ ಸಂದರ್ಭದಲ್ಲಿ ಹಣದ ಹುಚ್ಚುಹೊಳೆ ಹರಿಸುತ್ತದೆ. ಕಳೆದ ಬಾರಿ ಚಿಕ್ಕಬಳ್ಳಾಪುರ ಲೋಕಸಭಾ ಕ್ಷೇತ್ರವೊಂದರಲ್ಲೇ ಆಂಧ್ರದ ಮುಖ್ಯಮಂತ್ರಿ ದಿವಂಗತ ವೈ. ಎಸ್. ರಾಜಶೇಖರ ರೆಡ್ಡಿ ನೂರಾರು ಕೋಟಿಯನ್ನು ಚೆಲ್ಲಿದರೆಂದು ಕಾಂಗ್ರೆಸ್ ಮೂಲಗಳೇ ಹೇಳುತ್ತವೆ. ಇದು ಚಿದಂಬರಂ ಪ್ರಜಾಪ್ರಭುತ್ವ, ಕಳ್ಳಕಾಕರರ ದರ್ಪ, ಜನವಿರೋಧಿ ಆಡಳಿತ. ಕಾಂಗ್ರೆಸ್ ಮತ್ತು ಭಾರತೀಯ ಜನತಾ ಪಕ್ಷ ಈ ವಿಚಾರಗಳಲ್ಲಿ ಸಂಪೂರ್ಣ ಸಹಮತವಿರುವ ಪಕ್ಷಗಳಾಗಿವೆ. ಇಂತಹ ಸನ್ನಿವೇಶದಲ್ಲಿ ಚಿದಂಬರಂ ಒಲವಿನ ಬಂಡವಾಳಶಾಹಿಯನ್ನು ಉತ್ಪಾಟಿಸುವುದು ಹೇಗೆ, ಜನಮನವನ್ನು ಒಲಿಸಿಕೊಳ್ಳುವುದು ಹೇಗೆ, ಜನಸಮುದಾಯದ ಪ್ರಜ್ಞೆಯನ್ನು ಉತ್ಕರ್ಷದ ಹಾದಿಯಲ್ಲಿ ಕೊಂಡೊಯ್ಯುವುದು ಹೇಗೆ ಮತ್ತು ಅದನ್ನು ಯಾರು ಮಾಡಬೇಕು ?

ಅಂದರೆ, ನಕ್ಸಲೀಯರ ಉತ್ತರವೇ ಇದಕ್ಕೆ ಅಂತಿಮ ಉತ್ತರವೆಂದು ಅರ್ಥವಲ್ಲ. ಆಂತರಿಕ ಆಡಳಿತಕ್ಕೆ ಪ್ರಧಾನಿ ಹೇಳುವಂತೆ ನಕ್ಸಲೀಯರು ವಿಷಮ ಆತಂಕವೋ ಅಥವಾ ಎಲ್ಲರೂ ಮನಗಂಡಿರುವಂತೆ ಸಿಂಗ್ ಸರ್ಕಾರದ ನೀತಿಗಳು

ಅಂತಹ ವಿಷಮ ಆತಂಕಗಳೋ? ಇದಕ್ಕೆ ಚಿದಂಬರಂ-ಸಿಂಗ್-ಅದ್ವಾನಿ ಉತ್ತರ ಎಲ್ಲರಿಗೂ ಗೊತ್ತಿದೆ, ಆದರೆ ಅದು ಜನರಿಗೆ ಬೇಡವಾಗಿದೆ. ಅದು ಜನಸಮುದಾಯದ ಮರ್ದನದ ಸಾಧನವಾಗಿದೆ. ಕೇವಲ ಪೊಲೀಸ್ ಮತ್ತು ಮಿಲಿಟರಿ ಶಕ್ತಿಯಿಂದ ಭಾರತದ ಕೇಂದ್ರ ಸರ್ಕಾರ ಮತ್ತು ರಾಜ್ಯ ಸರ್ಕಾರಗಳು ಗೆದ್ದಿರುವುದೇನು? ಈಶಾನ್ಯ ರಾಜ್ಯಗಳಲ್ಲಿ ಅದಕ್ಕೆ ಉತ್ತರವಿದೆ, ಜಮ್ಮು-ಕಾಶ್ಮೀರದಲ್ಲಿ ಇದೆ. ಇಡೀ ದೇಶವನ್ನು ಮಣಿಪುರ ಮಾದರಿಗೆ ಮಾರ್ಪಡಿಸುವುದು ಸಿಂಗ್-ಚಿದಂಬರಂ ಉದ್ದೇಶವಾದರೆ ಅವರು ಅದರಲ್ಲಿ ಸಫಲರಾಗಿಬಿಡಬಹುದೆಂಬ ಭೀತಿ ನಮ್ಮದು. ಅದು ಪ್ರಜಾಪ್ರಭುತ್ವದ ಹಾದಿಯಲ್ಲ, ಅದು ದೇಶಕ್ಕೆ ಮತ್ತು ಜನತೆಗೆ ಮಾರಕವಾದದ್ದು. ಮಾರಕವಾದ ನಕ್ಸಲೀಯರಿಗೆ ಪರ್ಯಾಯವು ಚಿದಂಬರಂ-ಸಿಂಗ್ ಪ್ರೇರಿತ ಪೊಲೀಸ್- ಸೈನ್ಯಾಚರಣೆಗಳಲ್ಲ. ''ನಾವು ಮಾಡುವುದೇ ಹೀಗೆ, ನೀವು ಏನು ಬೇಕಾದರೂ ಮಾಡಿಕೊಳ್ಳಿ'' ಎಂಬರ್ಥದ ಮಾತುಗಳು ದೇಶದ ಜನತೆಗೆ ಮುಖದ ಮೇಲೆ ಹೊಡೆಯುವ ಮಾತುಗಳು. ಅವನ್ನು ಚಿದಂಬರಂ ಹೇಳಿದ್ದಾರೆ. ಇದಕ್ಕೆ 'ಛೀ!' ಎನ್ನುವುದು ಬಹಳ ಕನಿಷ್ಠ ಮಟ್ಟದ ಪ್ರತಿಕ್ರಿಯೆ. ಚಿದಂಬರಂ ಸಂಹಿತೆಯಿಂದ ನಕ್ಸಲೀಯರನ್ನು ''ಅಡಗಿಸಲು'' ಸಾಧ್ಯವಾಗಲಾರದು, ಬದಲಾಗಿ ಅವರಿಗೆ ಹೆಚ್ಚಿದ ''ಅಡಗುದಾಣಗಳು'' ಲಭಿಸುತ್ತಾ ಹೋಗುವ ಸಾಧ್ಯತೆ ಹೆಚ್ಚು. ನೆರೆಹಾವಳಿಯಲ್ಲಿ ಸಂತ್ರಸ್ತರಾದವರಿಗೆ ನೀಡುವ ಪರಿಹಾರ ಧನದಲ್ಲೂ ಪಾಲನ್ನು ಪಡೆಯುವ ಪಾತಕಿಗಳಿರುವ ದೇಶವನ್ನು ಕಂಡರೆ ಮರುಗಬೇಕೋ ಅಥವಾ ಚಿದಂಬರಂ ಹೇಳುವಂತೆ ಅದು ಬೇಡವೆನಿಸಿದರೆ ಪರ್ಯಾಯ ಅಧಿಕಾರ ಪಡೆಯುತ್ತೇವೆಂದು ಇನ್ನೊಂದು ಚುನಾವಣೆಯವರೆಗೆ ಕೈಕಟ್ಟಿ ಕಾಯುತ್ತಾ ಕೂರಬೇಕೋ? ಎರಡರಲ್ಲಿ ಯಾವುದನ್ನು ಒಪ್ಪಿದರೂ ''ಚಿದಂಬರಂ ಸಂಹಿತೆ''ಯ ಅಲ್ಪತನ ಸಾಬೀತಾಗದೆ ಉಳಿಯುವುದಿಲ್ಲ.

## ಕಾರ್ಮಿಕ ವರ್ಗ–ಆರ್ಥಿಕ ಮತ್ತು ಸಾಮಾಜಿಕ ಹೋರಾಟಗಳು

ಹರಿಯಾಣ ರಾಜ್ಯದಲ್ಲಿ ಎರಡು ಕಂಪನಿಗಳು ತಮ್ಮಲ್ಲಿ ಕೆಲಸ ಮಾಡುತ್ತಿರುವ ಕಾರ್ಮಿಕರು ಸಂಘವನ್ನು ಸ್ಥಾಪಿಸಿ, ಕಾನೂನಿನಡಿಯಲ್ಲಿ ನೋಂದಾಯಿಸಲು ಹೊರಟಾಗ ಅದನ್ನು ಸಹಿಸದೆ, ಅವರನ್ನು ಮಾನಸಿಕ ಹಿಂಸೆಗೆ ಗುರಿ ಮಾಡಿ ಹಲವಾರು ಕಾರ್ಮಿಕರನ್ನು ಅಮಾನತ್ತಿನಲ್ಲಿಟ್ಟಿದ್ದಾರೆ; ಈ ಪರಿಸ್ಥಿತಿಯನ್ನು ಭಾರತ ಕಮ್ಯುನಿಸ್ಟ್ ಪಕ್ಷದ ಲೋಕಸಭಾ ಸದಸ್ಯರಾದ ಗುರುದಾಸ್ ದಾಸ್‌ಗುಪ್ತರವರು ಪ್ರಧಾನಮಂತ್ರಿ ಮನಮೋಹನ್ ಸಿಂಗ್‌ರ ಗಮನಕ್ಕೆ ತಂದರೆಂದು ಇತ್ತೀಚಿನ ಪತ್ರಿಕಾ ವರದಿಯಿಂದ ತಿಳಿದುಬಂದಿದೆ. ಅಂದರೆ ಸಂವಿಧಾನಾತ್ಮಕವಾಗಿ ಸಂಘಟಿಸುವ ಹಕ್ಕು ಕಾರ್ಮಿಕರಿಗಿದ್ದರೂ ಅದನ್ನು ಚಲಾಯಿಸುವ ಸಾಹಸ ಮಾಡಿದಲ್ಲಿ ಅವರನ್ನು ತುಳಿಯುವ ಹಕ್ಕು ಸಂವಿಧಾನಾತ್ಮಕವಲ್ಲದಿದ್ದರೂ, ಅದು ಅವರ ಅಧಿಕಾರವೆಂದು ಮಾಲಿಕರ ಅಭಿಪ್ರಾಯ. ಸ್ವಯಂ ಪ್ರಾಪ್ತಿಸಿಕೊಂಡಿರುವ ಈ ಅಧಿಕಾರ ಕೇವಲ ಹರಿಯಾಣದ ಕಂಪನಿ ಮಾಲಿಕರಿಗೆ ಮಾತ್ರ ಸೀಮಿತವಾದದ್ದಲ್ಲ. ಇದು ಇಡೀ ಭಾರತದಲ್ಲಿರುವ ಪ್ರಜಾತಂತ್ರದ ಮಾದರಿ. ನಮ್ಮ ರಾಜ್ಯದಲ್ಲಿ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯ ಕಾರ್ಮಿಕ ನೀತಿಯೇನೂ ಖಾಸಗಿ ಮಾಲಿಕರದ್ದಕ್ಕಿಂತ ಭಿನ್ನವಾಗಿಲ್ಲ. ನಿಜ ಹೇಳಬೇಕೆಂದರೆ ಅವರನ್ನೂ ನಾಚಿಸುವಂತಹದ್ದು. ಈ ಸಾರ್ವಜನಿಕ ಸಂಸ್ಥೆಯು ಸಾವಿರಾರು ವಾಹನ ಚಾಲಕರನ್ನು ಮತ್ತು ನಿರ್ವಾಹಕರನ್ನು ದಿನಕ್ಕೆ ಅಂತರ ರಾಷ್ಟ್ರೀಯ ಕಾರ್ಮಿಕ ಮೇ ದಿನವೂ ಸೇರಿದಂತೆ, ಹನ್ನೆರಡರಿಂದ ಹದಿನಾಲ್ಕು ಗಂಟೆ ಕಾಲ ಅದಕ್ಕೆ ಯಾವ ಹೆಚ್ಚಿನ ವೇತನವನ್ನೂ ನೀಡದೆ ದುಡಿಸಿಕೊಳ್ಳುತ್ತಿದೆ. ಇಲ್ಲಿಯ ಎಲ್ಲ ನಿರ್ಧಾರವೂ ಏಕಪಕ್ಷೀಯ. ಇದರ ಬಗ್ಗೆ ದನಿ ಎತ್ತಿದರೆ ಕೆಲಸಕ್ಕೆ ಕುತ್ತು, ನಮ್ಮ ದೇಶದಲ್ಲಿರುವ ಪ್ರಜಾತಂತ್ರಕ್ಕೆ ಇದು ಇನ್ನೊಂದು ನಿದರ್ಶನ. ಇನ್ನು ಬ್ಯಾಂಕಿಂಗ್ ಉದ್ದಿಮೆಯಲ್ಲಿ ಕೆಲಸ ಮಾಡುತ್ತಿರುವ ಕಿರಿಯ ಅಧಿಕಾರಿಗಳ ಪಾಡಂತೂ ಶೋಚನೀಯ. ಇವರು ದಿನದ ೨೪ ಗಂಟೆಯೂ ಬ್ಯಾಂಕಿನ ಚಾಕರಿಗೆ ಮೀಸಲಿಟ್ಟವರು. ಇಂತಹ ನಿದರ್ಶನಗಳು ಯಥೇಚ್ಛ.

ಚುನಾವಣೆಯಲ್ಲಿ ಸ್ಪರ್ಧಿಸುವ ಹಕ್ಕು ಎಲ್ಲ ನಾಗರಿಕರಿಗೂ ಇದೆ. ಆದರೆ ವಸ್ತುಸ್ಥಿತ್ಯವೆಂದರೆ ಕೇವಲ ಹಣವಂತರು ಮಾತ್ರ ಚುನಾವಣೆಯಲ್ಲಿ ಸ್ಪರ್ಧಿಸಲು ಸಾಧ್ಯ. ಈ ರೀತಿ ಅನೇಕ ಹಕ್ಕುಗಳು ಕಾರ್ಮಿಕರಿಗೆ, ರೈತರಿಗೆ ಮತ್ತು ಜನಸಾಮಾನ್ಯರಿಗೆ ಕಾಗದದ ಮೇಲಿರುವ ಅಕ್ಷರಗಳಾಗಿವೆಯೇ ಹೊರತು ಚಲಾಯಿಸುವ ಹಕ್ಕುಗಳಾಗಿಲ್ಲ. ಚಲಾಯಿಸುವ ಸಾಹಸ ತೋರಿದವರ ಗತಿ ಗೋವಿಂದ. ದುರದೃಷ್ಟವೆಂದರೆ ಪ್ರಜಾತಂತ್ರದ ಈ ಮಾದರಿಯನ್ನು ''ಭಾರತ ಪ್ರಕಾಶಿಸುತ್ತಿದೆ'' ಎಂದು ಸಾರಿ ಕೊಂಡಾಡುವ ಲಾಲ್ ಕೃಷ್ಣ ಅದ್ವಾನಿ, ''ಜಯ್ ಹೋ'' ಎಂದು ಹಾಡುವ ಮನಮೋಹನ್ ಸಿಂಗ್ ಅವರಿಗೆ ಮತ್ತು ಆಳುವ ವರ್ಗಕ್ಕೆ ಇದನ್ನೇ ಮುಂದುವರೆಸಿಕೊಂಡು ಹೋಗುವ ಛಲ. ಈ ಮಾದರಿಯ ಪ್ರಜಾಪ್ರಭುತ್ವವನ್ನು ಗುಣವಾಚಕಗಳನ್ನು ಬಳಸಿ, ಅದಕ್ಕೊಂದು ಶ್ರೇಷ್ಠತೆಯನ್ನು ಕೊಟ್ಟು ಭ್ರಮೆ ಸೃಷ್ಟಿಸುವ ಹೊಗಳು ಭಟ್ಟರಿಗೇನೂ ಕೊರತೆಯಿಲ್ಲ.

ಇತ್ತೀಚಿನ ಅಂತರ ರಾಷ್ಟ್ರೀಯ ಸಂಸ್ಥೆಯ ವರದಿಯ ಪ್ರಕಾರ ಇಂದಿಗೆ ಪ್ರಪಂಚದಲ್ಲಿ ಸುಮಾರು ನೂರು ಕೋಟಿ ಜನರು ಹಸಿವಿನಿಂದ ನರಳುತ್ತಿದ್ದಾರೆ. ಭಾರತದಲ್ಲಿ ಇತ್ತೀಚಿನ ವರ್ಷಗಳಲ್ಲಿ ಸುಮಾರು ಮೂರು ಕೋಟಿ ಜನರು ಹಸಿದ ಜನರ ಪಟ್ಟಿಗೆ ಸೇರಿದ್ದಾರೆ. ಇದು ಆಹಾರದ ಕೊರತೆಯಿಂದ ಆದದ್ದಲ್ಲ, ಆಹಾರ ಜನರ ಕೈ ಸೇರುತ್ತಿಲ್ಲವೆಂದು ವರದಿ ತಿಳಿಸಿದೆ. ಏರುತ್ತಿರುವ ಬೆಲೆ ತೆತ್ತು ಆಹಾರ ಪದಾರ್ಥಗಳನ್ನು ಕೊಳ್ಳುವ ಶಕ್ತಿಯಿಲ್ಲದ ಜನಸಂಖ್ಯೆ ಏರುತ್ತಲಿದೆ. ರಾಜ್ಯಸಭಾ ಸದಸ್ಯ ಅರ್ಜುನ್ ಸೇನ್‌ಗುಪ್ತರ ನೇತೃತ್ವದ ಸಮಿತಿಯ ವರದಿಯ ಪ್ರಕಾರ ಭಾರತದ ೮೪ ಕೋಟಿ ಜನರು ದಿನಕ್ಕೆ ಇಪ್ಪತ್ತು

(ಪುಟ ೮ಕ್ಕೆ)

ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ



**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೫೦/- |
| ಮೂರು ವರ್ಷಕ್ಕೆ | ರೂ. ೩೫೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೧೦೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೮೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨

*ಈ ತಿಂಗಳು (ಪುಟ ೩ರಿಂದ)*

ಹೊಣೆಯಾಯಿತು. ಒಬ್ಬ ಸಚಿವೆ ಹಾರಿಹೋಗಿ ಅವರನ್ನು ಹೊತ್ತುತಂದರೆಂದು ವರದಿಯಾಗಿತ್ತು. ಆಂಧ್ರ ಸರ್ಕಾರ ಮಾಡಬೇಕಾದ್ದನ್ನು ಕರ್ನಾಟಕ ಸರ್ಕಾರ ಮಾಡಿದ್ದು ಸಹ ಪ್ರಶ್ನಾರ್ಹವಾದ್ದೇ. ಮಂತ್ರಾಲಯದ ಸ್ವಾಮಿಗಳು ತಮ್ಮ ಪರಿವಾರವನ್ನೆಲ್ಲಾ ನಡುನೀರಿನಲ್ಲಿ ಬಿಟ್ಟುಬರಲು ಹೇಗೆ ಮನಸ್ಸು ಮಾಡಿದರೋ ತಿಳಿಯದು, ಆದರೆ ಅಲ್ಲಿ ಉಳಿದವರು ಸ್ವಾಮಿಗಳಿಗೆ ಹಿಡಿಶಾಪ ಹಾಕಿದ್ದು ದೃಶ್ಯಮಾಧ್ಯಮಗಳಲ್ಲಿ ಪ್ರಸಾರವಾಯಿತು. ಪರಿವಾರದವರನ್ನು ಹೆಸರಿಗೆ ''ನಮ್ಮ ಮಕ್ಕಳು'' ಎನ್ನುವ ಹಿರಿಯ ತೀರ್ಥರು ಮಕ್ಕಳನ್ನು ಅಲ್ಲೇ ಬಿಟ್ಟು ಓಡಿದರಲ್ಲಾ, ಅದು ಯಾವ ತತ್ತ್ವದಲ್ಲಿ ಬೋಧಿಸಲಾಗಿತ್ತು? ಸಚಿವೆಯೊಬ್ಬರ ಸಹಾಯದಿಂದ ತಾವು ಪೀಠಸಮೇತ ಮಂತ್ರಾಲಯದಿಂದ ಪರಾರಿಯಾಗಬೇಕೆಂದು ಸ್ವಾಮಿಗಳಿಗೆ ಕನಸಿನಲ್ಲಿ ರಾಘವೇಂದ್ರ ಸ್ವಾಮಿಗಳು ಹೇಳಿದ್ದರೆ ? ರಾಘವೇಂದ್ರರು ಆಗಾಗ್ಗೆ ಕೆಲವು ಭಕ್ತರ ಕನಸಿನಲ್ಲಿ ಬಂದು ಮಾರ್ಗದರ್ಶನ ನೀಡುತ್ತಾರೆಂದು ಹೇಳುವುದನ್ನು ಕೇಳಿದ್ದೇವೆ. ಸ್ವತಃ ಅವರೇ ಕನಸು ಕಾಣುತ್ತಿದ್ದರೇನೋ, ಅದಕ್ಕೇ ಭಕ್ತರ ಕನಸಿನಲ್ಲಿ ಬಂದು ನೆರೆಯ ಪೂರ್ವ ಮಾಹಿತಿ ನೀಡಲಿಲ್ಲ! ರಾಘವೇಂದ್ರನು ಕನಸಿನಲ್ಲಿ ಹೇಳದಿದ್ದರೂ ಕೂಡಲೆ ಮುಖ್ಯಮಂತ್ರಿಗಳು ಸ್ವಾಮಿಗಳಿಗೆ ೧೦ ಕೋಟಿ ರೂಪಾಯಿ ಕೊಟ್ಟುಬಿಟ್ಟರು; ಆಮೇಲೆ ಅವೆನ್ಯೂ ರೋಡಿಗೆ ತೆರಳಿ ವ್ಯಾಪಾರಿಗಳಿಂದ ಚೆಕ್ಕುಗಳನ್ನು ಸ್ವೀಕರಿಸಿದರು. ಸಿನಿಮಾ ನಟ-ನಟಿಯರು ತಮ್ಮ ತಮ್ಮ ಹಣದಿಂದ ಎಷ್ಟನ್ನು ಪರಿಹಾರ ನಿಧಿಗೆ ನೀಡಿದರೋ ತಿಳಿಯದು, ಆದರೆ ಅವರೂ ರಸ್ತೆಗಿಳಿದು ಹಣ ಸಂಗ್ರಹಿಸಿದರು. ಎಷ್ಟೋ ಹನಿಗಳು ಸೇರಿ ಹಳ್ಳವಾಗುವಂತೆ ಇಲ್ಲಿ ಅನೇಕ ಹಳ್ಳಗಳು ಸೇರಿ ನೆರೆಪೀಡಿತ ಜನರಿಗೆ ಸಾಮರ್ಥ್ಯಕ್ಕೆ ತಕ್ಕಂತೆ ಆಸರೆ ನೀಡಿವೆ. ಸ್ವತಃ ಮಂತ್ರಾಲಯದ ಸ್ವಾಮಿಗಳೇ ಪರಿಹಾರ ನಿಧಿ ಸಂಗ್ರಹಿಸುತ್ತಿದ್ದಾರಂತೆ. ಇನ್‌ಫೋಸಿಸ್ ಕಂಪನಿಯ ಸುಧಾಮೂರ್ತಿಯವರು ಈ ನಿಧಿಗೆ ಅರ್ಧ ಕೋಟಿ ರೂಪಾಯಿ ತುಂಬಿಸಿದ್ದಾರೆ. ಮಠವನ್ನು ನಿಧಾನವಾಗಿ ರಿಪೇರಿ ಮಾಡಿದರೆ ತೊಂದರೆಯಿಲ್ಲ, ಸ್ವಾಮಿಗಳು ತಾವು ಸಂಗ್ರಹಿಸುವ ಹಣವನ್ನು ಕೂಡ ಜನಸಾಮಾನ್ಯರ ತಕ್ಷಣದ ಅಗತ್ಯಗಳ ಪೂರೈಕೆಗಾಗಿ ಬಳಸಲೆಂದು ಆಶಿಸೋಣ.

* * *

ಈ ತಿಂಗಳಲ್ಲಿ ಇನ್ನೊಬ್ಬ ಸ್ವಾಮಿಗಳು ನಮ್ಮ ರಾಜ್ಯದ ಮಂತ್ರಿಗಳಿಗೆ ಅದ್ದೂರಿ ಆತಿಥ್ಯ ನೀಡಿದರು. ಅದಕ್ಕೆ ಪ್ರತಿಯಾಗಿ ಮುಂದೆ ಏನೇನನ್ನು ಪಡೆದುಕೊಳ್ಳುತ್ತಾರೋ ಅದು ನಮಗೆ ತಿಳಿಯುವುದಿಲ್ಲ. ದೇಶವನ್ನೆಲ್ಲ ಸುತ್ತಿ ಸುಸ್ತಾದ ನಮ್ಮ ಸಚಿವರೆಲ್ಲಾ ಸುತ್ತೂರಿಗೆ ತೆರಳಿ ಮಿದುಳನ್ನು ಸ್ವಲ್ಪ ತೊಳೆದುಕೊಳ್ಳಲು ಕಸರತ್ತು ಮಾಡಿದರೆಂದು ಹೇಳುತ್ತಾರೆ. ತಲೆ ಕೆಳಗೆ ಮಾಡಿ ಕಾಲೆತ್ತಿದ್ದ ಸಚಿವರ ಛಾಯಾಚಿತ್ರಗಳು ಕೆಲವು ಪತ್ರಿಕೆಗಳ ಪುಟಗಳನ್ನು ಅಲಂಕರಿಸಿದ್ದವು. ಖರ್ಚೆಲ್ಲಾ ಭಾರತೀಯ ಜನತಾ ಪಕ್ಷದ್ದು ಎಂದು ಹೇಳಲಾಗಿತ್ತು, ಆದರೆ ಎಲ್ಲ ಖರ್ಚನ್ನು ಸುತ್ತೂರು ಸ್ವಾಮಿಗಳೇ ಭರಿಸಿದರೆಂದು ಅಧಿಕೃತ ಮೂಲಗಳು ಹೇಳಿವೆ. ಆಶೀರ್ವಾದದ ಜೊತೆ ಆತಿಥ್ಯವನ್ನು ಸ್ವೀಕರಿಸುವುದು ಮಾನ್ಯ ಯಡಿಯೂರಪ್ಪನವರ ಪರಿವಾರಕ್ಕೆ ಮುಜುಗರವನ್ನೇನೂ ತರುವುದಿಲ್ಲ; ಏಕೆಂದರೆ, ಮುಂಚೆ ಮತ್ತು ಆಮೇಲೆ ಸಾರ್ವಜನಿಕ ಬೊಕ್ಕಸದ ಹಣವನ್ನು ಸ್ವಾಮಿಗಳಿಗೆ ಮುಟ್ಟಿಸುವುದು ಯಡಿಯೂರಪ್ಪನವರ ಅಪ್ರಬುದ್ಧ ಸಂಪ್ರದಾಯ. ಭಾರತೀಯ ಜನತಾ ಪಕ್ಷ ಮತ್ತು ಕರ್ನಾಟಕ ಸರ್ಕಾರ ಎರಡೂ ಸೇರಿ ಒಂದು ಘಟಕವೆಂಬಂತೆ ಇವರು ಸರ್ಕಾರ ನಡೆಸುತ್ತಿರುವುದು ಪ್ರಜಾಪ್ರಭುತ್ವದ ಪ್ರಾಥಮಿಕ ಸೂತ್ರಗಳಿಗೆ ಹೊರತಾದುದು. ಪ್ರಜಾಪ್ರಭುತ್ವವು ಗೌಣವಾದಾಗ ಫ್ಯಾಸಿಸಂ ಬೆಳೆಯುತ್ತದೆ. ಅದರ ಪ್ರಕ್ರಿಯೆಗೆ ಯಡಿಯೂರಪ್ಪನವರು ಚಾಲನೆ ನೀಡಿರುವುದು ಸರ್ವಥಾ ಅನುಚಿತ. ಸುತ್ತೂರು ಮಠದಲ್ಲಿ ಅರುಣ್ ಜೈಟ್ಲಿ ಏನು ಬೋಧಿಸಿದರು, ಅವರ ವಿಮಾನದ ಹಾರಾಟಕ್ಕೆ ಹಣ ಯಾರು ಕೊಟ್ಟರು, ಮುಂತಾದ ಪ್ರಶ್ನೆಗಳನ್ನು ಕೆದಕುವುದು ಬೇಡ. ಅದನ್ನು ಸುತ್ತೂರು ಸ್ವಾಮಿಗಳೇ ಭರಿಸಿರಬಹುದೇನೋ!

* * *

ಸುತ್ತೂರು ಸ್ವಾಮಿಗಳು ಏನನ್ನೋ ಮಾಡಿ ಭಾರತೀಯ ಜನತಾ ಪಕ್ಷದ ಮತ್ತು ತನ್ಮೂಲಕ ಸರ್ಕಾರದ ಮನ್ನಣೆ ಪಡೆಯುತ್ತಾರೆ. ಇದೇನೂ ಹೊಸ ವಿಷಯವಲ್ಲ. ಹೊಚ್ಚಹೊಸ ವಿಷಯವೇನೆಂದರೆ ಅಮೆರಿಕಾದ ಅಧ್ಯಕ್ಷ ಒಬಾಮಾ ಏನನ್ನೂ ಮಾಡದೆಯೇ ನೊಬೆಲ್ ಶಾಂತಿ ಪುರಸ್ಕಾರ ಪಡೆದುಬಿಟ್ಟಿದ್ದಾರೆ. ''ನಾಳೆ ಇರಾನಿನ ಆಕ್ರಮಣ ಮಾಡಬೇಡ'' ಎಂದು ತಿಳಿಸಲು ಒಬಾಮಾಗೆ ಶಾಂತಿ ಪ್ರಶಸ್ತಿ ನೀಡಲು ಸ್ಟಾಕ್‌ಹೋಮ್ ಸಮಿತಿ ತೀರ್ಮಾನಿಸಿತೆ ? ಆಫ್ಘಾನಿಸ್ತಾನ ಮತ್ತು ಇರಾಕಿನಲ್ಲಿ ಕೊಲ್ಲುವ ಕೆಲಸ ನಿಲ್ಲಿಸಿ ಮನೆಗೆ ಹೋದರೆ ಇನ್ನೊಂದು ನೊಬೆಲ್ ಪ್ರಶಸ್ತಿ ನೀಡಲಡ್ಡಿಯಿಲ್ಲ. ನ್ಯಾಟೋ ಮಿಲಿಟರಿ ತುಕಡಿಗಳನ್ನು ಆಫ್ಘಾನಿಸ್ತಾನದಲ್ಲಿ ಮಣಿಸುತ್ತಿರುವವರು ತೀವ್ರಗಾಮಿಗಳು, ತಾಲಿಬಾನರು, ದೇಶವಿರೋಧಿಗಳು ಎಂದು ಏನೇನನ್ನೋ ನಾವು ವರದಿಗಳನ್ನು ನೋಡುತ್ತಿದ್ದೇವೆ. ಅವರೆಲ್ಲಾ ಏನೇ ಆಗಿರಲಿ, ನ್ಯಾಟೋ ಅಲ್ಲಿ ಏಕಿರಬೇಕು, ಜನ ಅದನ್ನೇಕೆ ಸಹಿಸಬೇಕು ? ಆಕ್ರಮಣಕಾರರಿಗೆ ಪ್ರಶ್ನೆ ಹಾಕದೆ ಸಹಕಾರ ನೀಡುವುದು ದೇಶಭಕ್ತಿಯೆಂದು ಎಂದಿನಿಂದ ಗಣನೆಗೆ ಬಂದಿತು ? ಆಕ್ರಮಣಕಾರರನ್ನು ಹೊಡೆದೋಡಿಸಲು ಯತ್ನಿಸುವುದು ಭಯೋತ್ಪಾದನೆ ಎನಿಸಿಕೊಳ್ಳುತ್ತದೆಯೆ ? ಅಮೆರಿಕಾಕ್ಕೆ ಸಹಾಯಕವಾಗುವಂತಹ ಅನಗತ್ಯ ಕ್ರಮಗಳನ್ನು ತೆಗೆದುಕೊಳ್ಳುತ್ತಿರುವುದು ಆಫ್ಘಾನಿಸ್ತಾನದಲ್ಲಿ ಭಾರತದ ಮೇಲಿನ ಸಿಟ್ಟಿಗೆ, ಕ್ರೌರ್ಯಕ್ಕೆ, ಕಾರಣವಿರಬಹುದೆ ? ಒಬಾಮಾ ಯಾವತ್ತು ಒಸಾಮನನ್ನು ಹಿಡಿಯುತ್ತಾನೋ ತಿಳಿಯದು. ಅಲ್ಲಿಯವರೆಗೂ ಆಫ್ಘನರ ಹತ್ಯೆ ನಡೆಯುತ್ತಲೇ ಇರಬೇಕು, ಅದಕ್ಕಾಗಿ ಒಬಾಮಾನಿಗೆ ನೊಬೆಲ್ ಪ್ರಶಸ್ತಿ ನೀಡಬೇಕು !

ಇದೆಲ್ಲಾ ಭಾಗಶಃ ನಿಜವಾದರೂ ಆತನು ನೀಡುತ್ತಿರುವ ಭರವಸೆಗಳನ್ನು ಈಡೇರಿಸಲು ಕ್ರಮಗಳನ್ನು ಕೈಗೊಂಡರೆ ನೊಬೆಲ್ ಸಮಿತಿಯ ದೂರದರ್ಶಿತ್ವವನ್ನು ಮೆಚ್ಚಬಹುದು.

* * *

ಒಬಾಮರ ನೊಬೆಲ್ ಪ್ರಶಸ್ತಿಗಿಂತಲೂ ನಮ್ಮ ದೇಶದಲ್ಲಿ ''ವೆಂಕಿ'' ಪಡೆದ ನೊಬೆಲ್ ಪಾರಿತೋಷಕದ ಬಗ್ಗೆ ಹುಮ್ಮಸ್ಸು ಮೂಡಿದೆ. ಅದು ಸಹಜವೂ ಹೌದು. ಆದರೆ ನೊಬೆಲ್ ಪ್ರಶಸ್ತಿ ಪಡೆದ ಭಾರತ ಸಂಜಾತ ವಿಜ್ಞಾನಿಗಳೆಲ್ಲಾ ವಿದೇಶಕ್ಕೆ ಹೋಗಿಯೇ ಅದನ್ನು ಸಾಧಿಸಿದ್ದಾರಲ್ಲಾ (ಡಾ॥ ಸಿ. ವಿ. ರಾಮನ್ ಅವರನ್ನು ಬಿಟ್ಟು) ಏಕೆ ? ಭಾರತದಲ್ಲೇ ಇದ್ದುಕೊಂಡು ವೈಜ್ಞಾನಿಕ ಸಂಶೋಧನೆಗಳಲ್ಲಿ ಅಗ್ರಗಣ್ಯರೆನಿಸಿಕೊಂಡಿರುವ ಭಾರತೀಯ ವಿಜ್ಞಾನಿಗಳು ಉತ್ತರ ಧ್ರುವದ ಸನಿಹದಲ್ಲಿರುವ ನೊಬೆಲ್ ಸಮಿತಿಗೆ ಕಾಣುವುದಿಲ್ಲವೇಕೆ ? ನೊಬೆಲ್ ಪ್ರಶಸ್ತಿ ಪಡೆಯಲೆಂದಾದರೂ ಅಂತಹ ಶ್ರೇಷ್ಠ ವಿಜ್ಞಾನಿಗಳೆಲ್ಲಾ ಅಮೆರಿಕಾಕ್ಕೆ ಬರಲೆಂಬ ಗೂಢ ಆಶಯವೇನಾದರೂ ಕೆಲಸ ಮಾಡುತ್ತಿರಬಹುದೆ ? ಅದಿರಲಿ, ''ವೆಂಕಿ'' ಅವರನ್ನು ವೈಯಕ್ತಿಕವಾಗಿ ಬಲ್ಲ ಪ್ರೊ॥ ಎಂ.ಆರ್.ಎನ್. ಮೂರ್ತಿಯವರು ಪ್ರಸ್ತುತ ಸಂಚಿಕೆಯಲ್ಲಿ ವೆಂಕಿಯವರ ಸಂಶೋಧನೆ ಬಗ್ಗೆ ಬರೆದಿದ್ದಾರೆ. ಅವರಿಗೆ 'ಹೊಸತು' ಆಭಾರಿಯಾಗಿದೆ.

* * *

ಶಶಿ ತರೂರ್ ಎಂಬ ವ್ಯಕ್ತಿ ಕೇಂದ್ರದ ಸಚಿವರಾಗಿ ನೇಮಕಗೊಂಡಾಗ ಆತ ''ನಮ್ಮ ಸರ್ಕಾರದಲ್ಲಿ ಅಮೆರಿಕಾದ ಪ್ರತಿನಿಧಿ'' ಎಂಬರ್ಥ ಬರುವ ಮಾತನ್ನು ದಾಖಲಿಸಲಾಗಿತ್ತು. ಅದಕ್ಕೆ ಹತ್ತಾರು ಪುರಾವೆಗಳು ದೊರೆತಿವೆ. ಅವರಾಡಿದ ಮಾತುಗಳನ್ನು ಬೇರೆ ಯಾರಾದರೂ ಆಡಿದ್ದರೆ ಸಚಿವರಾಗಿ ಮುಂದುವರಿಯಲು ಸಾಧ್ಯವೇ ಇರುತ್ತಿರಲಿಲ್ಲ. ಹೊರಗಿನ ಒತ್ತಡ ಬಲವಾಗಿರುವುದರಿಂದ ತರೂರು ಮಹಾಶಯನನ್ನು ಅಟ್ಟದೆ ಇಟ್ಟುಕೊಳ್ಳಲಾಗಿದೆ. ಸ್ವಂತ ಖರ್ಚಿನಲ್ಲಿ (ಎಸ್. ಎಂ. ಕೃಷ್ಣ ಅವರಂತೆ) ಪಂಚತಾರಾ ಹೋಟೇಲಿನಲ್ಲಿ ಉಳಿದುಕೊಂಡಿದ್ದ ಈತನಿಗೆ ಜನಸಂದಣಿ ಕಂಡರಾಗುವುದಿಲ್ಲವಂತೆ. ಅದು ಸಾಮಾನ್ಯ ಜನರ ಬಗ್ಗೆ ಆತನ ಪ್ರೀತಿಯ ಸಂಕೇತ! ಪಂಚತಾರಾ ಜನರನ್ನು ಕಂಡರೆ ಅಪ್ಪಿಕೊಳ್ಳುವ ಈತ ಸಾರ್ವಜನಿಕ ಕೆಲಸಕ್ಕೇಕೆ ಬಂದನೋ ಕಾಣೆವು. ಬಹುಶಃ ಮುಖ್ಯವಾದ ಸಂಗತಿಗಳನ್ನು ಅಮೆರಿಕಾಕ್ಕೆ ತಿಳಿಸುವುದೊಂದೇ ಆತನ ''ಜವಾಬ್ದಾರಿ'' ಇರಬೇಕು. ಪ್ರಣವ ಮುಖರ್ಜಿ ಸಲಹೆಗಳನ್ನು ಆತ ಹಸು, ಕುರಿ, ಇತ್ಯಾದಿಗಳನ್ನು ಉದಾಹರಿಸಿ ಲೇವಡಿ ಮಾಡಿದ್ದಾನೆಂದರೆ ಅಗಾಧ ಧೈರ್ಯಶಾಲಿಯೇ ಇರಬೇಕು! ತಿರುವನಂತಪುರ ಕ್ಷೇತ್ರದಿಂದ ಈತನನ್ನು ಲೋಕಸಭೆಗೆ ಚುನಾಯಿಸಿದ ಮತದಾರರು ಧನ್ಯತೆಯ ಭಾವ ಅನುಭವಿಸುತ್ತಿರಬಹುದು !!

* * *

ರಕ್ಷಣಾ ಸಚಿವಾಲಯಕ್ಕೆ ಸೇರಿದ ಸಂಶೋಧನಾ ವಿಭಾಗದಲ್ಲಿ ವಿಜ್ಞಾನಿಯಾಗಿ ಖ್ಯಾತಿ ಗಳಿಸಿದ ಶ್ರೀ ಕೆ. ಸಂತಾನಂ ಎರಡನೆಯ ಪರಮಾಣು ಸ್ಫೋಟದ ಬಗ್ಗೆ ತಕರಾರೆತ್ತಿ ಒಂದು ಬಾಂಬನ್ನು ಸಿಡಿಸಿದ್ದಾರೆ. ಹಿಂದಿನ ಮತ್ತು ಇಂದಿನ ಅನೇಕ ದೊಡ್ಡ ವಿಜ್ಞಾನಿಗಳು ಹಾಗೂ ಆಡಳಿತಗಾರರು ಸಂತಾನಂ ಅವರು ಸ್ಫೋಟದ ಬಗ್ಗೆ ತಪ್ಪು ಮಾಹಿತಿ ನೀಡುತ್ತಿದ್ದಾರೆಂದು ಅವರನ್ನು ಅಲ್ಲಗಳೆದಿದ್ದಾರೆ, ಜರಿದಿದ್ದಾರೆ. ಮಾಜಿ ರಾಷ್ಟ್ರಾಧ್ಯಕ್ಷ ಕಲಾಂಗೆ ಪರಮಾಣು ವಿಜ್ಞಾನದ ಅ-ಆ-ಇ-ಈ ಗೊತ್ತಿಲ್ಲದಿರುವುದರಿಂದ ತೆಪ್ಪಗಿದ್ದರೆ ಒಳಿತೆಂದು ಅವರ ಬಗ್ಗೆ ಸೇಥ್ನಾ ಎಂಬುವರು ಲೇವಡಿ ಮಾಡಿದ್ದಾರೆ. ಸಂತಾನಂ ಅಭಿಪ್ರಾಯದಲ್ಲಿ ಎರಡನೆಯ ಪೋಖ್ರಾನ್ ಪರಮಾಣು ಸ್ಫೋಟ ಠುಸ್ಸೆಂದಿತ್ತು, ಆದರೆ ಅದನ್ನು ಮುಚ್ಚಿಟ್ಟು ಸುಳ್ಳು ಪ್ರಚಾರ

ಮಾಡಲಾಗಿತ್ತು. ಹಾಗೇನೂ ಇಲ್ಲವೆಂದು ಇಂದಿನ ಪರಮಾಣು ಶಕ್ತಿ ವಿಭಾಗದ ಅಧ್ಯಕ್ಷರು ಹೇಳಿದ್ದಾರೆ. ಅದು ಠುಸ್ಸೆಂದಿದ್ದರೆ ಪ್ರಮಾದವೇನೂ ಇಲ್ಲ, ಏಕೆಂದರೆ ನಮ್ಮ ದೇಶವು ಜಲಜನಕ ಬಾಂಬನ್ನು ತಯಾರಿಸಿ ಬಲಯುತವಾಗುವುದಿಲ್ಲ, ನೆರೆರಾಷ್ಟ್ರಗಳವರನ್ನು ಮಣಿಸುವುದಿಲ್ಲ. ಪರಮಾಣು ಬಾಂಬು ಸ್ವಯಂ ರಕ್ಷಣೆಗೆ ಆಯುಧವಲ್ಲ. ಅದಕ್ಕಾಗಿ ಹಣ ದುರ್ವ್ಯಯ ಮಾಡುವುದು ಅನಗತ್ಯ ಶಸ್ತ್ರಾಸ್ತ್ರ ಪೈಪೋಟಿಗೆ ಕಾರಣವಾಗುತ್ತದೆ. ಯಾವುದೇ ನೆರೆರಾಷ್ಟ್ರದ ಮೇಲೆ ಬಾಂಬು ಸಿಡಿಸಿದರೂ ಅದರ ಪರಿಣಾಮ ನಮ್ಮ ದೇಶದ ಗಡಿಭಾಗಗಳಲ್ಲೆಲ್ಲಾ ವ್ಯಾಪಿಸಿರುತ್ತದೆ. ಅಲ್ಲದೆ, ಬಾಂಬಿನಂತಹ ಮಾರಕಾಸ್ತ್ರಗಳನ್ನು ಶೇಖರಿಸಿಕೊಳ್ಳುವುದು ರಾಜ್ಯನೀತಿಗೆ ಶ್ರೇಯಸ್ಕರವಲ್ಲ. ಯಾವ ದೇಶದ ಮೇಲೂ ನಾವೇ ಮೊದಲು ಬಾಂಬು ಹಾಕುವುದಿಲ್ಲವೆಂದು ಆಶ್ವಾಸನೆ ಕೊಟ್ಟಿರುವ ನಮ್ಮ ದೇಶ ಪರಮಾಣು ಅಸ್ತ್ರಗಳ ಆಕ್ರಮಣವನ್ನು ಪ್ರಚೋದಿಸುವುದು ಅಥವಾ ನಿರೀಕ್ಷಿಸುವುದು ಸಲ್ಲದು. ಅಮೆರಿಕಾದಂತಹ ಬರ್ಬರ ದೇಶವೊಂದೇ ಈವರೆಗೆ ಪರಮಾಣು ಅಸ್ತ್ರದಿಂದ ಧಾಳಿ ಮಾಡಿ ಲಕ್ಷಾಂತರ ಮಂದಿಯನ್ನು ಹತ್ಯೆಗೈದಿರುವುದು. ಆ ಪರಂಪರೆಗೆ ನಮ್ಮ ದೇಶವು ಸೇರುವುದು ಬೇಡ. ಆದರೆ ಸಂತಾನಂ ಅವರು ಹಿಂದಿನ ಕತೆಯನ್ನು ಈಗ ಬಿಚ್ಚಿಡುತ್ತಿರುವುದು ಮತ್ತೆ ಪರಮಾಣು ಅಸ್ತ್ರದ ಪರೀಕ್ಷೆ ಮುಂದುವರಿಸುವುದಕ್ಕೆ ಆದ್ಯತೆ ನೀಡಬೇಕೆಂದು ಒತ್ತಾಯಿಸುವದಕ್ಕೋಸ್ಕರವೇ ಆಗಿದೆ. ಅವರು ನೇರವಾಗಿ ಅದನ್ನು ಹೇಳಿಯೂ ಇದ್ದಾರೆ. ವಾಜಪೇಯಿ ಸರ್ಕಾರದ ಅವಧಿಯಲ್ಲಿ ನಡೆಸಲಾದ ಎರಡನೆಯ ಪೋಖ್ರಾನ್ ಪರೀಕ್ಷೆಯ ಬಗ್ಗೆ ಸಂತಾನಂ ಸುಳ್ಳು ಮಾಹಿತಿ ನೀಡುತ್ತಿದ್ದಾರೆ ಎಂದು ಇದರರ್ಥವಲ್ಲ. ಅವರು ಹೇಳುತ್ತಿರುವುದು ನೂರಕ್ಕೆ ನೂರರಷ್ಟು ಸತ್ಯ; ಅಪ್ಪಟ ಸುಳ್ಳು ಹೇಳಿದ್ದು ವಾಜಪೇಯಿ ಸರ್ಕಾರ ಮತ್ತು ಅಂದಿನ ವಿಜ್ಞಾನಿಗಳ ಮುಖಂಡರು.

ಸಮಗ್ರ ಪರಮಾಣು ಅಸ್ತ್ರ ಪರೀಕ್ಷಾ ನಿಷೇಧದ ಒಪ್ಪಂದಕ್ಕೆ ಭಾರತ ಸಹಿ ಹಾಕದಿರುವುದು ಸಮಂಜಸ ಕ್ರಮ. ಅಮೆರಿಕಾ, ಬ್ರಿಟನ್, ಫ್ರಾನ್ಸ್, ರಷ್ಯಾ, ಚೀನಾ ಅಣ್ವಸ್ತ್ರಗಳನ್ನಿಟ್ಟುಕೊಂಡು ಬೇರೆಯವರಿಗೆ ಅದು ಕೂಡದೆಂದು ಆಗ್ರಹಿಸುತ್ತಿವೆ. ಭಾರತ ಸಂಪೂರ್ಣ ಅಣ್ವಸ್ತ್ರ ನಿಶ್ಶಸ್ತ್ರೀಕರಣಕ್ಕೆ ಬದ್ಧವಾಗಿರುವುದರಿಂದ ಐದು ಪ್ರಭಾವಿ ರಾಷ್ಟ್ರಗಳ ಯಜಮಾನಿಕೆಯನ್ನು ಒಪ್ಪದಿರುವುದು ಸರಿ ಮತ್ತು ಅದು ನಮ್ಮ ಹಕ್ಕು. ಅಣ್ವಸ್ತ್ರಗಳ ನಿರ್ಮಾಣಕ್ಕೆ ಭಾರತವು ಬೇರೆ ಯಾವ ದೇಶಗಳಿಗೂ ತಂತ್ರಜ್ಞಾನವನ್ನು ಹಸ್ತಾಂತರಿಸುತ್ತಿಲ್ಲ. ಹಸ್ತಾಂತರ ಮಾಡುವುದಿಲ್ಲವೆಂಬ ಕರಾರನ್ನು ಬೇರೆ ಯಾರೂ ನಮ್ಮ ದೇಶದ ಮೇಲೆ ಹೇರಲು ಅವಕಾಶ ಕೂಡದು. ಇಸ್ರೇಲಿಗೆ ತಂತ್ರಜ್ಞಾನವನ್ನು ಗುಟ್ಟಾಗಿ ಹಸ್ತಾಂತರಿಸಿದ ಅಮೆರಿಕಾ ಇದರಲ್ಲೂ ದೊಡ್ಡಣ್ಣನ ಪಾತ್ರ ವಹಿಸಲು ಹೊರಟಿದೆ. ಎಲ್ಲ ದೇಶಗಳೂ ಸಮಾನವಾಗಿ ನಿಶ್ಶಸ್ತ್ರೀಕರಣಕ್ಕೆ ಕಾರ್ಯಕ್ರಮ ರೂಪಿಸಬೇಕೆಂದು ಹಲವು ದಶಕಗಳಿಂದ ನಿಷ್ಠೆಯಿಂದ ಪ್ರತಿಪಾದಿಸುತ್ತಾ ಬಂದಿರುವ ಭಾರತವು ಸಂತಾನಂ ಆಗ್ರಹಕ್ಕೆ ಸೊಪ್ಪುಹಾಕಬಾರದು, ಆದರೆ ದೇಶದಿಂದ ಬಚ್ಚಿಡಲಾಗಿದ್ದ ಸತ್ಯವನ್ನು ಬಹಿರಂಗಗೊಳಿಸಿದ ಅವರು ಅಭಿನಂದನಾರ್ಹರು.

* * *

ಕರ್ನಾಟಕ ಉಚ್ಚ ನ್ಯಾಯಾಲಯದ ಮುಖ್ಯ ನ್ಯಾಯಮೂರ್ತಿ ಶ್ರೀ ದಿನಕರನ್ 'ಹೊಸತು'ವಿನ ಈ ಸಂಚಿಕೆಯು ಓದುಗರನ್ನು ತಲುಪುವ ವೇಳೆಗೆ ಪದವಿಯಿಂದ ನಿರ್ಗಮಿಸಿರುತ್ತಾರೆಂಬ ಆಶಾಭಾವನೆ ನಮ್ಮದು. ಎಲ್ಲರನ್ನೂ ನಿರಾಶರನ್ನಾಗಿಸಲು ಅವರಿಗೆ ಸಾಧ್ಯವಿದೆ, ಅವರದನ್ನು ಮಾಡಿಯೂ ಮಾಡಬಹುದು. ತಿರುತ್ತಣಿಯ ಜಿಲ್ಲಾಧಿಕಾರಿ ನೀಡಿರುವ ವರದಿಯ ನಂತರ ಅವರೇನು ಮಾಡಿದರೂ ಅಳಿಸಲಾರದ ಕಪ್ಪುಚುಕ್ಕೆ ಅವರಿಗೆ ಸದಾ ಅಂಟಿಕೊಂಡಿರುತ್ತದೆ. ಹೀಗಿರುವಾಗ ನಮ್ಮ ರಾಜ್ಯದ ನ್ಯಾಯಾಧಿಕಾರಿಗಳ ಸಂಘ, ವಕೀಲರ ಸಂಘ, ಅಡ್ವೋಕೇಟ್ ಜನರಲ್, ಎಲ್ಲಾ ಸತತವಾಗಿ ತಿಪ್ಪರುಲಾಗ ಹಾಕುತ್ತಲೇ ಬಂದಿರುವುದು ತೀರಾ ಅಸಮಾಧಾನಕರವಾದ್ದು. ನ್ಯಾಯಾಧಿಕಾರಿಗಳ ಸಂಘವು ಯಾರೋ ಹೇಳಿ ಮಾಡಿಸಿದ್ದು ಎನ್ನುವಷ್ಟರ ಮಟ್ಟಿಗೆ ಸ್ವತಂತ್ರ ಚಿಂತನೆ ಮತ್ತು ಕ್ರಿಯೆಯನ್ನು ಗಾಳಿಗೆ ತೂರಿದ್ದು ಅವಮಾನದ ವಿಷಯ. ನ್ಯಾಯಮೂರ್ತಿ ದಿನಕರನ್ ಅವರನ್ನು ಟೀಕಿಸುವುದು ಮತ್ತು ಶ್ರೇಷ್ಠ ನ್ಯಾಯಾಲಯಕ್ಕೆ ಅವರನ್ನು ನೇಮಕಗೊಳಿಸದಿರುವುದು ಈ ಸಂಘದ ಪ್ರಕಾರ "ನ್ಯಾಯಾಂಗದ ಮುಖಕ್ಕೆ ಮಸಿ ಬಳಿದಂತೆ." ಅದೇಕೆ ಹಾಗೆಂಬುದು ಮಾತ್ರ ಅರ್ಥವಾಗುವುದಿಲ್ಲ. ಅಂತಹ ನಿರ್ಣಯವನ್ನು ಅಂಗೀಕರಿಸದಿದ್ದ ನ್ಯಾಯಾಧೀಶರೂ ಕೆಲವರಿದ್ದಾರೆಂದು ಹೇಳಲಾಗಿದೆ. ಇದು ಸಂತೋಷದ ಸುದ್ದಿ. ನ್ಯಾಯಾಂಗದ ಮುಖವನ್ನು ಪರದೆಯ ಹಿಂದಕ್ಕೆ ಸರಿಸಲು ತವಕಿಸಿ ತಮ್ಮ ಅವಲಕ್ಷಣವನ್ನು ಪ್ರದರ್ಶಿಸಿದ ನ್ಯಾಯಾಲಯ ಅಧಿಕಾರಿಗಳ ಸಂಘದ ಘನತೆಯು ಶೋಚನೀಯ ಹಂತವನ್ನು ಮುಟ್ಟಿದೆ. ವಕೀಲರ ಸಂಘ ಸಹ ಒಂದೊಂದು ಸಭೆಯಲ್ಲಿ ಒಂದೊಂದು ವಿಧದ ನಿರ್ಣಯ ಕೈಗೊಂಡು ತಾನು ಯಾರದೋ ಮರ್ಜಿಗಾಗಿ ಕಾಯುತ್ತಿರುವಂತೆ ತನ್ನನ್ನು ತೋರ್ಪಡಿಸಿಕೊಂಡಿದೆ. ವಕೀಲರ ಸಂಘಕ್ಕೆ ಇದು ರಮಣೀಯವಾಗಿ ಕಂಡಿರಬಹುದು, ಆದರೆ ಹೊರಗಿನ ಜನ ಅದನ್ನು ತಿಪ್ಪರುಲಾಗವೆಂದೇ ಗುರುತಿಸುತ್ತಾರೆ. ಇನ್ನು ಅಡ್ವೋಕೇಟ್ ಜನರಲ್ ನಡೆದುಕೊಂಡ ರೀತಿಯ ಬಗ್ಗೆ ಹೇಳುವುದೇ ಬೇಡ. ಅವರ ಸ್ಥಾನಕ್ಕೆ ಅಗೌರವ ತರುವಂತಹ ರೀತಿಯಲ್ಲಿ ಅವರು ನ್ಯಾಯಮೂರ್ತಿ ದಿನಕರನ್ ಅವರಿಗೆ ದುಂಬಾಲು ಬಿದ್ದಿದ್ದಾರೆ. ಈ ಇಡೀ ಪ್ರಸಂಗದಲ್ಲಿ ನ್ಯಾಯಮೂರ್ತಿ ದಿನಕರನ್ ಅವರು ಯಾವ ವರ್ಗ ಮತ್ತು ವರ್ಣಕ್ಕೆ ಸೇರಿದ್ದಾರೆಂಬುದು ಗೌಣ. ಅವರು ಮತಾಂತರವಾಗಿರುವ ಕುಟುಂಬದವರೆಂದು ಅವರನ್ನು ಯಾರೂ ಹೀಯಾಳಿಸಿಲ್ಲ. ಅವರ ಬಗ್ಗೆ ಬಂದಿರುವ ವಿಮರ್ಶೆಯು ಅಕ್ರಮ ಭೂಸ್ವಾಧೀನದ ಹಿನ್ನೆಲೆಯಲ್ಲಷ್ಟೇ ಬಂದಿದೆ. ಅದನ್ನುಳಿದು ಬೇರೆ ಟೀಕೆಗಳು ಅಪ್ರಸ್ತುತ.

* * *

ನಮ್ಮ ರಾಜ್ಯದ ಲೋಕಾಯುಕ್ತರು ಬಲೆ ಬೀಸುತ್ತಲೇ ಇರುತ್ತಾರೆ, ಭಾರಿ ಮೀನುಗಳನ್ನು ಹಿಡಿಯುತ್ತಲೇ ಇರುತ್ತಾರೆ. ಆದರೆ ಮೀನುಗಳೇ ಮಾಡಿಕೊಂಡಿರುವ ಕಾನೂನಿನಂತೆ ಅವು ಮತ್ತೆ ಸಮುದ್ರಕ್ಕೆ ಜಿಗಿದು ಯಥಾಪ್ರಕಾರ ಭಕ್ಷಣೆಯ ಸಂಪ್ರದಾಯವನ್ನು ಮುಂದುವರಿಸುತ್ತವೆ. ಅವರಾರೂ ಒಂದು ಚಿಕ್ಕ ಕಾಸನ್ನೂ ಕಳೆದುಕೊಂಡದ್ದಿಲ್ಲ; ಸ್ಥಾನವನ್ನಂತೂ ಕಳೆದುಕೊಳ್ಳುವುದಿರಲಿ, ಅವರನ್ನು ಮೇಲಕ್ಕೆ ಒದ್ದು ಬಡ್ತಿ ನೀಡುತ್ತಾರೆ, ಉನ್ನತಾಧಿಕಾರಿಗಳನ್ನಾಗಿಸುತ್ತಾರೆ. ಅವರಿಗೂ ನಾಚಿಕೆ ಇಲ್ಲ, ಬಡ್ತಿ ನೀಡುವವರಿಗೂ ಇಲ್ಲ. ಇದನ್ನೆಲ್ಲಾ ನೋಡುತ್ತಿರುವುದಷ್ಟೇ ಸಾರ್ವಜನಿಕರ ಮೋಜು ಎನ್ನುವಂತಾಗಿದೆ. ಈ ಪ್ರಹಸನವು ಬಹಳ ದುರಂತಮಯವಾಗಿದೆ. ತಮ್ಮ ಆದಾಯವನ್ನು ಮೀರಿ ಆಸ್ತಿ ಹೊಂದಿರುವವರು ಸರ್ಕಾರಿ ನೌಕರರು ಮಾತ್ರವೇ ಏನು? ಮುಖೇಶ್ ಅಂಬಾನಿಯ ಲಕ್ಷಗಟ್ಟಲೆ ಕೋಟಿಗಳು ಸಕ್ರಮವಾಗಿ ಗಳಿಸಿದವುಗಳೆ? ಇನ್ನೂ ಬೇರೆ ಉದ್ಯೋಗಗಳವರೂ ಇದ್ದಾರೆ. ಅವರು ಘೋಷಿಸಿಕೊಂಡಿರುವ ಆದಾಯವೆಷ್ಟೆಂಬುದು ಆದಾಯ ತೆರಿಗೆ ಇಲಾಖೆಗೆ ತಿಳಿದಿದೆ. ಅವರೆಲ್ಲಾ ಘೋಷಿತ ಆದಾಯವನ್ನು ಮೀರಿ ಆಸ್ತಿಯನ್ನು ಹೊಂದಿಲ್ಲವೆ? ಅವರನ್ನು ಪ್ರಶ್ನಿಸುವುದು ಬೇಡವೆ? ಪ್ರಶ್ನಿಸುವವರು ಯಾರು? ಸರ್ಕಾರದ ಅಧಿಕಾರಿಗಳ ಅಕ್ರಮ ಆಸ್ತಿಯು ಭ್ರಷ್ಟಾಚಾರದಿಂದ ಗಳಿಸಿದ್ದು, ಬೇರೆ ಹಲವು ಉದ್ಯೋಗ ಗಳವರು ಗಳಿಸುವ ಅಕ್ರಮ ಆಸ್ತಿಯು ಭ್ರಷ್ಟಾಚಾರವೆಂದು ಕರೆಯಲಾಗಿಲ್ಲದಿದ್ದರೂ ಅದೂ ಸಹ ಭ್ರಷ್ಟಾಚಾರವೇ ಆಗಿದೆ. ಇದಲ್ಲದೆ ಸಾರ್ವಜನಿಕ ಸಂಪತ್ತನ್ನು ಖಾಸಗಿತನಕ್ಕೆ ಪರಿವರ್ತಿಸಿಕೊಂಡ ಜಾಣ ಕುತಂತ್ರಿಗಳೂ ಇದ್ದಾರೆ. ಅವರನ್ನೆಲ್ಲಾ ಭ್ರಷ್ಟ ಸರ್ಕಾರಿ ಅಧಿಕಾರಿಗಳೊಂದಿಗೆ ತಕ್ಕಡಿಗೆ ಹಾಕುವುದನ್ನು ಸಾರ್ವಜನಿಕರು ಸ್ವಾಗತಿಸಬೇಕು, ಒತ್ತಾಯಿಸಬೇಕು. ಆಗ ಸಾವಿರಾರು ಮಂದಿ ಶಾಸಕರು ಮತ್ತು ಅವರ ಬಾಂಧವ್ಯವಿರುವ ಇತರ ಉದ್ಯೋಗಗಳವರು ಬಲೆಗೆ ಬೀಳುತ್ತಾರೆ. ಈ ಮಹಾಪೂರದಿಂದ ಬಲೆಯೇ ಛಿದ್ರ ಛಿದ್ರವಾಗಿಬಿಡಬಹುದೆಂಬ ಅಂಜಿಕೆ ಇರಬೇಕು!

* * *

ಅಮೆರಿಕಾದ ವ್ಯಾಪಾರ ಅವರಿಗೆ ಚೆನ್ನಾಗಿ ಕುದುರಿದೆ ಮತ್ತು ಸ್ವಲ್ಪವೂ ದೃಢತೆ ಮತ್ತು ದೇಶದ ಪರವಾದ ನಿಷ್ಠೆ ಇಲ್ಲದ ಮನಮೋಹನ ಸಿಂಗ್ ಸರ್ಕಾರ ನಮ್ಮ ದೇಶವನ್ನು ಕೆಸರಲ್ಲಿ ಮುಳುಗಿಸಿದೆ. ಪರಮಾಣು ಇಂಧನದಿಂದ ವಿದ್ಯುದುತ್ಪಾದನೆಯ ಎರಡು ಸ್ಥಾವರಗಳನ್ನು ನಿರ್ಮಿಸಲು ಗುಜರಾತ್ ಮತ್ತು ಆಂಧ್ರ ಪ್ರದೇಶದಲ್ಲಿ ಅಮೆರಿಕಾದ ಕಂಪನಿಗಳಿಗೆ ವಹಿಸಲಾಗಿದೆ. ಕೈ ತಿರುಚಿ ಅದನ್ನು ಅಮೆರಿಕಾ ಸರ್ಕಾರ ಸಾಧಿಸಿದೆ. ಇಂಧನದ ಬಗೆಗಿನ ತಕರಾರುಗಳು ಇನ್ನೂ ಬಗೆಹರಿಯದಿರುವಾಗ ಈ ತೀರ್ಮಾನ ಹೇಗೆ ಬಂತೆಂಬುದನ್ನು ಆಲೋಚಿಸಿ ತಿಳಿಯಬೇಕು. ಸ್ಥಾವರಗಳಿಂದ ಏನಾದರೂ ಅನಾಹುತ ಸಂಭವಿಸಿದರೆ ಅಮೆರಿಕಾದ ಕಂಪನಿಗಳು ಬಾಧ್ಯರಲ್ಲವೆಂದೂ, ಕಾನೂನಿನ ಅನ್ವಯ ಅವುಗಳ ವಿರುದ್ಧ ಯಾವ ಕ್ರಮವೂ ಅಸಿಂಧುವೆಂದೂ ಷರತ್ತನ್ನು ಅಮೆರಿಕಾ ಪಡೆದುಕೊಂಡಿದೆ. ಇದನ್ನು ಒಪ್ಪಿರುವ ಸರ್ಕಾರಕ್ಕೆ ಎಳ್ಳಷ್ಟೂ ಮಾನ-ಮರ್ಯಾದೆ ಇಲ್ಲ, ನಮ್ಮ ದೇಶದ ಜೀವಗಳ ಬಗ್ಗೆ ಗೌರವವಿಲ್ಲ. ಜೊತೆಗೆ, ಈಗ ರಕ್ಷಣಾ ಕ್ಷೇತ್ರದಲ್ಲಿ "ಎಲ್ಲ ಸಹಕಾರ" ನೀಡುವುದಾಗಿ ಅಮೆರಿಕಾ ಹೇಳಿದೆ. ಅಂದರೆ, ಇಡೀ ಕ್ಷೇತ್ರದಲ್ಲಿ ಮೂಗು ತೂರಿಸಲು ಅವಕಾಶ ಪಡೆಯುವುದೆಂದರ್ಥ. ಕಾಂಗ್ರೆಸ್ ಪಕ್ಷದ ಸದಸ್ಯರು ಇಂತಹ ದೇಶದ್ರೋಹದ ನೀತಿಯ ಬಗೆಗೆ ಚಕಾರವೆತ್ತದಿರುವುದು ನಾಚಿಕೆಗೇಡು. ಒಟ್ಟಿನಲ್ಲಿ, ಎಲ್ಲರೂ ಸೇರಿ ನಮ್ಮ ದೇಶವನ್ನು ಹಲವು ದಶಕಗಳ ಹಿಂದಿನ ದಕ್ಷಿಣ ವಿಯೆಟ್ನಾಂನ ಸ್ಥಾನಕ್ಕೆ ಕೊಂಡೊಯ್ಯುತ್ತಿದ್ದಾರೆ. ಕಣ್ಣೀರೇನಾದರೂ ಇದ್ದರೆ ಸುರಿಸೋಣ!

*ಸಂಪಾದಕೀಯ (ಪುಟ ೫ರಿಂದ)*

ರೂಪಾಯಿಗಿಂತ ಹೆಚ್ಚು ಖರ್ಚು ಮಾಡುವ ಆರ್ಥಿಕ ಶಕ್ತಿಯಿಲ್ಲದವರು. ಬೃಹತ್ ನಗರ ಮುಂಬಯಿಯಲ್ಲಿ ಸುಮಾರು ೧೨ ಲಕ್ಷ ಜನರು ತಿಂಗಳಿಗೆ ೬೦೦ ರೂಪಾಯಿ ಸಂಪಾದನೆಯಲ್ಲಿ ಜೀವನ ಸಾಗಿಸುತ್ತಿದ್ದಾರೆ. ಆಹಾರ ಪದಾರ್ಥಗಳ ಬೆಲೆ ಗಗನಕ್ಕೇರುತ್ತಿದ್ದರೂ ಅದನ್ನು ಬೆಳೆದ ರೈತನ ಪರಿಸ್ಥಿತಿ ಮಾತ್ರ ದಾರುಣವಾಗಿದೆ. ಕಾಳಸಂತೆಕೋರರಿಗೆ ಮತ್ತು ದೊಡ್ಡ ಪ್ರಮಾಣದ ವ್ಯಾಪಾರಿಗಳಿಗೆ ಈಗ ಸುಗ್ಗಿ. ಇವರ ಎಂಜಲು ದುಡ್ಡಿಗಾಗಿ ಕಾದಿರುವ ಅಧಿಕಾರಶಾಹಿಗೆ ಮತ್ತು ಬಂಡವಾಳದ ಪರವಿರುವ ರಾಜಕಾರಣಿಗಳಿಗೆ ಈ ಬಗ್ಗೆ ಯಾವ ಕಾಳಜಿಯೂ ಇಲ್ಲ. ಏರುತ್ತಿರುವ ಬೆಲೆ, ಇಳಿಯುತ್ತಿರುವ ವೇತನ; ಈ ಪರಿಸ್ಥಿತಿಯಲ್ಲಿ ರೈತ-ಕಾರ್ಮಿಕ ಉದ್ವಿಗ್ನ.

ಒಂದೆಡೆ ಕಡುಬಡತನ. ಇನ್ನೊಂದೆಡೆ ನಿರುದ್ಯೋಗ. ಇವು ಜನತೆಯನ್ನು ತೀವ್ರವಾಗಿ ಕಾಡುತ್ತಿರುವ ಸಮಸ್ಯೆಗಳು. ಆರ್ಥಿಕ ಜಾಗತೀಕರಣ ಭಾರತದ ಎಲ್ಲ ಸಮಸ್ಯೆಗಳಿಗೂ ಸಿದ್ಧೌಷಧವೆಂದು ಸಾರಿ ಹೊಸ ಮಾರುಕಟ್ಟೆ ಆರ್ಥಿಕ ನೀತಿಗಳನ್ನು ವಿಶ್ವ ಬ್ಯಾಂಕ್, ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆ, ವಿಶ್ವ ವ್ಯಾಪಾರೀ ಸಂಸ್ಥೆ, ಮತ್ತು ಅಂತರರಾಷ್ಟ್ರೀಯ ವ್ಯಾಪಾರೀ ಸಂಸ್ಥೆಗಳ ಆದೇಶದಲ್ಲಿ ಜಾರಿಗೊಳಿಸಿ ಅದನ್ನು ಮುಂದುವರೆಸಿಕೊಂಡು ಹೋಗುತ್ತಿರುವ ಆಳುವ ವರ್ಗ ಮಾತ್ರ ಚಲನಶೀಲ ಪ್ರಜಾತಂತ್ರದ ವ್ಯವಸ್ಥೆಯಲ್ಲಿ ಭಾರತ ಬಲಿಷ್ಠ ರಾಷ್ಟ್ರವಾಗಿ ಬೆಳೆದು ಕಂಗೊಳಿಸುತ್ತಿದೆ ಎಂದು ಪ್ರಚಾರದ ಮಾಯಾಜಾಲವನ್ನು ಬೀಸುತ್ತಿದೆ. ಆದರೆ ವಾಸ್ತವಿಕ ಸತ್ಯವೇ ಬೇರೆ. ಜಾಗತಿಕ ಆರ್ಥಿಕ ಬಿಕ್ಕಟ್ಟಿಗೆ ಸಿಕ್ಕಿ ತತ್ತರಿಸಿ, ನಲುಗಿದ ಭಾರತದಲ್ಲಿ ಸುಮಾರು ಒಂದು ಕೋಟಿಗೂ ಹೆಚ್ಚು ಉದ್ಯೋಗಗಳು ನಾಶಗೊಂಡಿವೆ. ಗುಜರಾತ್ ರಾಜ್ಯದ ಜೆಮ್ ಉದ್ದಿಮೆಯೊಂದರಲ್ಲೆ ೪೧೪ ಸಾವಿರ ಉದ್ಯೋಗಗಳು ನಾಶವಾಗಿವೆ. ಜವಳಿ ಮತ್ತು ಸಿದ್ಧ ಉಡುಪುಗಳ ಉದ್ದಿಮೆಯಲ್ಲಿ ಲಕ್ಷಾಂತರ ಜನ ಉದ್ಯೋಗ ಕಳೆದುಕೊಂಡಿದ್ದಾರೆ. ಪ್ರತಿ ವರ್ಷ ೫೬ ಲಕ್ಷ ಜನರು ಉದ್ಯೋಗ ವಿನಿಮಯ ಕೇಂದ್ರಗಳಲ್ಲಿ ತಮ್ಮ ಹೆಸರನ್ನು ನೋಂದಾಯಿಸಿಕೊಳ್ಳುತ್ತಿದ್ದಾರೆ.

ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಬಿಕ್ಕಟ್ಟು ತೀವ್ರವಾಗುತ್ತಿರುವಂತೆಯೆ ಅದರೊಂದಿಗೇ ಹೋರಾಟದ ಅಲೆಗಳು ಹುಟ್ಟುತ್ತವೆ. ಹೋರಾಟಗಳನ್ನು ಹತ್ತಿಕ್ಕುವ ದಮನಕಾರಿ ಪ್ರವೃತ್ತಿಯೂ ಹೆಚ್ಚುತ್ತದೆ. ಅನಿವಾರ್ಯವಾಗಿ ಹುಟ್ಟುವ ಪ್ರತಿಭಟನೆ ಮತ್ತು ಹೋರಾಟಗಳಿಗೆ ನಾಯಕತ್ವ ಕೊಡಬೇಕಾದ ಚಾರಿತ್ರಿಕ ಜವಾಬ್ದಾರಿ ಸಂಘಟಿತ ಕಾರ್ಮಿಕ ವರ್ಗದ ಮೇಲಿದೆ. ಜಾಗತೀಕರಣದ ಪ್ರಕ್ರಿಯೆಯಲ್ಲಿ ಸಂಘಟಿತರಾಗಿದ್ದ ಕಾರ್ಮಿಕರು ಕೂಡ ಕೆಲಸ ಕಳೆದುಕೊಂಡು ಅಸಂಘಟಿತ ಕಾರ್ಮಿಕರಾಗಿ ರೂಪಾಂತರ ಹೊಂದುತ್ತಿದ್ದಾರೆ. ಎರಡನೇ ರಾಷ್ಟ್ರೀಯ ಕಾರ್ಮಿಕ ಆಯೋಗದ ವರದಿಯ ಪ್ರಕಾರ ಈ ದೇಶದ ಒಟ್ಟು ಕಾರ್ಮಿಕರಲ್ಲಿ ಕೇವಲ ಶೇಕಡ ೮ರಷ್ಟು ಕಾರ್ಮಿಕರು ಸಂಘಟಿತರಾಗಿದ್ದಾರೆ. ಉಳಿದ ಶೇಕಡ ೯೨ರಷ್ಟು ಅಸಂಘಟಿತ ಕಾರ್ಮಿಕರು. ಸಂಘಟಿತ ಕಾರ್ಮಿಕರು ಅನೇಕ ಹೋರಾಟಗಳ ಮೂಲಕ ಕೆಲವು ಸವಲತ್ತುಗಳನ್ನು ಪಡೆದಿದ್ದಾರೆ, ಆದರೆ ಸುಮಾರು ೩೫ ಕೋಟಿಗೂ ಹೆಚ್ಚಿರುವ ಅಸಂಘಟಿತ ಕಾರ್ಮಿಕರಿಗೆ ಅನ್ವಯವಾಗುವ ಕಾನೂನು ತರುವಲ್ಲಿ ಕೇಂದ್ರ ಸರ್ಕಾರ ಮತ್ತು ಬಹುತೇಕ ರಾಜ್ಯ ಸರ್ಕಾರಗಳು ವಿಫಲವಾಗಿವೆ. ಸ್ವಾತಂತ್ರ್ಯ ಬಂದ ೬೦ ವರ್ಷಗಳ ತರುವಾಯ ೨೦೦೮ರಲ್ಲಿ ಕೇಂದ್ರ ಸರ್ಕಾರ ಅಸಂಘಟಿತ ಕಾರ್ಮಿಕರಿಗಾಗಿ ಒಂದು ಶಾಸನವನ್ನು ಜಾರಿ ಮಾಡಿದೆ. ಇದು ಕಾರ್ಮಿಕ ವರ್ಗದ ಹೋರಾಟದ ಫಲ. ಆದರೆ ಈ ಶಾಸನದಲ್ಲಿ ಅನೇಕ ಕೊರತೆಗಳಿವೆ. ಅಸಂಘಟಿತರಿಗೆ ಸಿಗಬೇಕಾದ ಸಾಮಾಜಿಕ ನ್ಯಾಯದಿಂದ ಈಗಲೂ ಅವರು ವಂಚಿತರಾಗಿದ್ದಾರೆ. ಇನ್ನು ಸಂಘಟಿತ ಕಾರ್ಮಿಕರಿಗೆ ಅನ್ವಯಿಸುವ ಅನೇಕ ಕಾನೂನುಗಳನ್ನು ತಮಗೆ ಅನುಕೂಲವಾಗುವ ರೀತಿಯಲ್ಲಿ ಮಾರ್ಪಡಿಸಬೇಕೆಂದು ಮಾಲಿಕರು ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಮೇಲೆ ಒತ್ತಡ ಹೇರಿದ್ದಾರೆ. ಅಂದರೆ ಕಾರ್ಮಿಕ ವರ್ಗವನ್ನು ಸರ್ವಾಂಗೀಣ ನಿಷ್ಕ್ರಿಯಗೊಳಿಸಬೇಕೆಂದು ಆಳುವ ವರ್ಗ ಯೋಜಿಸಿದಂತಿದೆ.

ಸಂಘಟಿತ ಕಾರ್ಮಿಕರು ಈ ಎಲ್ಲ ಸಮಸ್ಯೆಗಳನ್ನೂ ಸವಾಲಾಗಿ ಸ್ವೀಕರಿಸಿ ಹೋರಾಡಬೇಕಾದ ಸಂದರ್ಭ ಒದಗಿಬಂದಿದೆ. ಸಾರ್ವಜನಿಕ ಕ್ಷೇತ್ರದ ಬ್ಯಾಂಕ್ ಮತ್ತು ವಿಮಾ ಸಂಸ್ಥೆಗಳನ್ನು ಖಾಸಗೀಕರಿಸುವ ಅಥವಾ ಬಂಡವಾಳ ಹಿಂಪಡೆಯುವ ಕೇಂದ್ರ ಸರ್ಕಾರದ ಪ್ರಯತ್ನಗಳನ್ನು ಈ ಸಂಸ್ಥೆಗಳಲ್ಲಿ ದುಡಿಯುತ್ತಿರುವ ಕಾರ್ಮಿಕರು ನಿರಂತರ ಹೋರಾಟಗಳಿಂದ ಹಿಮ್ಮೆಟ್ಟಿಸಿರುವುದು ಶ್ಲಾಘನೀಯ. ಅದೇ ರೀತಿ ಫೆಬ್ರವರಿ ೨೦೦೪ ಮತ್ತು ೨೦ ಆಗಸ್ಟ್ ೨೦೦೭ರಲ್ಲಿ ನಡೆದ ಅಖಿಲ ಭಾರತ ಸಾರ್ವತ್ರಿಕ ಮುಷ್ಕರ ಗಮನಾರ್ಹವಾದ ಬೆಳವಣಿಗೆಗಳು.

ಇದೇ ವರ್ಷ ಸೆಪ್ಟೆಂಬರ್ ೧೪ರಂದು ಕೇಂದ್ರೀಯ ಕಾರ್ಮಿಕ ಸಂಘಟನೆಗಳಾದ ಐ.ಎನ್.ಟಿ.ಯು.ಸಿ., ಬಿ.ಎಂ.ಎಸ್., ಎ.ಐ.ಟಿ.ಯು.ಸಿ., ಸಿ.ಐ.ಟಿ.ಯು., ಎಚ್.ಎಂ.ಎಸ್., ಟಿ.ಯು.ಸಿ.ಸಿ., ಯು.ಟಿ.ಯು.ಸಿ., ಬ್ಯಾಂಕ್ ಮತ್ತು ವಿಮಾ ನೌಕರರ ಸಂಘಗಳು, ತಮ್ಮ ತಮ್ಮ ರಾಜಕೀಯ ಒಲವುಗಳನ್ನು ಸ್ವಲ್ಪ ಹಿಂದಕ್ಕೆ ಸರಿಸಿ, ದೆಹಲಿಯಲ್ಲಿ ಸಭೆ ಸೇರಿ, ಕಾರ್ಮಿಕರನ್ನು ಕಾಡುತ್ತಿರುವ ಅನೇಕ ಸಮಸ್ಯೆಗಳ ಬಗ್ಗೆ ಚರ್ಚಿಸಿ, ಅಕ್ಟೋಬರ್ ೨೮ರಂದು ರಾಷ್ಟ್ರಾದ್ಯಂತ ಪ್ರತಿಭಟನೆ ದಿನವನ್ನಾಗಿ ಆಚರಿಸಬೇಕೆಂದು ಒಮ್ಮತದಿಂದ ನಿರ್ಣಯಿಸಿರುವುದು ಸ್ವಾಗತಾರ್ಹವಾದದ್ದು. ಹೋರಾಟದ ವಿಷಯಗಳ ವ್ಯಾಪ್ತಿಯೂ ವಿಶಾಲವಾಗಿರುವುದು ವಿಶೇಷ. ಏರುತ್ತಿರುವ ಅಗತ್ಯ ವಸ್ತುಗಳ ಬೆಲೆ, ಉದ್ಯೋಗಗಳ ನಾಶ, ಕಾರ್ಮಿಕರ ಹಕ್ಕುಗಳ ಚ್ಯುತಿ, ಅಸಂಘಟಿತ ಕಾರ್ಮಿಕರ ಕಾನೂನಿನಲ್ಲಿರುವ ಕೊರತೆಗಳು, ಲಾಭದಾಯಕ ಸಾರ್ವಜನಿಕ ಉದ್ದಿಮೆಗಳ ಖಾಸಗೀಕರಣ ಇತ್ಯಾದಿ ವಿಷಯಗಳನ್ನು ಕುರಿತಾದ ಪ್ರತಿಭಟನೆಗೆ ಜನತೆಯ ಸಂಪೂರ್ಣ ಬೆಂಬಲ ಸಿಗಬೇಕು. ಇಂತಹ ಪ್ರತಿಭಟನೆ ಗಳು ಸಾಮಾಜಿಕ ಪರಿವರ್ತನೆಗೆ ವೇಗವರ್ಧಕವಾಗಬೇಕು. 'ಹೊಸತು' ಈ ಪ್ರತಿಭಟನೆಗೆ ತನ್ನ ದನಿಗೂಡಿಸುತ್ತದೆ ಮತ್ತು ಸಫಲವಾಗಲೆಂದು ಹಾರೈಸುತ್ತದೆ.




## ಅಕ್ಟೋಬರ್ ಸಂಚಿಕೆ

ಕಲಾವಿದ ಹುಸೇನಿ ಅವರ ಪರಿಚಯವು ಖುಷಿಕೊಟ್ಟಿತು. ಇಂತಹ ಕಲಾವಿದರಿಗೆ ಪ್ರೋತ್ಸಾಹದ ಅಗತ್ಯವಿದೆ.

ಮೈಸೂರು **ಕೊ. ಸು. ನರಸಿಂಹಮೂರ್ತಿ**

## 'ಅಪೋಕಾಲಿಪ್ಟೊ' ಚಿತ್ರವಿಮರ್ಶೆಗೆ ಪ್ರತಿಕ್ರಿಯೆ

ತಾವು ಜಗತ್ತಿಗೆ ನಾಗರಿಕತೆಯನ್ನು ಕಲಿಸುವ ಜವಾಬ್ದಾರಿ ಹೊಂದಿದ್ದೇವೆ ಎಂಬ ಭ್ರಮೆಯಿಂದ ಬಿಳಿಯರು ಪ್ರಪಂಚದ ಎಲ್ಲ ಭೂಭಾಗಗಳನ್ನು ವಶಪಡಿಸಿಕೊಂಡರು ಅಥವಾ ಎಲ್ಲ ಭೂಭಾಗಗಳನ್ನು ಕಬಳಿಸುವ ತಮ್ಮ ಲೋಭಬುದ್ಧಿಗೆ ಅವರು 'ವೈಟ್‌ಮ್ಯಾನ್ಸ್ ಬರ್ಡನ್' ಎಂಬ ಹೆಸರನ್ನಿಟ್ಟುಕೊಂಡರು. ಈ ಹೆಸರಿನಲ್ಲಿ ಅವರು ಗೈದ ಶೋಷಣೆ ದಬ್ಬಾಳಿಕೆಗಳೆಷ್ಟು ಎಂಬುದು ಇತಿಹಾಸವನ್ನು ಬಲ್ಲ ಎಲ್ಲರಿಗೂ ಗೊತ್ತಿರುವ ವಿಷಯವೇ. ಈ ಉದಾತ್ತ ಉದ್ದೇಶದ ಹೆಸರಿನಲ್ಲಿ ಅವರು ಜಗತ್ತಿನ ಎಲ್ಲ ಜನಾಂಗಗಳನ್ನೂ ಯಾಮಾರಿಸಿದರಲ್ಲದೆ ಪಶ್ಚಿಮದ ಸೃಜನಶೀಲ ಚಿಂತಕರೂ ಗೊತ್ತಿದ್ದೋ ಗೊತ್ತಿಲ್ಲದೆಯೋ ಇದೇ ಹಾದಿಯಲ್ಲಿ ಯೋಚಿಸುವಂತೆ ಮಾಡಿದರು ಎಂಬುದನ್ನು ಎಡ್ವರ್ಡ್ ಸೈದ್‌ನಂತಹವರು ಸರಿಯಾಗಿಯೇ ಗುರುತಿಸಿದ್ದಾರೆ. ಈ ದಿಕ್ಕಿನಲ್ಲಿ ಎಡ್ವರ್ಡ್ ಸೈದ್ ಹೊಸದೊಂದು ಸಾಹಿತ್ಯ ವಿಮರ್ಶೆಯ ಸಿದ್ಧಾಂತವನ್ನೇ ನಿರ್ಮಾಣ ಮಾಡಿದ. ಸೈದ್‌ನ ಸಾಹಿತ್ಯ ಮೀಮಾಂಸೆಯ ಜಾಡಿನಲ್ಲೇ ನಂಗಲಿಯವರೂ 'ಅಪೋಕಾಲಿಪ್ಟೊ'ದ ವಿಮರ್ಶೆ ಮಾಡಿದಂತೆ ಕಾಣಿಸುತ್ತದೆ. ಸಾಹಿತ್ಯ ನಿರ್ಮಾಣ, ಸಾಹಿತ್ಯ ವಿಮರ್ಶೆಯಂತಹ ಸೃಜನಶೀಲ ಕ್ರಿಯೆಯು ಒಂದು ಸಿದ್ಧಾಂತವನ್ನು ನೆಚ್ಚಿಕೊಂಡು ಹೊರಟಾಗ – ಅದು ಎಷ್ಟು ಉದಾತ್ತ ಸಿದ್ಧಾಂತವೇ ಆಗಿರಲಿ – ನಮ್ಮ ಗ್ರಹಿಕೆ ಹೇಗೆ ಮೊಂಡಾಗಿಬಿಡಬಹುದು ಎನ್ನುವುದಕ್ಕೆ ನಂಗಲಿಯವರ ಚಿತ್ರವಿಮರ್ಶೆ ಒಂದು ನಿದರ್ಶನವಾಗಿದೆ.

ಕ್ರೈಸ್ತ ಮಿಷನರಿಗಳೇ ಎಲ್ಲ ಶೋಷಣೆಗಳ ಹಕ್ಕುದಾರರು ಹಾಗೂ ದಬ್ಬಾಳಿಕೆ ಎಂಬುದು ಪಶ್ಚಿಮದ ನಾಗರಿಕತೆಯ ಮೂಲ ಸ್ವತ್ತು ಎಂದು ಲೇಖಕ ಪ್ರೊ|| ಚಂದ್ರಶೇಖರ ನಂಗಲಿ ಯೋಚಿಸಿದಂತಿದೆ. ಆದರೆ ಅವರ ಈ ಆಲೋಚನೆಗೆ ಚಿತ್ರದಲ್ಲಿ ಯಾವುದೇ ಆಧಾರ ಸಿಗುವುದಿಲ್ಲ, ಅಂಥದೊಂದು ಆಧಾರವನ್ನು ಹುಡುಕುವ ಪ್ರಯತ್ನವನ್ನೂ ಸಹ ಲೇಖಕರು ಮಾಡುವುದಿಲ್ಲ. ಕ್ರೈಸ್ತ ಸಮಾಜ, ಪಶ್ಚಿಮದ ಸಂಸ್ಕೃತಿಗಳು ಈ ಶೋಷಣೆ, ದಬ್ಬಾಳಿಕೆಗಳಿಂದ ಅತಿ ಹೆಚ್ಚು ಲಾಭವನ್ನು, ಯಶಸ್ಸನ್ನು ಪಡೆದರೆಂಬುದೇನೋ ನಿಜ. ಆದರೆ ಮನುಷ್ಯ ಸಮಾಜ ವಿಕಾಸ ಹೊಂದಿದೆಡೆಯಲ್ಲೆಲ್ಲ ಶೋಷಣೆ ದಬ್ಬಾಳಿಕೆಗಳು ಕಂಡೇ ಕಾಣಿಸುತ್ತವೆ. ಇನ್ನು ಮಾಯನ್ ಆದಿವಾಸಿಗಳು ತಮ್ಮಲ್ಲೇ ಒಬ್ಬರು ಇನ್ನೊಬ್ಬರನ್ನು ಶೋಷಿಸುತ್ತಿದ್ದರು, ಕಂದಾಚಾರದ ಹೆಸರಿನಲ್ಲಿ ನರಹತ್ಯೆಗಳನ್ನೂ ಮಾಡುತ್ತಿದ್ದರು ಎಂಬುದು ಐತಿಹಾಸಿಕವಾಗಿ ರುಜುವಾತಾದ ಸಂಗತಿಯಾಗಿದೆ.

ಲೇಖಕರು ''ಆದಿವಾಸಿಗಳು ಜಾತಿವೈರವನ್ನು ಮರೆತು ಬೆಕ್ಕಸಬೆರಗಾಗಿ ವಾಸ್ಪಾಗಳನ್ನು ನೋಡುತ್ತ ನಿಲ್ಲುತ್ತಾರೆ'' ಎಂದಿದ್ದಾರೆ. ಆದರೆ ಇಲ್ಲಿ ನಾಯಕ-ಪ್ರತಿನಾಯಕರ ಗುಂಪು ಇವರಿಬ್ಬರ ನಡುವೆ ಉಂಟಾಗಿರುವುದು ಜಾತಿ ವೈರವಲ್ಲ. ಅದಕ್ಕಿಂತ ಮುಖ್ಯವಾಗಿ ಚಿತ್ರವೇ ನಿರೂಪಿಸಿರುವಂತೆ ಆ ಕಾಡಿನಲ್ಲಿ ದುಷ್ಟರೂ ಸಾಮ್ರಾಜ್ಯವಾದಿಗಳೂ ಆದ ಜನಾಂಗವೂ ಉಂಟು. ಹಾಗೆಯೇ ಸರಳರೂ ಸ್ವಾವಲಂಬಿಗಳೂ ಆದ ಆತ್ಮಗೌರವವುಳ್ಳ ಒಂದು ಜನಾಂಗವೂ ಉಂಟು. ಜಾಗ್ವಾರ್ ಪಾವ್, ಅವನ ತಂದೆ ಫ್ಲಿಂಟ್ ಐ, ಜನಪದ ಕಥೆ ಹೇಳುವ ಮೊಂಡು ಕೈನ ಮುದುಕ ಮೊದಲಾದವರು ಎರಡನೆಯ ಜನಾಂಗಕ್ಕೆ ಸೇರಿದವರು. ಅಂಥವರು ವಾಸ್ಪಾಗಳ ಹಂಗನ್ನು ಬಯಸದೆ, ಅವರ ಕೈಗೂ ಸಿಗದೇ ಕಾಡಿನಲ್ಲೆಲ್ಲೋ




ಕಣ್ಮರೆಯಾಗಿ ನೆಮ್ಮದಿಯ ಹೊಸ ಜೀವನ ನಡೆಸಿಕೊಂಡು ಹೋಗುತ್ತಾರೆ. ಸುಧಾರಣೆ ಮಾಡಲು ಹೊರಡುವ ವಾಸ್ಪಾಗಳಿಗೆ ಕೊನೆಗೆ ಸಿಗುವುದು ಯೋಗ್ಯರಾದ ವ್ಯಕ್ತಿಗಳಲ್ಲ, ಅವರದೇ ಮನೋಧರ್ಮದ ಸಾಮ್ರಾಜ್ಯವಾದಿ ಗುಲಾಮರೇ. ಮಿಷನರಿಗಳ ಧರ್ಮ ಸುಧಾರಣೆಯ ಪ್ರಯತ್ನವು ಹೀಗೆ ಯೋಗ್ಯರನ್ನು ಒಳಗೊಳ್ಳದೆ ವ್ಯರ್ಥವಾಗುತ್ತಿದೆ ಎಂಬ ಸಂದೇಶವು ಈ ಚಿತ್ರದಲ್ಲಿ ಪ್ರಧಾನವಾಗಿ ಪ್ರತೀತವಾಗುವ ಅಂಶವಾಗಿದೆ.

ಸಾಮ್ರಾಜ್ಯಶಾಹಿ ಆದಿವಾಸಿಗಳಿಂದ ತಪ್ಪಿಸಿಕೊಂಡು ಹೋಗುವ ಜಾಗ್ವಾರ್ ಪಾವ್ ''ಫ್ಲಿಂಟ್ ಐನ ಮಗನಾದ ನಾನು ಜಾಗ್ವಾರ್ ಪಾವ್ ! ನನಗಿಂತ ಮುಂಚೆ ನನ್ನ ತಂದೆ ಈ ಕಾಡಿನಲ್ಲಿ ಬೇಟೆಯಾಡಿದ್ದ, ನನ್ನ ಹೆಸರು ಜಾಗ್ವಾರ್ ಪಾವ್ ! ನಾನೊಬ್ಬ ಬೇಟೆಗಾರ ! ಇದು ನನ್ನ ಕಾಡು ! ನನ್ನ ನಂತರ ನನ್ನ ಮಕ್ಕಳು ಅವರ ಮಕ್ಕಳೊಂದಿಗೆ ಈ ಕಾಡಿನಲ್ಲಿ ಬೇಟೆಯಾಡಲಿದ್ದಾರೆ'' ಎಂದು ಘೋಷಿಸುತ್ತಾನೆ.

ಅವನ ಈ ಘೋಷಣೆಯಲ್ಲಿ ವಸಾಹತುಶಾಹಿಯನ್ನು ಪ್ರತಿರೋಧಿಸುವ ಸ್ಪಷ್ಟವಾದ ಧ್ವನಿಯಿದೆ. ಲೇಖಕರಾದರೂ ಇಡೀ ಚಿತ್ರ ಒಂದು ವ್ಯವಸ್ಥಿತ ಹುನ್ನಾರ, ಬಿಳಿಯರ ಪಾರಮ್ಯವಾದ, ಎಲ್ಲ ಸ್ವಕಪೋಲ ಕಲ್ಪಿತ ಎಂದು ನಿರಾಸೆ ವ್ಯಕ್ತಪಡಿಸುತ್ತಾರೆ. ಆದಿವಾಸಿಗಳನ್ನು ಕೀಳುಗೈದು ಧಾರ್ಮಿಕ ಸುಧಾರಣೆಯನ್ನು ಪ್ರತಿಪಾದಿಸುವ ಫ್ಯಾಸಿಸ್ಟ್ ದೃಷ್ಟಿಧೋರಣೆಯನ್ನು ಬಿಂಬಿಸುವ ಚಿತ್ರಗಳು ಆದಿವಾಸಿಗಳಲ್ಲಿ ಈ ಬಗೆಯ ಆತ್ಮಗೌರವವನ್ನು ಎಂದಿಗೂ ತುಂಬುವುದಿಲ್ಲ. ನಾಯಕನು ಪಾದ್ರಿಗಳ ಆಗಮನಕ್ಕೆ ಬೆನ್ನು ತೋರಿಸುವ ಸನ್ನಿವೇಶ ಮಿಷನರಿಗಳ ಒಟ್ಟು ವ್ಯವಸ್ಥೆಯನ್ನೇ ಅವಜ್ಞೆ ಮಾಡುವ ರೀತಿಯಲ್ಲಿದೆ. ಇಂದಿನ ಜಗತ್ತಿನಲ್ಲಿ ಪ್ಯಾಂಟು ಶರಾಯಿಗಳನ್ನು ತೊಟ್ಟು ಪ್ರಚಾರ ಮಾಡುವ ವಾಸ್ಪಾಗಳೂ ಉಂಟು, ಅವರಿಗಿಂತ ಎರಡು-ಮೂರು ಶತಮಾನಗಳಷ್ಟು ಹಿಂದಿರುವ ಆದಿವಾಸಿಗಳೂ ಉಂಟು. ಇದನ್ನೊಂದು ಲೋಪವೆಂದೇನೂ ಭಾವಿಸಬೇಕೆಂದು ತೋರುವುದಿಲ್ಲ.

ಬೆಂಗಳೂರು **ಟಿ. ಎನ್. ವಾಸುದೇವ ಮೂರ್ತಿ**

## ವೈಜ್ಞಾನಿಕ ಮನೋಭಾವ

ಟಿ.ವಿ. ಒಂದು ಪ್ರಭಾವಿ ಮಾಧ್ಯಮ. ಜನರ ಮನೆ-ಮನಗಳನ್ನು ನೇರವಾಗಿ ತಲುಪುತ್ತಿದೆ. ಟಿ.ವಿ. ಆರಂಭಗೊಂಡಾಗ ಜನರಲ್ಲಿ ಸಾಮಾಜಿಕ, ಶೈಕ್ಷಣಿಕ, ವಿಜ್ಞಾನ-ತಂತ್ರಜ್ಞಾನ, ವೈಜ್ಞಾನಿಕ ಮನೋಭಾವ ಬೆಳೆಸುವಲ್ಲಿ ಮಹತ್ತರ ಬದಲಾವಣೆಯ ಕ್ರಾಂತಿಯನ್ನುಂಟುಮಾಡುತ್ತದೆಂಬ ನಿರೀಕ್ಷೆ ಇತ್ತು. ಆದರೆ ಈ ಹೊತ್ತಿನಲ್ಲಿ ಟಿ.ವಿ. ಬಹುತೇಕವಾಗಿ ಧಾರಾವಾಹಿ, ರಿಯಾಲಿಟಿ ಶೋ ಹಾಗೂ ಜ್ಯೋತಿಷ್ಯ-ವಾಸ್ತು ಕಾರ್ಯಕ್ರಮಗಳಿಗೆ ಸೀಮಿತವಾಗುತ್ತಿದೆ. ಬೆಳಗ್ಗೆ ಹೊತ್ತಿನಲ್ಲಿ ಎಲ್ಲ ಟಿ.ವಿ. ಚಾನೆಲ್‌ಗಳಲ್ಲೂ ಜ್ಯೋತಿಷ್ಯ, ವಾಸ್ತು, ಗ್ರಹಫಲ – ಹೀಗೆ ಅವೈಜ್ಞಾನಿಕ ಕಾರ್ಯಕ್ರಮಗಳು ಪ್ರಸಾರವಾಗುತ್ತಿವೆ. ದೇವರು, ದೇವಾಲಯ, ಸ್ಥಳ ಮಹಿಮೆ, ಪೂಜೆ, ಆಚರಣೆ ಇತ್ಯಾದಿ ಧಾರ್ಮಿಕ ಕಾರ್ಯಕ್ರಮಗಳನ್ನು ಸಹ ವೈಭವೀಕರಿಸಲಾಗುತ್ತಿದೆ. ಅಲ್ಲಿ ಇತಿಹಾಸ ಮತ್ತು ಕಲೆಯ ಪ್ರಸ್ತಾಪ ಬಹಳ ಕಡಿಮೆ.

ನಾಗರಿಕತೆಯೊಂದಿಗೆ ನಮ್ಮ ಸಂಪ್ರದಾಯ, ಪರಂಪರೆಗಳು ಬೆಳೆದುಬಂದಿವೆ. ನಮ್ಮ ಗ್ರಾಮೀಣ ಪ್ರದೇಶದ ಒಂದೊಂದು ಊರು, ಊರಿನ ದೇವರು, ದೇವಸ್ಥಾನ ಸಹ ಐತಿಹಾಸಿಕ, ಧಾರ್ಮಿಕ ಮಹತ್ವವನ್ನು ಪಡೆದುಕೊಂಡು ಬಂದಿವೆ. ನಮ್ಮ ಗ್ರಾಮೀಣ ಜನರು ಆಚರಣೆಗಳನ್ನು ಆಚರಿಸುತ್ತಾ ಬಂದಿದ್ದಾರೆ. ಆದರೆ ಈ ಆಚರಣೆ, ನಂಬಿಕೆಗಳನ್ನೇ ಇಂದು ಹೆಚ್ಚು ವೈಭವೀಕರಿಸಿ ಮಾಧ್ಯಮಗಳು ಪ್ರಸಾರಮಾಡುತ್ತಿವೆ. ವಿಜ್ಞಾನ-ಮಾಹಿತಿ-ತಂತ್ರಜ್ಞಾನದ ಈ ಕಾಲದಲ್ಲಿಯೂ ಒಂದು ಕಡೆ ನಾಗಾಲೋಟದಿಂದ ವಿಜ್ಞಾನ ಮುನ್ನುಗ್ಗುತ್ತಿದ್ದರೆ, ಮತ್ತೊಂದು ಕಡೆ ಸಂಪ್ರದಾಯದ ಹೆಸರಿನಲ್ಲಿ ಮೌಢ್ಯಕ್ಕೆ ಬಲಿಯಾಗುತ್ತಿದ್ದೇವೆ. ವೈಜ್ಞಾನಿಕ ಮನೋಭಾವನೆಯನ್ನು ಜನರಲ್ಲಿ ಬೆಳೆಸಬೇಕಿದ್ದ ಮಾಧ್ಯಮಗಳೇ ಇಂದು ಜನಪ್ರಿಯತೆಗಾಗಿ ಹಿನ್ನೋಟವನ್ನು ಆರಂಭಿಸಿಬಿಟ್ಟಿವೆ.

೭೦-೮೦ರ ದಶಕದಲ್ಲಿ ಮೂಢನಂಬಿಕೆ, ಪವಾಡ ಇತ್ಯಾದಿಗಳ ವಿರುದ್ಧ ಒಂದು ದೊಡ್ಡ ಆಂದೋಲನವೇ ನಡೆದುಹೋಯಿತು. ಇದರಿಂದಾಗಿಯೇ ನನ್ನಂಥ ಸಾವಿರಾರು ವಿದ್ಯಾರ್ಥಿ, ಯುವಜನರು, ಪ್ರಗತಿಪರ ಚಳುವಳಿಯಲ್ಲಿ ಪಾಲ್ಗೊಂಡರು. ಇದರಿಂದಾಗಿ ಸಮಾಜ

ದಲ್ಲಿ ಒಂದಿಷ್ಟು ಅನುಮಾನಿಸುವ, ಪ್ರಶ್ನಿಸುವ ವಾತಾವರಣ ಉಂಟಾಗಿತ್ತು. ಢೋಂಗಿ ಬಾಬ, ಸ್ವಾಮಿಗಳು, ಪವಾಡಗಳ ವಿರುದ್ಧ ಜನಜಾಗೃತಿ ಉಂಟಾಗಿತ್ತು. ಆದರೆ ಬದಲಾದ ಆರ್ಥಿಕ, ಸಾಮಾಜಿಕ, ರಾಜಕೀಯ ಸಂದರ್ಭದಲ್ಲಿ ೭೦-೮೦ರ ದಶಕದಲ್ಲಿ ಚಿಂತನೆ, ಚಳುವಳಿಗಳು ಯಾವುವೂ ರೂಪುಗೊಳ್ಳಲಿಲ್ಲ. ಅಕಾಡೆಮಿಕ್ ವಿದ್ವಾಂಸರು ಸಮಾಜಮುಖಿಗಳಾಗಲಿಲ್ಲ. ಅಧಿಕಾರ, ಜಾತಿಗಳಲ್ಲೇ ಮುಳುಗಿಹೋಗಿರುವ ಇವರು, ೩೦ x ೪೦ ಅಳತೆಯ ಬಂಗಲೆ, ಕಾರುಗಳಲ್ಲಿ ಬಂದಿಯಾಗಿಬಿಟ್ಟಿದ್ದಾರೆ.

ಗ್ರಾಮೀಣ ಪ್ರದೇಶದ ಅನಕ್ಷರಸ್ಥರಿಗಿಂತ ಇಂದು ನಗರ ಪ್ರದೇಶಗಳ ವಿದ್ಯಾವಂತ, ಸುಶಿಕ್ಷಿತ ಜನರೆ ಹೆಚ್ಚು ಹೆಚ್ಚು ಮೂಢನಂಬಿಕೆ, ಜ್ಯೋತಿಷ್ಯ, ವಾಸ್ತು ಮೊದಲಾದವುಗಳಿಗೆ ಬಲಿಯಾಗುತ್ತಿದ್ದಾರೆ. ನಮ್ಮ ಎಲೆಕ್ಟ್ರಾನಿಕ್ ಮಾಧ್ಯಮಗಳು ದಿನ ದಿನ ಜ್ಯೋತಿಷ್ಯ, ವಾಸ್ತುಶಾಸ್ತ್ರದ ಕಾರ್ಯಕ್ರಮಗಳನ್ನು ಪ್ರಸಾರ ಮಾಡುತ್ತಿರುವುದರಿಂದ ಜನರು ಇನ್ನೂ ಹೆಚ್ಚಿನ ಮೌಢ್ಯಕ್ಕೆ ಬಲಿಯಾಗುತ್ತಿದ್ದಾರೆ. ಈ ಆಧುನಿಕ ಯುಗದಲ್ಲಿ ತಾಂತ್ರಿಕವಾಗಿ ನಾವು ಏನೆಲ್ಲ ಸಾಧಿಸಿದ್ದರೂ, ನಮ್ಮ ಮನೋಭಾವನೆಯಲ್ಲಿ ಮಾತ್ರ ಬದಲಾವಣೆ ಕಾಣುತ್ತಿಲ್ಲ. ವಿಜ್ಞಾನ ಬೆಳೆದಂತೆಲ್ಲ, ನಮ್ಮ ಮನೋಭಾವದಲ್ಲಿ ವೈಜ್ಞಾನಿಕ ಬದಲಾವಣೆ ಉಂಟಾಗುತ್ತಿಲ್ಲ. ವೈಜ್ಞಾನಿಕ ಮನೋಭಾವನೆಯನ್ನು ಬೆಳೆಸಬೇಕಿದ್ದ ಮಾಧ್ಯಮಗಳು ಸಹ ಮೌಢ್ಯಕ್ಕೆ ಬಲಿಯಾಗಿರುವುದು ವಿಷಾದದ ಸಂಗತಿ. ಇದಕ್ಕೆ ಹೊಣೆಗಾರರು ಯಾರು ? ನಮ್ಮ ಸಾಹಿತಿ, ಬುದ್ಧಿಜೀವಿಗಳು, ಚಿಂತಕರು ಎಲ್ಲಿ ಹೋದರು ? ಈ ಬಗ್ಗೆ ಒಂದಿಷ್ಟು ಚರ್ಚೆ, ಸಲಹೆ, ಹೋರಾಟ ರೂಪುಗೊಂಡರೆ ಸಮಾಜಕ್ಕೆ ಒಳಿತಲ್ಲವೆ ?

*ಹೊಸಪೇಟೆ* — *ಎಂ. ಎಂ. ಶಿವಪ್ರಕಾಶ್*

### ಬಜ್ಜಿ ಸ್ಟಾಲ್ ಶ್ರೀ ನಟರಾಜ ಹಾಗೂ 'ಹೊಸತು'

ಮೈಸೂರಿನ ರಾಮಸ್ವಾಮಿ ವೃತ್ತದ ಬಳಿ ಒಂದು ಬಜ್ಜಿ ಸ್ಟಾಲ್ ನಡೆಸುತ್ತಿರುವ ನಟರಾಜ್‌ರ ವಡೆ, ಬಜ್ಜಿ, ಬೋಂಡಾ, ಉದ್ದಿನ ವಡೆಗಳು ಜನರನ್ನು ಆಕರ್ಷಿಸಿ, ತಮ್ಮತ್ತ ಸೆಳೆಯುತ್ತವೆ. ಒಂದು ಸಣ್ಣ ಮನೆಯಲ್ಲಿ ಬಾಡಿಗೆಗೆ ಇರುವ ನಟರಾಜರ ಊರು ತಿ. ನರಸೀಪುರದ ಬಳಿಯ ಹುಣಸೂರು. ೧೯೭೭ರಲ್ಲಿ ಮೈಸೂರಿಗೆ ಬಂದು ಹೊಟೆಲ್ ಒಂದರಲ್ಲಿ ಉದ್ಯೋಗಕ್ಕೆ ಸೇರಿದ ಇವರು ಆರು ವರ್ಷ ದುಡಿದರೂ ಕೆಲಸ ಖಾಯಂ ಆಗಲಿಲ್ಲ. ಬೇರೆ ಕಡೆಯೂ ಅದೇ ಕತೆ. ಇನ್ನೊಬ್ಬರ ಹಂಗೇ ಬೇಡವೆಂದು ತಳ್ಳುವ ಗಾಡಿಯಲ್ಲಿ ವಡೆ, ಬೋಂಡಾ ತಯಾರಿಕೆ ಹಾಗೂ ಮಾರಾಟ ಆರಂಭಿಸಿದ ಮೊದಲ ದಿನಗಳಲ್ಲಿ ಗಿರಾಕಿಗಳೇ 'ಇಂತಿಂತಹ ಪದಾರ್ಥ ಹಾಕು, ಚೆನ್ನಾಗಿರುತ್ತದೆ' ಎಂದು ಮಾರ್ಗದರ್ಶನ ಮಾಡಿದರು. ಇಂದು ನಟರಾಜ್ ಪಕ್ಕಾ ವೃತ್ತಿಪರ ವಡೆ, ಬೋಂಡಾ, ಬಜ್ಜಿ ವ್ಯಾಪಾರಿ.

ಸ್ವಂತ ಗಾಡಿಯೊಂದನ್ನು 'ಸ್ಟಾಲ್' ಆಗಿ ಪರಿವರ್ತಿಸಿ ಪ್ರತಿನಿತ್ಯ ಸುಮಾರು ರೂ. ೨೦೦/- ಉಳಿತಾಯ ಮಾಡುವ ನಟರಾಜ್ 'ಹೊಸತು'ವಿನ ಓದುಗ ಬಳಗದಲ್ಲಿದ್ದಾರೆ. ಆಗಾಗ್ಗೆ ಆತನ ಬೋಂಡ ಗಿರಾಕಿಯಾಗಿ ಹೋಗುತ್ತಿದ್ದ ನಾನು 'ಹೊಸತು'ವನ್ನು ಕೆಲವು ಓದುಗರಿಗೆ ತಲುಪಿಸುವ ಹೊಣೆ ಹೊತ್ತಿದ್ದೆ. ''ನಟರಾಜ... ನೀನೂ ಓದುತ್ತೀಯೇನಯ್ಯಾ ಈ ಪುಸ್ತಕವನ್ನು ?'' ಎಂದಾಗ 'ಓ, ಓದುತ್ತೀನಿ ಕೊಡಿ ಸ್ವಾಮಿ, ಓದುವುದು ನನಗೆ ಇಷ್ಟವಾದ ವಿಚಾರ' ಎಂದ ನಟರಾಜ ಸುಮಾರು ಮೂರು ವರ್ಷಗಳಿಂದ 'ಹೊಸತು'ವಿನ ಓದುಗ. ಪತ್ರಿಕೆಯ ಬಗ್ಗೆ ಅವರು ಹೇಳುವುದಿದು :

''ಬೇರೆ ಪತ್ರಿಕೆಗಳಿಗಿಂತ ವಿಭಿನ್ನವಾಗಿರುವ ಈ ಪುಸ್ತಕದಲ್ಲಿ ಕತೆಗಳು, ಲೇಖನಗಳು ಚೆನ್ನಾಗಿವೆ, ನಾನು ಸಾಮಾನ್ಯ ಕಡೆಯ ಪುಟದಿಂದ ಓದಲು ಪ್ರಾರಂಭಿಸುತ್ತೇನೆ, ಮುಖಪುಟ, ವ್ಯಂಗ್ಯ ಚಿತ್ರಗಳು ಖುಷಿ ಕೊಡುತ್ತವೆ.''



ಯಾವುದೇ ಬ್ಯಾಂಕುಗಳೂ ಈತನ ನೆರವಿಗೆ ಬಂದಿಲ್ಲ (ಇವರೂ ನೆರವು ಕೋರಿ ಹೋಗಿಲ್ಲ ಎನ್ನೋ ಮಾತು ಬೇರೆ); ತನ್ನ ವ್ಯಾಪಾರಾಭಿವೃದ್ಧಿ ಮಾಡುವ ಇಂಗಿತವನ್ನು ವ್ಯಕ್ತಪಡಿಸುವ ನಟರಾಜ್‌ರ ಮನೆಯಲ್ಲಿ ಸಾಕಷ್ಟು ಪುಸ್ತಕಗಳ ಸಂಗ್ರಹವೇ ಇದೆಯಂತೆ. ಆತ ಅದನ್ನು ಬಹಳ ಅಭಿಮಾನದಿಂದ ವ್ಯಕ್ತಪಡಿಸುತ್ತಾರೆ. ಕನ್ನಡ ಪುಸ್ತಕಗಳನ್ನು ಕೊಂಡು ಓದುವ ನಟರಾಜರಂತಹವರ ಸಂತತಿ ಹೆಚ್ಚಾಗಲಿ.

ಚಾಮರಾಜಪುರಂ — **ಕೊ. ಸು. ನರಸಿಂಹಮೂರ್ತಿ**

## ಪ್ರತಿಕ್ರಿಯೆಗೆ ಆಹ್ವಾನ

ಖಾಸಗಿ ಮತ್ತು ಸಾರ್ವಜನಿಕ ಪಾಲುದಾರಿಕೆ ಎಂಬುದು ದೇಶದ ಆರ್ಥಿಕ ಬೆಳವಣಿಗೆಗೆ ಪರಿಣಾಮಕಾರಿ ಮದ್ದೆಂದು ಕಳೆದ ಒಂದು ದಶಕದಲ್ಲಿ ವಿಶೇಷವಾಗಿ ಪ್ರಚುರಪಡಿಸಲಾಗಿದೆ ಮತ್ತು ಅದರಂತೆ ಅನೇಕ ವಲಯಗಳಲ್ಲಿ ಇದನ್ನು ಜಾರಿಗೊಳಿಸಲಾಗಿದೆ. ಬೆಳವಣಿಗೆಯನ್ನು ನಿಜಕ್ಕೂ ಸಾಧಿಸಲಾಗಿದೆಯೇ ಎಂಬ ಪ್ರಶ್ನೆಯನ್ನು ಪ್ರಖರವಾಗಿ ಎತ್ತಲಾಗಿಲ್ಲ. ಮಾಧ್ಯಮಗಳು ಈ ಬಗ್ಗೆ ಮೌನ ವಹಿಸಿವೆ. ಗಣಿಗಾರಿಕೆ ಮತ್ತು ಅನಿಲ, ಈ ಎರಡು ಕ್ಷೇತ್ರಗಳಲ್ಲಿ ಸಾರ್ವಜನಿಕ ಬೊಕ್ಕಸಕ್ಕೆ ಉಂಟಾಗಿರುವ ನಷ್ಟವನ್ನು ಲೆಕ್ಕಹಾಕಿದರೆ ಹಲವು ದಶಲಕ್ಷ ಕೋಟಿಗಳಾಗುವುದು ನಿಶ್ಚಿತ. ಶಿಕ್ಷಣ ಕ್ಷೇತ್ರದಲ್ಲಿ ಇದರ ಹಾವಳಿಯು ಹೇಳಲಸದಳ. ಅಂಬಾನಿ ೨೭ ಮಹಡಿಗಳ ನಿವಾಸ ಕಟ್ಟಿಕೊಳ್ಳುವುದರಲ್ಲಿ ಅಥವಾ ಅಮೆರಿಕಾದ ಯಾವುದೋ ಖಳ ಪತ್ರಿಕೆಯಲ್ಲಿ ಅತಿದೊಡ್ಡ ಸಾಹುಕಾರನ ಪಟ್ಟ ಪಡೆಯುವುದರಲ್ಲಿ ಆಶ್ಚರ್ಯವೆಲ್ಲಿಯದು ? ಅಂತೆಯೇ ನಮ್ಮ ರಾಜ್ಯವು ಗಣಿ ರೆಡ್ಡಿಗಳ ಹತೋಟಿಗೆ ಸಿಲುಕಿರುವುದೂ ಆಶ್ಚರ್ಯಕರವಲ್ಲ. ದೂರಸಂಪರ್ಕ ವಿಭಾಗದಲ್ಲಿ ತಮಿಳುನಾಡಿನ ರಾಜಕಾರಣಿಯೊಬ್ಬನ ನೇತೃತ್ವದಲ್ಲಿ ಸಾವಿರಾರು ಕೋಟಿ ನಷ್ಟವಾಗಿದೆ. ಇಂತಹ ವಿಪತ್ಕಾರಿ ಸಂಗತಿಗಳು ಇನ್ನೆಷ್ಟಿವೆ ? ಈ ಪಟ್ಟಿಗೆ ಕೊನೆಯೆಲ್ಲಿ! ಆ ಹಣವೆಲ್ಲ ದೇಶದ ಬೊಕ್ಕಸಕ್ಕೆ ಸೇರಬೇಕಾದ್ದು, ಆದರೆ ಅದು ಖಾಸಗಿ ಜೇಬು ಚೀಲಗಳನ್ನು ಸೇರಿಕೊಂಡಿದೆ. ಹೀಗಿರುವಾಗ ಅಭಿವೃದ್ಧಿ ಯಾವುದು ಮತ್ತು ಯಾರಿಗಾಗಿ ? ನೆರೆಹಾವಳಿ ಪರಿಹಾರಕ್ಕೆಂದು ಪಾದಯಾತ್ರೆ ಮಾಡುವ ಮಂತ್ರಿಗಳು ಬೊಕ್ಕಸಕ್ಕೆ ಸೇರಬೇಕಾದ ಸಂಪತ್ತನ್ನು ಬಿಟ್ಟುಕೊಟ್ಟಿರುವುದೇಕೆ ? ಸಭ್ಯನೆನ್ನಲಾದ ಪ್ರಧಾನಿ ಕೈಗೊಳ್ಳುವ ಕ್ರಮಗಳು ಎಷ್ಟು ಅಸಭ್ಯ ? ಏರುಪೇರಿನ ಸಾಮಾಜಿಕ ರಚನೆಯು ಇವುಗಳಿಂದ ನೂರ್ಮಡಿ ಘಾತುಕವಾಗಿ ಬೆಳೆದಿದೆ.

ಇದೆಲ್ಲಾ ವಾಸ್ತವಿಕವೆ ಅಥವಾ ನಕ್ಸಲೀಯರಂತಹ ಅಥವಾ ಅವರ ಬೆಂಬಲಿಗರೆನ್ನಲಾದವರ ಕಲ್ಪನೆಯೆ ? ದೇಶಕ್ಕೆ ಸರಿ ಅಭಿವೃದ್ಧಿ ಯಾವುದು ಅದಕ್ಕೆ ಹಾದಿಯೇನು ? ಸಾರ್ವಜನಿಕ ಸಂಪತ್ತು ಸಾರ್ವಜನಿಕರ ಅನುಭೋಗಕ್ಕೆ ದೊರೆಯುವುದು ಯಾವಾಗ ? ಅದಾಗದಿದ್ದರೆ ನಮ್ಮ ಭವಿಷ್ಯವೇನು ?

ಇದನ್ನು ಕುರಿತಂತೆ 'ಹೊಸತು' ಓದುಗರ ಪ್ರತಿಕ್ರಿಯೆಗಳನ್ನು ಆಹ್ವಾನಿಸುತ್ತಿದ್ದೇವೆ. ಆಯ್ದ ಕೆಲವನ್ನು ಪತ್ರಿಕೆಯ ಜನವರಿ ವಾರ್ಷಿಕ ಸಂಚಿಕೆಯಲ್ಲಿ ಪ್ರಕಟಿಸಲಾಗುತ್ತದೆ. ಬರಹವು **ಯಾವ ಕಾರಣದಿಂದಲೂ ೪೦೦ ಪದಗಳನ್ನು ಮೀರಬಾರದೆಂಬುದನ್ನು ದಯವಿಟ್ಟು ತಪ್ಪದೆ ಗಮನಿಸಿ.** ಪ್ರತಿಕ್ರಿಯೆಗಳು ನವೆಂಬರ್ ಕೊನೆಯೊಳಗಾಗಿ ಪತ್ರಿಕೆಯ ಕಚೇರಿಗೆ ತಲುಪಬೇಕು. ನಿಮ್ಮ ಸಹಕಾರವನ್ನು ಕೋರುತ್ತೇವೆ.

— ಸಂ.

ಅಕ್ಟೋಬರ್ ಸಂಚಿಕೆಯಲ್ಲಿ ೪೭ನೇ ಪುಟದಲ್ಲಿರುವ 'ಸೂಜಿ' ಕವನ ಬರೆದವರು ಶ್ರೀ ಕು. ಸ. ಮಧುಸೂದನ, ವಿಜಯ ಬ್ಯಾಂಕ್ ಮಹಡಿ, ರಂಗೇನಹಳ್ಳಿ, ತರೀಕೆರೆ ತಾಲೂಕು, ಚಿಕ್ಕಮಗಳೂರು ಜಿಲ್ಲೆ.

ಸಂಚಿಕೆಯಲ್ಲಿ ವಿಳಾಸವು ತಪ್ಪಾಗಿ ಅಚ್ಚಾಗಿದ್ದುದಕ್ಕೆ ಕ್ಷಮೆ ಕೋರುತ್ತೇವೆ.

— ಸಂ.

# ಕನ್ನಡ ಸೊಗಡುಗಳ ಸುಗ್ಗಿ

**ಈ** ವಿಷಯಕ್ಕೆ ಸಂಬಂಧಪಟ್ಟಂತೆ ಗಮನಿಸಬೇಕಾದ ಮುಖ್ಯಾಂಶಗಳಿವು :

೧. ಸೊಗಡುಗಳು ಸಾಮಾನ್ಯ ಕನ್ನಡದ ಪ್ರಾಬಲ್ಯದಿಂದಾಗಿ ಮರೆಯಾಗುತ್ತಿವೆ.
೨. ಸೊಗಡುಗಳನ್ನು ಉಳಿಸುವ, ಪ್ರೋತ್ಸಾಹಿಸುವ, ಕಾಪಾಡುವ 'ಸೊಗಡುಗಳ ಸುಗ್ಗಿ'
೩. ಪ್ರಾದೇಶಿಕ ವೈಶಿಷ್ಟ್ಯಗಳನ್ನುಳ್ಳ ಜಾನಪದ ಕಲೆಗಳ ಪ್ರದರ್ಶನ
೪. ಪ್ರಾದೇಶಿಕ ವೈಶಿಷ್ಟ್ಯಗಳನ್ನು ಗುರುತಿಸುವ ಪ್ರಬಂಧ ಮಂಡನೆ
೫. ಪ್ರಾದೇಶಿಕ ವೈಶಿಷ್ಟ್ಯಕ್ಕೆ ಕಾರಣಗಳು ಮತ್ತು ಅದನ್ನು ಉಳಿಸಲು ಮಾಡಬೇಕಾದ ಕ್ರಮಗಳು

ಮೇಲಿನ ಮುಖ್ಯಾಂಶಗಳ ಪೈಕಿ ಮೂರನೆಯದನ್ನು ಇಲ್ಲಿ ಪರಿಶೀಲಿಸಲಾಗುತ್ತಿಲ್ಲ.

ಕೋಲಾರ ಜಿಲ್ಲೆ ಮತ್ತು ಬೆಂಗಳೂರು ಜಿಲ್ಲೆಗಳ ಮಾರುಕಟ್ಟೆಯಲ್ಲಿ ಎರಡು ಬಗೆಯ ಅವರೆಕಾಯಿ ಸಿಗುತ್ತದೆ. ಒಂದು, ವರ್ಷದ ಎಲ್ಲ ದಿನಗಳಲ್ಲಿ ಆಗಾಗ್ಗೆ ಸಿಗುವ 'ಏಕರೂಪಿ' ಅವರೆಕಾಯಿ. ಇದನ್ನು ನಾವು ಫಾರಂ ಅವರೆಕಾಯಿ ಎನ್ನುತ್ತೇವೆ. ಇದಕ್ಕೆ ಸೊಗಡು ಇರುವುದಿಲ್ಲ. ಮತ್ತೊಂದು ಸಂಕ್ರಾಂತಿಗೆ ಮುಂಚೆ, ಅವರೆಕಾಯಿ ಸೀಸನ್ನಿನಲ್ಲಿ ಮಾತ್ರ ಸಿಗುವ ನಾಟಿ ಅವರೆಕಾಯಿ. ಇದಕ್ಕೆ ತುಂಬ ಸೊಗಡು ಇರುವುದಲ್ಲದೆ ಮುಟ್ಟಿದರೆ ಕೈಯೆಲ್ಲ ಜಿಡ್ಡಾಗುತ್ತದೆ. ಇದು ಸಹಜವಾಗಿಯೇ 'ಬಹುರೂಪಿ'ಯಾಗಿರುತ್ತದೆ.

ಕೋಲಾರ ಜಿಲ್ಲೆ ಕರ್ನಾಟಕದಲ್ಲಿ ಕಾಡುಗಳನ್ನು ಕಳೆದುಕೊಂಡ ಮೊದಲ ಜಿಲ್ಲೆ. ಕೆ.ಜಿ.ಎಫ್.ಗೆ ಬಂದ ಕರೆಂಟು ಕೋಲಾರ ಜಿಲ್ಲೆಯ ಅರಣ್ಯನಾಶಕ್ಕೆ ಮೊದಲ ಕಾರಣವಾಗಿದೆ. ಕರ್ನಾಟಕದಲ್ಲಿ ಮೊದಲಿಗೆ ಕೋಲಾರಕ್ಕೆ ಯಾಕೆ ಕರೆಂಟು ಬಂತು ಎಂಬುದು ಎಲ್ಲರಿಗೂ ಗೊತ್ತಿದೆ. ಆ ಸಂಗತಿ ಇಲ್ಲಿ ಬೇಡ! ಒಟ್ಟಿನಲ್ಲಿ ಕೋಲಾರ ಜಿಲ್ಲೆಯಲ್ಲಿ ಇದೀಗ ನೆಡುತೋಪುಗಳು ಸಮೃದ್ಧವಾಗಿವೆ. ಇದನ್ನು 'ಮಾನೋ ಕಲ್ಚರ್' ಎನ್ನುತ್ತಾರೆ. ಕೋಲಾರದಲ್ಲಿ ಇನ್ನೊಂದು ಬಗೆಯ ಮಾನೋ ಕಲ್ಚರ್ ಇದೆ. ಒಬ್ಬ ರೈತನಿಗೆ ಹತ್ತು ಎಕರೆ ಜಮೀನಿದೆ ಎಂದಿಟ್ಟುಕೊಳ್ಳಿ. ಈ ಹತ್ತು ಎಕರೆಗೂ ಟಮೋಟೊ ಹಾಕಿಸುವುದು. ಬೆಳೆದ ಟಮೋಟೊ ರಾಶಿಯನ್ನು ಕೋಲಾರದ ಎ.ಪಿ.ಎಂ.ಸಿ.ಗೆ ಹೊತ್ತುಕೊಂಡು ಹೋಗಿ ಸರಿಯಾದ ಬೆಲೆ ಸಿಗದೆ, ನಿರಾಸೆಯಿಂದ ಕುದಿಯುತ್ತಾ ರಾಷ್ಟ್ರೀಯ ಹೆದ್ದಾರಿಯ ಇಕ್ಕೆಲಗಳಲ್ಲಿ ರಾಶಿರಾಶಿಯಾಗಿ ಸುರಿದು ಬಿಡುವುದು. ಇಂಥ ಟಮೋಟೊ ರಾಶಿಯ ಗುಡ್ಡಗಳನ್ನು ನಾನು ಹಲವಾರು ವರ್ಷಗಳಿಂದ ನೋಡುತ್ತಾ ಬಂದಿದ್ದೇನೆ.

ಏಕರೂಪಿಯಾದ ಫಾರಂ ಅವರೆಕಾಯಿ, ಮಾನೋ ಕಲ್ಚರ್ ನೆಡುತೋಪುಗಳು, ಟಮೋಟೊ ರಾಶಿಗಳು ಹೇಗೋ ಹಾಗೆಯೇ ಭಾಷಾ ಜಗತ್ತಿನಲ್ಲಿ ಏಕರೂಪಾತ್ಮಕವಾದ ಪ್ರಮಾಣ ಭಾಷೆಯೂ ಇದೆ. ಇದನ್ನು 'ಲಿಂಗ್ವಿಸ್ಟಿಕ್ ಮಾನೋ ಕಲ್ಚರ್' ಎನ್ನಬಹುದು. ಇದನ್ನು ಲಕ್ಷಿಸಿಯೇ, ''ಸೊಗಡುಗಳು ಸಾಮಾನ್ಯ ಕನ್ನಡದ ಪ್ರಾಬಲ್ಯದಿಂದಾಗಿ ಮರೆಯಾಗುತ್ತಿವೆ'' – ಎಂಬ ಮುಖ್ಯಾಂಶವನ್ನು ವಿಷಯಸೂಚನೆಯಲ್ಲಿ ಕೊಡಲಾಗಿದೆ. 'ಸಾಮಾನ್ಯ ಕನ್ನಡ'ವೆಂದರೆ ಕರ್ನಾಟಕದಾದ್ಯಂತ ಆಳುವ ಶಕ್ತಿಗಳಿಂದ ಚಾಲ್ತಿಯಲ್ಲಿರುವ ಪ್ರಮಾಣ ಭಾಷೆಯೆಂದೇ ತಿಳಿಯಬೇಕು. ಹೈಬ್ರಿಡ್ ತಳಿಗಳ ಉತ್ಸರ್ಪಿಣಿಯಲ್ಲಿ ನಾಟಿ ತಳಿಗಳು ಅಥವಾ ಜವಾರಿ ತಳಿಗಳು ಅವಸರ್ಪಿಣಿಯಾಗಿರುವಂತೆಯೇ ಪ್ರಮಾಣಭಾಷೆ ಮತ್ತು ಉಪಭಾಷೆಗಳ ಸಂಬಂಧವು ಹಾವು-ಏಣಿ ಆಟವಾಗಿದೆ. ಆಳುವ ಶಕ್ತಿಗಳಿಂದಾಗಿ ಪ್ರಮಾಣಭಾಷೆಯು ಏಣಿಯ ಏರುನಡೆಯಲ್ಲಿ ಸಾಗುತ್ತಿದ್ದರೆ, ಉಪಭಾಷೆಗಳು ಅಥವಾ ಸೊಗಡುಗಳು ಹಾವಿನಿಂದ ಕಚ್ಚಿಸಿಕೊಂಡು ಅಧಃಪತನದ ಹಾದಿಯಲ್ಲಿವೆ.

ಕನ್ನಡ ಭಾಷೆಯ ಆಂತರಿಕ ವೈವಿಧ್ಯಗಳು ಅಥವಾ ಉಪಭಾಷೆಗಳು ಅಥವಾ ಸೊಗಡುಗಳು ಹರಿವ ನದಿಯಂತೆ ತನ್ನಷ್ಟಕ್ಕೆ ತಾನು ಸುಮ್ಮನೆ ಹರಿಯುತ್ತಿವೆ. ಇದನ್ನೆ 'ಕವಿರಾಜಮಾರ್ಗ'ದಲ್ಲಿ 'ಕನ್ನಡಂಗಳು' ಎಂದು ಕರೆಯಲಾಗಿದೆ. ಇಂಥ ಸೊಗಡುಗಳ ಸುಗ್ಗಿಯನ್ನು ನಮ್ಮ ಹಿರಿಯರು ವಿಪುಲವಾಗಿ ಸಂಗಹಿಸಿ ಸೂಕ್ತ ಮಾಹಿತಿಯನ್ನು ಕೊಟ್ಟಿದ್ದಾರೆ. ಭಾಷಾವಿಜ್ಞಾನದಲ್ಲಿ 'ಕಾರ್ಪಸ್' ಎಂಬ ಮಾತಿದೆ. ಇದರ ಅರ್ಥ ಡಾಟ ಕಲೆಕ್ಷನ್ ಎಂದು. ಈ ಸೊಗಡುಗಳ ಸಮಾವೇಶದಲ್ಲಿ ಮಾಹಿತಿಗಳ ಮಹಾಪೂರವನ್ನು ತಡೆದು ಇವುಗಳ ಪ್ರಸ್ತುತತೆ ಮತ್ತು ನಿರ್ವಹಣೆಗಳನ್ನು ಕುರಿತು ಚಿಂತನೆ ನಡೆಸಬೇಕೆಂಬ ಇರಾದೆ ನನ್ನಲ್ಲಿದೆ.

ಕೋಲಾರ ಜಿಲ್ಲೆಯನ್ನು ದ್ವಿಭಾಷಿಕ ಅಥವಾ ಬಹುಭಾಷಿಕ ಪ್ರದೇಶವೆಂದು ಕರೆಯಲಾಗಿದೆ. ದ್ವಿಭಾಷಿಕತೆ, ಬಹುಭಾಷಿಕತೆಯ ಪರಿಕಲ್ಪನೆ ಏಕರೂಪಿಯಾದುದಲ್ಲ. ಡಾ|| ಕೆ. ವಿ. ನಾರಾಯಣ ಅವರು 'ದ್ವಿಭಾಷಿಕತೆ' ಎಂಬ ಕಿರುಪುಸ್ತಕದಲ್ಲಿ ಇಪ್ಪತ್ತಕ್ಕೂ ಹೆಚ್ಚು ಬಗೆಯ ದ್ವಿಭಾಷಿಕತೆಯ ಸಂದರ್ಭಗಳನ್ನು ವಿವರಿಸಿದ್ದಾರೆ. ಡಾ|| ಶ್ರೀ

[illegible]
[illegible]
[illegible]
[illegible]
[illegible]
[illegible]
[illegible]
[illegible]
[illegible]
[illegible]
[illegible]
ಭಾಷೆಗಳು ಪ(ನ)ಲ
ವಿನಾಶದವಾಗುವುದನ್ನಿಲ್ಲಿ ಗ್ರಹಿಸಬೇಕು.
[illegible]
[illegible]
[illegible]
[illegible]
[illegible]
[illegible]
[illegible]
[illegible]
[illegible]
[illegible]

ಡಾ|| ಬಿ. ಚಂದ್ರಶೇಖರ ನಂಗಲಿ

ಪರಮೇಶ್ವರ ಭಟ್ಟ ಅವರು ಕೋಲಾರ ಜಿಲ್ಲೆಯ ದ್ವಿಭಾಷಿಕತೆಯ ಸೊಗಡುಗಳನ್ನು ಧ್ವನಿ-ಆಕೃತಿ-ಅರ್ಥ-ವಾಕ್ಯಸ್ತರಗಳ ಪ್ರಗಲ್ಭ ವಿಶ್ಲೇಷಣೆಯೊಂದಿಗೆ ಪರಿಚಯಿಸಿದ್ದಾರೆ. ವ್ಯಾಕರಣ ಮತ್ತು ವರ್ಣನಾತ್ಮಕ ಭಾಷಾವಿಜ್ಞಾನದ ಪರಿಭಾಷೆಗಳಿಂದ ತುಂಬಿಹೋಗಿರುವ ಈ ಅಧ್ಯಯನವನ್ನು ಶಾಸ್ತ್ರೀಯ ಅಥವಾ ಭಾಷಾವೈಜ್ಞಾನಿಕ ಎಂದು ಕರೆಯಬಹುದು.

ಈ ಸಭೆಯಲ್ಲಿ ಯೂನಿಫಾರಂ ಧರಿಸಿಕೊಂಡು ಕುಳಿತಿರುವ ವಿದ್ಯಾರ್ಥಿಗಳು ಟೆಕ್ನಾಲಜಿ ಮತ್ತು ಮ್ಯಾನೇಜ್‌ಮೆಂಟ್ ಕೋರ್ಸಿನವರಾಗಿದ್ದಾರೆ. ಟೆಕ್ನಾಲಜಿ ಮತ್ತು ಮ್ಯಾನೇಜ್‌ಮೆಂಟ್ ಎಂಬ ವಿಚಾರಗಳು ಕೇವಲ ಪದವಿ ಶಿಕ್ಷಣಕ್ಕೆ ಸಂಬಂಧಪಟ್ಟ ವಿಷಯ ಸಂಯೋಜನೆಯೆಂದು ತಿಳಿಯಬಾರದು. ನಮ್ಮ ಬದುಕಿನ ಪ್ರತಿಯೊಂದು ಕ್ಷೇತ್ರದಲ್ಲಿ ಟೆಕ್ನಾಲಜಿ ಮತ್ತು ಮ್ಯಾನೇಜ್‌ಮೆಂಟ್ ಇದ್ದೇ ಇರುತ್ತದೆ. ಕನ್ನಡ ಅಭಿವೃದ್ಧಿ ಪ್ರಾಧಿಕಾರ ಹಮ್ಮಿಕೊಂಡಿರುವ ಈ ಸೊಗಡಿನ ಸಮಾವೇಶದಲ್ಲಿ ಭಾಗವಹಿಸಿರುವ ವಿದ್ಯಾರ್ಥಿಗಳು ನನ್ನ ಮಾತುಗಳನ್ನು ಲಿಂಗ್ವಿಸ್ಟಿಕ್ ಟೆಕ್ನಾಲಜಿ ಮತ್ತು ಲಿಂಗ್ವಿಸ್ಟಿಕ್ ಮ್ಯಾನೇಜ್‌ಮೆಂಟ್ ಎಂಬ ದೃಷ್ಟಿಯಿಂದ ಸ್ವೀಕರಿಸಬೇಕೆಂದು ಕೋರುತ್ತೇನೆ.

'ಭಾಷಾವಿಜ್ಞಾನ' ಅಥವಾ 'ಲಿಂಗ್ವಿಸ್ಟಿಕ್ಸ್' ಎಂಬುದು ಇಪ್ಪತ್ತನೇ ಶತಮಾನದ ಜ್ಞಾನಶಾಖೆಯಾಗಿದೆ. ಜಾತಿಪದ್ಧತಿಯ ತದ್ರೂಪಿಯಂತಿರುವ ಇಂದಿನ ಶೈಕ್ಷಣಿಕ ವ್ಯವಸ್ಥೆಯಲ್ಲಿ ವಿಶೇಷ ಅಧ್ಯಯನ ಮಾಡುವವರು ಮಾತ್ರ ಭಾಷಾವಿಜ್ಞಾನವನ್ನು ಓದುವ ಅವಕಾಶ ಪಡೆದಿದ್ದಾರೆ. 'ಭಾಷೆ'ಯನ್ನು ಕುರಿತ ವೈಜ್ಞಾನಿಕ ತಿಳುವಳಿಕೆ ಇತರ ಕ್ಷೇತ್ರದ ಪದವೀಧರರಿಗೂ ಇರುವುದಿಲ್ಲ. ಇದರಿಂದಾಗಿ, ಭಾಷೆಗಳ ಬಗ್ಗೆ ವಿದ್ವಾಂಸರಲ್ಲೇ ತಪ್ಪು ಗ್ರಹಿಕೆಗಳು ತುಂಬಾ ಇವೆ. ಇದನ್ನೆಲ್ಲ ಗಮನದಲ್ಲಿಟ್ಟುಕೊಂಡು ಕನ್ನಡ ಭಾಷೆಯ ಆಂತರಿಕ ವೈವಿಧ್ಯಗಳು ಅಥವಾ ಸೊಗಡುಗಳ ಸಮರ್ಪಕ ಗ್ರಹಿಕೆಗಾಗಿ 'ತಿರುಳು' ಎನ್ನಬಹುದಾದ ವಿಚಾರಸರಣಿಯನ್ನು ಪರಿಚಯಿಸುತ್ತಿದ್ದೇನೆ :

**ವೈವಿಧ್ಯತ್ರಯಗಳು**

ಭಾಷಿಕ ವೈವಿಧ್ಯತೆ + ಸಂಸ್ಕೃತಿ ವೈವಿಧ್ಯತೆ + ಜೈವಿಕ ವೈವಿಧ್ಯತೆ










| | | |
|---|---|---|
| ೧. ವ್ಯಕ್ತಿ ಭಾಷೆಗಳು | ೧. ಆದಿಮರು | ೧. ಸಸ್ಯ ಪರಿಸರ |
| ೨. ಉಪಭಾಷೆಗಳು (= ಸೊಗಡುಗಳು) | ೨. ಮಧ್ಯಮರು | ೨. ಪ್ರಾಣಿ ಪರಿಸರ |
| ೩. ಪ್ರಮಾಣ ಭಾಷೆ | ೩. ಉತ್ತಮರು | ೩. ಮನುಷ್ಯ ಪರಿಸರ |

ನಮ್ಮ ದೇಶದ ಮಟ್ಟಿಗೆ ಈ ವೈವಿಧ್ಯತ್ರಯಗಳನ್ನು ಪ್ರತ್ಯೇಕಿಸಿ ನೋಡುವಂತಿಲ್ಲ. ಈ ಮೂರನ್ನು ಕೂಡಲಸಂಗಮದಂತೆ ಏಕಗ್ರಾಹಕವಾಗಿ ಪರಿಭಾವಿಸಬೇಕು : ಭಾಷಿಕ ಪಿರಮಿಡ್, ಜಾತಿ ಪಿರಮಿಡ್ ಮತ್ತು ಹಸಿರು ಪಿರಮಿಡ್ ಎಂದು ಹೆಸರು ಪಡೆದಿರುವ ಈ ವೈವಿಧ್ಯತ್ರಯಗಳ ಸಮಾನಧರ್ಮವೆಂದರೆ ಮೇಲುಕೀಳಿನ ಕಲ್ಪನೆ. ಇದನ್ನು ಉರುಳಿಸುವ ಸಲುವಾಗಿಯೇ ಕ್ರಮಸಂಖ್ಯೆಗಳನ್ನು ತಲೆಕೆಳಗಾಗಿ ಕೊಡಲಾಗಿದೆ, 'ಅಧಮರು' ಎಂಬ ಹೀನೋಕ್ತಿಯನ್ನು ಬಳಸದೆ, 'ಆದಿಮರು' ಎಂದು ಕರೆಯಲಾಗಿದೆ. ಭಾಷಾಬಳಕೆ ಒಂದು ರಾಜಕಾರಣವಾದ್ದರಿಂದ ನಾನಿಲ್ಲಿ 'ರಾಜಕೀಯ' ಮಾಡಿದ್ದೇನೆ.

**ಭಾಷಿಕ ಜಲಚಕ್ರ**




ಜಪಾನ್ ದೇಶದ ಸಿನೆಮಾ ನಿರ್ದೇಶಕ ಅಕಿರೊ ಕುರೊಸಾವ ನಿರ್ಮಿಸಿದ 'ಡ್ರೀಮ್ಸ್' ಎಂಬ ಚಲನಚಿತ್ರದಲ್ಲಿ 'ವಾಟರ್‌ಮಿಲ್ ವಿಲೇಜ್' ಎಂಬ ದೃಶ್ಯ ನಿರೂಪಣೆಯಿದೆ. ಈ ಹಳ್ಳಿಯಲ್ಲಿ ವಿದ್ಯುಚ್ಛಕ್ತಿ ಇರುವುದಿಲ್ಲ. ಹಳ್ಳಿಯನ್ನು ಬಳಸಿಕೊಂಡು ಹರಿಯುತ್ತಿರುವ ತೊರೆಯ ದಡದಲ್ಲಿ ಅಲ್ಲಲ್ಲಿ ಜಲಚಕ್ರಗಳನ್ನು ಅಳವಡಿಸಿರುತ್ತಾರೆ. ಈ ಚಕ್ರದ ಒಳಗಡೆ ದೊಡ್ಡ ದೊಡ್ಡ ಬೋಗುಣಿಗಳನ್ನು ಜೋಡಿಸಿರುತ್ತಾರೆ. ತೊರೆಯ ಚಲನಶಕ್ತಿಯಿಂದ ಬೋಗುಣಿಯಲ್ಲಿ ನೀರು ತುಂಬಿಕೊಂಡು ಮೇಲಕ್ಕೆ ಏರುತ್ತದೆ. ಒಂದಾದ ಮೇಲೊಂದರಂತೆ ಬೋಗುಣಿಗಳಿರುವುದರಿಂದ ಈ ಜಲಚಕ್ರ ನಿರಂತರವಾಗಿ ತಿರುಗುತ್ತಿರುತ್ತದೆ. ಮೇಲಿನ ರೇಖಾಚಿತ್ರವನ್ನು ನಾನು ಈ ಸಿನೆಮಾದಿಂದ ಪಡೆದಿದ್ದೇನೆ. ಜನಭಾಷೆಗಳು (= ಸೊಗಡುಗಳು) ಅಥವಾ ಕನ್ನಡಂಗಳು ಹರಿವ ನದಿಯಂತೆ ನಿರಂತರ ಗತಿಶೀಲವಾಗಿರುತ್ತವೆ. ಈ ಜನಭಾಷೆಗಳೊಂದಿಗೆ ಸಮೀಪ ಸಂಬಂಧ ಹೊಂದಿರುವವರೆಂದರೆ ಸಾಹಿತಿಗಳೇ ಆಗಿದ್ದಾರೆ. ಆದ್ದರಿಂದಲೇ 'ಜನವಾಣಿ ಬೇರು ಕವಿವಾಣಿ ಹೂವು' ಎಂಬ ನುಡಿ ಚಾಲ್ತಿಯಲ್ಲಿದೆ. ಜನಭಾಷೆಗಳನ್ನು ತನಗೆ ಬೇಕಾದಂತೆ ಎತ್ತಿಕೊಂಡು, ಸುಧಾರಿತಗೊಳಿಸಿದಾಗ 'ಶಿಷ್ಟಭಾಷೆ' ರೂಪುಗೊಳ್ಳುತ್ತದೆ. ಈ ಶಿಷ್ಟಭಾಷೆಯೇ ಆಳುವ ಶಕ್ತಿಗಳ ಒತ್ತಾಸೆಯಿಂದ ಪ್ರಮಾಣಭಾಷೆಯಾಗಿ ಮಾರ್ಪಟ್ಟು ಪ್ರಭುತ್ವದ ಮುಖವಾಣಿಯಾಗುತ್ತದೆ. ಜನಭಾಷೆಗಳೆಂಬ ತೊರೆಯಿಂದ ಮೇಲುಮೇಲಕ್ಕೇರಿದಂತೆಲ್ಲ ಸುಧಾರಿತ ಭಾಷೆಗಳು ಜ(ನ)ಲ ವಿದೂರವಾಗುವುದನ್ನಿಲ್ಲಿ ಗ್ರಹಿಸಬೇಕು. ಜನಭಾಷೆಗಳೆಂಬ ತೊರೆಯ ಸಂಪರ್ಕ ತಪ್ಪಿಹೋದರೆ, ಈ ಭಾಷಿಕ ಜಲಚಕ್ರ ತಿರುಗುವುದೇ ಇಲ್ಲ. ಜಲವಿಲ್ಲದ ಬೋಗುಣಿಗಳು ಒಣಗುತ್ತಾ ಕ್ರಮೇಣ ತುಕ್ಕುಹಿಡಿಯ ಲಾರಂಭಿಸುತ್ತವೆ. ಕನ್ನಡದ ಮಟ್ಟಿಗೆ ಹೇಳುವುದಾದರೆ, ಭಾಷಿಕ ಜಲಚಕ್ರಕ್ಕೆ ಹರಿವ ನದಿಯ ಸಂಪರ್ಕ ತಪ್ಪಿಹೋಗಿದ್ದು ಯಜಮಾನಭಾಷೆಗಳು ಮತ್ತು ಜನಭಾಷೆಗಳು ಎಂಬ ವಿರುದ್ಧ ಧ್ರುವಗಳು ನಿರ್ಮಾಣಗೊಂಡಿವೆ.

**ಭಾಷಿಕ ಬಹುತ್ವ ಮತ್ತು ಏಕೀಕರಣ ಚಳುವಳಿ**

ದ್ವಿಭಾಷಿಕತೆ/ಬಹುಭಾಷಿಕತೆಯ ವಲಯಗಳನ್ನು 'ವಸಾಹತು ಪೂರ್ವ' ಮತ್ತು 'ವಸಾಹತೋತ್ತರ' ಎಂದು ನೋಡುವ ಅಗತ್ಯವಿದೆ. ಏಕೆಂದರೆ ವಸಾಹತು ಪೂರ್ವ ದ್ವಿಭಾಷಿಕತೆಯು ನಿಸ್ಸೀಮವಾದುದು; ಇದಕ್ಕೆ ರಾಜ್ಯಶಕ್ತಿಯ ಸರಹದ್ದುಗಳಿರಲಿಲ್ಲ. ಆದರೆ ವಸಾಹತೋತ್ತರ ದ್ವಿಭಾಷಿಕತೆಯು ಸೀಮಾಬದ್ಧವಾಗಿ ಪರಿಣಮಿಸಿತು. ಭಾಷಾವಾರು ರಾಜ್ಯಗಳ ಪರಿಕಲ್ಪನೆಯಲ್ಲಿ ಏಕೀಕೃತ ವ್ಯವಸ್ಥೆ ಅಥವಾ ಏಕೀಕರಣದ ತೀವ್ರ ತುಡಿತವಿರುತ್ತದೆ. ಈ ದೃಷ್ಟಿಯಿಂದ ಕರ್ನಾಟಕದ ಏಕೀಕರಣದ ಚಳುವಳಿಗೂ 'ಪ್ರಮಾಣಭಾಷೆ ಕನ್ನಡ'ಕ್ಕೂ ಜನ್ಯ-ಜನಕ ಸಂಬಂಧವಿದೆ. 'ರಾಜ್ಯ'ದ ಆಡಳಿತ, ಶಿಕ್ಷಣ, ಸಂಪರ್ಕ-ಸಂವಹನ ಕ್ಷೇತ್ರಗಳು 'ಪ್ರಮಾಣಭಾಷೆ ಕನ್ನಡ'ದ ಪೋಷಕ ಶಕ್ತಿಗಳು. ಆದ್ದರಿಂದಲೇ ಡಾ|| ಕೆ. ವಿ. ನಾರಾಯಣ ಅವರು ''ರಾಜ್ಯ ಶಕ್ತಿಗಳು ಬಹುತ್ವದ ವಿರೋಧಿಯಾಗಿರುತ್ತವೆ'' – ( ದ್ವಿಭಾಷಿಕತೆ, ಪು. ೩೦) ಎಂದು ಹೇಳಿದ್ದಾರೆ.

ಕನ್ನಡ ಭಾಷಾ ಜಗತ್ತಿನಲ್ಲಿ 'ಭಾಷಿಕ ಬಹುತ್ವ' ಅಥವಾ 'ಕನ್ನಡಂಗಳು' ಸಮೃದ್ಧವಾಗಿವೆ. ಜನಸಮುದಾಯಗಳ ಬಳಕೆಯಲ್ಲಿರುವ 'ಸೊಗಡುಗಳು' ಅಥವಾ 'ಕನ್ನಡಂಗಳು' – ಕನ್ನಡ ಭಾಷಾ ಜಗತ್ತಿನ ಆದಿಶಕ್ತಿಯಾಗಿದೆ. ಇದನ್ನೆಲ್ಲ ಸಮಗ್ರವಾಗಿ ದಾಖಲಿಸಲು, ಅಧ್ಯಯನ ಮಾಡಲು ಇಡೀ ಜೀವಮಾನವೂ ಸಾಕಾಗುವುದಿಲ್ಲ. ತನ್ನಷ್ಟಕ್ಕೆ ತಾನು ನಿರಂತರವಾಗಿ ಹರಿಯುತ್ತಿರುವ 'ಭಾಷಿಕ ಬಹುತ್ವ'ವನ್ನು ನಿರ್ಲಕ್ಷಿಸುತ್ತಿರುವ ರಾಜ್ಯಶಕ್ತಿಗಳಿಂದಾಗಿ 'ಪ್ರಮಾಣ ಭಾಷೆ ಕನ್ನಡ'ವು ಜನವಿದೂರವಾಗಿದೆ. ಜನಸಮುದಾಯಗಳಲ್ಲಿ ಬಳಕೆಯಲ್ಲಿಲ್ಲದ ಸಂಸ್ಕೃತ ಅನುವಾದಗಳು, ಕನ್ನಡ ಅನುವಾದಗಳು 'ಪ್ರಮಾಣಭಾಷೆ'ಯೊಳಗೆ ನುಸುಳಿ ಬಂದವು. ಜನಸಮುದಾಯಗಳ 'ನಾಲಗೆ'ಯಾಗಿ ಕರ್ತವ್ಯ ನಿರ್ವಹಣೆ ಮಾಡಬೇಕಾಗಿದ್ದ ಪ್ರಭುತ್ವವು ಭಾಷಾಂತರ ಇಲಾಖೆ, ಅನುವಾದ ಅಕಾಡೆಮಿ ಇತ್ಯಾದಿಗಳನ್ನು ಸ್ಥಾಪನೆಮಾಡಿ ವಿದ್ವಜ್ಜನರನ್ನು ಪ್ರೋತ್ಸಾಹ ಮಾಡುತ್ತಿರುವುದು ದುರಂತ ವ್ಯಂಗ್ಯವಾಗಿದೆ. ರೇಡಿಯೋ, ಟಿವಿ, ಮೊಬೈಲುಗಳನ್ನು ಆಕಾಶವಾಣಿ, ದೂರದರ್ಶನ, ಜಂಗಮವಾಣಿ ಎಂದು ಅನುವಾದಿಸುವುದು 'ಭಾಷಿಕ ಹಿನ್ನಡೆ'ಯಾಗಿದೆ. ಅಚ್ಚಗನ್ನಡವೆಂಬ ಮೋಹಕ್ಕೊಳಗಾಗಿ ಬಾನುಲಿ, ನಡೆಯುಲಿ ಎಂದು ಅನುವಾದಿಸುವುದು ಕೂಡ 'ಭಾಷಿಕ ಹಿನ್ನಡೆ'ಯಾಗುತ್ತದೆ.

ನೆರೆರಾಜ್ಯವಾದ ಆಂಧ್ರದಲ್ಲಿ 'ಪ್ರಮಾಣಭಾಷೆ ತೆಲುಗು' ಜನಸಮುದಾಯಗಳಲ್ಲಿ ಬಳಕೆಯಲ್ಲಿರುವ ಆದಿಶಕ್ತಿಗೆ ಬದ್ಧವಾಗಿದ್ದು 'ಭಾಷಿಕ ಮುನ್ನಡೆ'ಯನ್ನು ಅಳವಡಿಸಿಕೊಂಡಿದೆ. ಜನಭಾಷೆಗಳಲ್ಲಿ ಅಥವಾ ಸೊಗಡುಗಳಲ್ಲಿ ಚಾಲ್ತಿಯಲ್ಲಿರುವ ಇಂಗ್ಲಿಷ್ ಮಾತು ಮತ್ತು ತೆಲುಗು ನುಡಿಗಳಿಗೆ 'ಪ್ರಮಾಣಭಾಷೆ ತೆಲುಗು' ತನ್ನನ್ನು ತೆರೆದುಕೊಂಡಿದೆ. ಇದು 'ಪ್ರಮಾಣಭಾಷೆ'ಗೆ ಸಂಬಂಧಪಟ್ಟಂತೆ 'ಕನ್ನಡ ಮಾದರಿ' ಅಥವಾ 'ತಮಿಳು ಮಾದರಿ'ಯಂತೆ

ಇರದೆ, ಅತ್ಯಂತ ವಿಶಿಷ್ಟವಾದ 'ತೆಲುಗುಮಾದರಿ'ಯಾಗಿದೆ. ಈ ದಿಸೆಯಲ್ಲಿ ಜನಸಮುದಾಯಗಳ ಭಾಷಾ ಬಳಕೆಯ ಆದಿಶಕ್ತಿಯನ್ನೇ ಕೈಹಿಡಿದ ವಚನಕಾರರಿಂದ, ತತ್ವಪದಕಾರರಿಂದ, ಕನ್ನಡ ಜನಪದರಿಂದ 'ಪ್ರಮಾಣಭಾಷೆ ಕನ್ನಡ' ಪಾಠ ಕಲಿಯಲಿಲ್ಲವೆಂಬುದು ಕನ್ನಡಿಗರ ಭಾಷಾನಿರ್ವಹಣೆಯ ವೈಫಲ್ಯವನ್ನು ಸೂಚಿಸುತ್ತದೆ.

ಭಾಷಿಕ ಬಹುತ್ವದ ಕಾಡುಗಳನ್ನು ನಾಶಗೊಳಿಸಿ, ಭಾಷಿಕ ಏಕತ್ವದ ತೋಪುಗಳನ್ನು ಪೋಷಿಸುತ್ತಿರುವ ರಾಜ್ಯಶಕ್ತಿಗಳ ಚಾಲಕನಾಗಿ ಕಾರ್ಯ ನಿರ್ವಹಿಸುವ 'ಪ್ರಮಾಣಭಾಷೆ ಕನ್ನಡ'ದ ಅಪಾಯಗಳೇನೆಂಬುದು ನಿಧಾನವಾಗಿ ಮನವರಿಕೆಯಾಗುತ್ತಿದೆ. ಭಾಷಿಕ ತೋಪಾಗಿಬಿಡುವ 'ಏಕರೂಪಿ' ಪ್ರಮಾಣಭಾಷೆಗೆ ಬದಲು ಭಾಷಿಕ ಕಾಡುಗಳನ್ನು ಒಳಗೊಳ್ಳುವ 'ಬಹುರೂಪಿ' ಪ್ರಮಾಣಭಾಷೆಯನ್ನು ನಿರಂತರವಾಗಿ ರೂಪಿಸಿಕೊಳ್ಳಬೇಕಾದ ಅನಿವಾರ್ಯತೆ ನಮ್ಮ ಎದುರಿದೆ.

ವಸಾಹತುಪೂರ್ವ ದ್ವಿಭಾಷಿಕತೆಯು ಹಾವು-ಏಣಿ ಆಟದ ಏಣಿಯ ಏರುನಡೆಯಾಗಿದ್ದರೆ, ವಸಾಹತೋತ್ತರ ದ್ವಿಭಾಷಿಕತೆಯು ಹಾವಿನ ಇಳಿನಡೆಯಾಗಿದೆ. ಜನಸಮುದಾಯಗಳಿಗಾಗಿ ಆರಂಭಗೊಂಡ ಆಡಳಿತ-ಶಿಕ್ಷಣ-ಸಂಪರ್ಕ-ಸಂವಹನ ಕ್ಷೇತ್ರಗಳು 'ಜನವಿದೂರ' ಪ್ರಮಾಣಭಾಷೆಯಿಂದಾಗಿ, ಜನಸಮುದಾಯಗಳನ್ನು ಒಳಗೊಳ್ಳಲು ವಿಫಲಗೊಂಡವು. ವಿಶ್ವಮಾನ್ಯ ಇಂಗ್ಲಿಷ್, ರಾಷ್ಟ್ರಭಾಷೆ ಹಿಂದಿ, ಪ್ರಮಾಣ ಭಾಷೆ ಕನ್ನಡಗಳೆಂಬ ಭಾಷಾನೀತಿಯ ಅನುಸರಣೆಯೂ ಈ ವೈಫಲ್ಯಕ್ಕೆ ಒಂದು ಕಾರಣವಾಗಿದೆ. ಸುದ್ದಿಸಮಾಚಾರದ ಪತ್ರಿಕೋದ್ಯಮ, ರೇಡಿಯೋ-ಟಿವಿ ಕಾರ್ಯಕ್ರಮಗಳು ಕೂಡ ಪರೋಕ್ಷವಾಗಿ 'ಭಾಷಿಕ ಹಿನ್ನಡೆ'ಯ ಪ್ರಮಾಣ ಭಾಷೆ ಕನ್ನಡವನ್ನೇ ಪೋಷಿಸುತ್ತಿವೆ.

ಏಕೀಕರಣ ಚಳುವಳಿ ಮತ್ತು ಭಾಷಾವಾರು ರಾಜ್ಯನೀತಿಗಳಿಂದ ಕರ್ನಾಟಕ ರಾಜ್ಯವೆಂಬ ಸರಹದ್ದುಗಳನ್ನು ಪಡೆದು 'ಏಕರೂಪಿ' ಪ್ರಮಾಣಭಾಷೆಯನ್ನು ರೂಪಿಸಿಕೊಂಡಿರುವ ನಾವು ಇನ್ನುಮೇಲಾದರೂ 'ಬಹುರೂಪಿ' ಪ್ರಮಾಣಭಾಷೆಯ ಬಗ್ಗೆ ಆಸಕ್ತರಾಗಬೇಕಾಗಿದೆ. ಕನ್ನಡ ಅಭಿವೃದ್ಧಿ ಪ್ರಾಧಿಕಾರ ಪ್ರಕಟಿಸಿರುವ ಟಿಪ್ಪಣಿ ಪುಸ್ತಕದಲ್ಲಿ ''ಪ್ರಜೆಗಳ ಭಾಷೆ ಪ್ರಜಾಪ್ರಭುತ್ವದ ಸಾರ'' – ಎಂದು ಮುದ್ರಿಸಲಾಗಿದೆ. ಈ ಘೋಷವಾಕ್ಯದ ತಿರುಳನ್ನೆ 'ಭಾಷಿಕ ಪ್ರಜಾಪ್ರಭುತ್ವ' (= ಲಿಂಗ್ವಿಸ್ಟಿಕ್ ಡೆಮಾಕ್ರಸಿ) ಎನ್ನಬಹುದು. ಆದರೆ, ಈಗಿನ ಪ್ರಮಾಣಭಾಷೆ ಕನ್ನಡದಲ್ಲಿ 'ಭಾಷಿಕ ಸರ್ವಾಧಿಕಾರ' (= ಲಿಂಗ್ವಿಸ್ಟಿಕ್ ಡಿಕ್ಟೇಟರ್‌ಶಿಪ್) ಜಾರಿಯಲ್ಲಿದೆ.

**ಸೊಗಡುಗಳ ಮ್ಯೂಸಿಯಂ**

''ಸೊಗಡುಗಳನ್ನು ಉಳಿಸುವ, ಪ್ರೋತ್ಸಾಹಿಸುವ, ಕಾಪಾಡುವ''... ಎಂಬ ಗ್ರಹಿಕೆ ಸರಿಯಾದುದಲ್ಲ. ಪ್ರಾಚ್ಯ ವಸ್ತುಗಳ ಮ್ಯೂಸಿಯಂ, ಜಾನಪದ ಮ್ಯೂಸಿಯಂ ಎಂಬಂತೆ 'ಸೊಗಡುಗಳ ಮ್ಯೂಸಿಯಂ' ಆಗಿಬಿಡುವ ದೃಷ್ಟಿಕೋನ ಇಲ್ಲಿದೆ. ಹರಿವ ನೀರಿಗೆ ಯಾರಪ್ಪಣೆ ? – ಎಂಬಂತೆ ತನ್ನಷ್ಟಕ್ಕೆ ತಾನು ಸೊಗಡುಗಳು ನಿರಂತರವಾಗಿ ಹರಿಯುತ್ತಿವೆ. ಇದನ್ನು ಉಳಿಸುವುದು, ತಡೆಯುವುದು ನಮ್ಮ ಕೈಯಲ್ಲಿಲ್ಲ. ಸೊಗಡುಗಳಿಂದ ಹೊರಗುಳಿದಾಗ ಉಳಿಸುವ, ಪ್ರೋತ್ಸಾಹಿಸುವ, ಕಾಪಾಡುವ ಗ್ರಹಿಕೆ ಮೂಡಿಬರುತ್ತದೆ. ಪ್ರಸ್ತುತ, ಪ್ರಮಾಣಭಾಷೆಯಲ್ಲಿ ಸೊಗಡುಗಳನ್ನು ಬಳಸುವ, ಒಳಗೊಳ್ಳುವ ಬಗೆಗಳು ಬಹುಮುಖ್ಯ ! ಈ ವಿಚಾರವನ್ನು 'ಸೊಗಡುಗಳ ನಿರ್ವಹಣೆ' ಅಥವಾ 'ಬಹುತ್ವದ ನಿರ್ವಹಣೆ' ಎಂದು ಕರೆಯಬಹುದು.




ಮೇಲ್ಕಾಣಿಸಿದ (೧) ಪ್ರಮಾಣ ಭಾಷೆ - ಅಪ್ರಮಾಣ ಭಾಷೆ (೨) ಏಕರೂಪಿ - ಬಹುರೂಪಿ (೩) ಶಬ್ದಜ್ಞಾನ - ಬಿಂಬಜ್ಞಾನ ಎಂಬ ವೈರುಧ್ಯಗಳನ್ನು ಸಮರ್ಪಕವಾಗಿ ಅರ್ಥಮಾಡಿಕೊಂಡರೆ, ಸೊಗಡುಗಳ ಮಹತ್ವವೇನೆಂಬುದು ಪ್ರತೀತವಾಗುತ್ತದೆ. ಈ ಸೊಗಡುಗಳ ಬಳಕೆ ಮತ್ತು ಸಾಧ್ಯತೆಗಳನ್ನು ಮುಂದೆ ನಿರೂಪಿಸಲಾಗಿದೆ.

## ಮಳೆ



ಇಳೆಯಲ್ಲಿ
ನಕ್ಷತ್ರ ಮೂಡಿಸಿ
ಬಣ್ಣವಿಲ್ಲ ನೀರಿಗೆ
ಕೆಂಬಣ್ಣ ಎರಚಿ
ಮಣ್ಣಿಗೊಂದಷ್ಟು
ನವಿರುಗಂಪು ಕೊಟ್ಟು
ಭೋರೆಂದು ಸುರಿಯುತ್ತಲೇ
ಇದೆ ಸೂರಿನಡಿಯಲಿ
ಮಳೆ
ಸುರಿ ಸುರಿದು
ಇಳೆಯ ಒಡಲೊಳಗೆ
ಹರಿದು
ಹೊಳೆಯಾಗಿ ನಲಿದು
ಕಡಲೊಳಗೆ ಸೇರಿ
ಚಿಪ್ಪಿನ ಮುತ್ತಾದುದ
ನೋಡಿ
ಆಗಸಕ್ಕೆ ಎದೆ ತುಂಬಿಬಂದು
ಕಣ್ಣೊರೆಸಿಕೊಳ್ಳುತ್ತಿದೆ.

ಆಗ ನನಗನ್ನಿಸುವುದು...
ಕೋಟಿ ಕೋಟಿ ಹನಿಯೊಳಗೆ
ಒಂದು ಜಲಬಿಂದು
ಚಿಪ್ಪ ಮುತ್ತಾಗಿ
ಕಣ್ಣ ಸ್ವತ್ತಾಗಬೇಕಾದರೆ
ಮಳೆಗೂ ಒಂದು
ಗಮ್ಯವಿದ್ದಿರಬೇಕು.

ಸ್ಮಿತಾ ಅಮೃತರಾಜ್ ಸಂಪಾಜೆ, ಸುಳ್ಯ
'ಹಸಿರು', ಬಾಲಾಜಿ ಅಂಚೆ, ಚೆಂಬು ಗ್ರಾಮ, ಮಡಿಕೇರಿ ತಾಲ್ಲೂಕು, ಕೊಡಗು ಜಿಲ್ಲೆ - ೫೭೧ ೨೩೪

## ಸೊಗಡುಗಳ ಬಳಕೆ ಮತ್ತು ಸಾಧ್ಯತೆಗಳು

೧. ಕನ್ನಡ ಸಾಹಿತ್ಯದಲ್ಲಿ 'ಪ್ರಾದೇಶಿಕ ಕಾದಂಬರಿಗಳು' – ಎಂಬ ಹಣೆಪಟ್ಟಿ ಹೊತ್ತಿರುವ ಕೃತಿಗಳಲ್ಲಿ ಬಿಂಬಜ್ಞಾನದ ಸಮೃದ್ಧಿಯಿದೆ. ಕನ್ನಡ ಸಾಹಿತಿಗಳು ಸೊಗಡುಗಳ ಬಿಂಬಜ್ಞಾನವನ್ನು ಬಳಸಿದಂತೆ ಮತ್ತು ಒಳಗೊಂಡಂತೆ ಇತರ ಕ್ಷೇತ್ರಗಳಲ್ಲಿಯೂ ಒಳಗೊಳ್ಳಬೇಕಾಗಿದೆ.

೨. ವಿಜ್ಞಾನ ಪ್ರಪಂಚದ ಸಂಪುಟಗಳನ್ನು ರಚಿಸಿರುವ ಶಿವರಾಮ ಕಾರಂತರು ಕನ್ನಡ ನಾಡಿನ ಹಕ್ಕಿಗಳಿಗೆ ತನ್ನದೇ ಆದ ಹೆಸರುಗಳಿಲ್ಲವೆ ? ಹಕ್ಕಿಗಳನ್ನು ಇಂಗ್ಲಿಷ್ ಹೆಸರುಗಳಿಂದಲೇ ಕರೆಯಬೇಕೆ ? – ಎಂಬ ಪ್ರಶ್ನೆಯನ್ನು ಹಾಕಿದ್ದಾರೆ. ಈ ದಿಸೆಯಲ್ಲಿ ಕನ್ನಡನಾಡಿನ ವಿವಿಧ ಪ್ರಾದೇಶಿಕ ಸೊಗಡುಗಳತ್ತ, ಸಾಮಾಜಿಕ ಸೊಗಡುಗಳತ್ತ ದೃಷ್ಟಿ ಹರಿಸಬಹುದು. 'ಕನ್ನಡನಾಡಿನ ಹಕ್ಕಿಗಳು' – ಎಂಬ ಸಚಿತ್ರ ಪುಸ್ತಕವನ್ನು ರಚಿಸಿರುವ ಪೂರ್ಣಚಂದ್ರ ತೇಜಸ್ವಿಯವರು ಸಲೀಂ ಅಲಿಯವರ ಹೆಸರುಗಳೊಂದಿಗೆ ಮಲೆನಾಡಿನ ಹಕ್ಕಿಗಳ ಹೆಸರುಗಳನ್ನು ಸಮೀಕರಿಸಿ, ಕಾರಂತರ ಆಶಯಕ್ಕೆ ಸ್ಪಂದಿಸಿದ್ದಾರೆಂದು ಹೇಳಬಹುದು.

೩. 'ಹಸುರು ಹೊನ್ನು' – ಕೃತಿ ರಚಿಸಿರುವ ಬಿ.ಜಿ.ಎಲ್. ಸ್ವಾಮಿ ಅವರು ಪಶ್ಚಿಮಘಟ್ಟಗಳ ಕಾಡುಗಳಲ್ಲಿರುವ ಸಸ್ಯ ಜಗತ್ತನ್ನು ಪರಿಚಯಿಸುತ್ತಾ ಸಸ್ಯಶಾಸ್ತ್ರೀಯ ಹೆಸರುಗಳೊಂದಿಗೆ, ಸಂಸ್ಕೃತದಲ್ಲಿರುವ ಹಾಗೂ ಕನ್ನಡ-ತೆಲುಗು-ತಮಿಳು ಭಾಷೆಗಳಲ್ಲಿರುವ ತಮಗೆ ತಿಳಿದ ಹೆಸರುಗಳನ್ನು ಸಮೀಕರಿಸಿ ನಿರೂಪಿಸಿದ್ದಾರೆ. ಇದು ಕೇವಲ ಒಬ್ಬ ವ್ಯಕ್ತಿಯಿಂದ ಆಗುವ ಕಾರ್ಯವಲ್ಲವೆಂಬುದಕ್ಕೆ ಒಂದೆರಡು ಉದಾಹರಣೆ ಕೆಳಗಿನ ವಿವರಣೆಯಲ್ಲಿದೆ.

(i) 'ಗ್ಲೋರಿಯೋಸ ಸೂಪರ್ಬ' ಎಂಬ ಹೂವಿನ ಹೆಸರನ್ನು ತುಂಬ ಮೆಚ್ಚಿಕೊಳ್ಳುವ ಬಿ. ಜಿ. ಎಲ್. ಸ್ವಾಮಿ ಅವರು ಇದಕ್ಕೆ ಸಂಸ್ಕೃತದಲ್ಲಿರುವ ಅಗ್ನಿಶಿಖೆ, ಅಗ್ನಿಜಿಹ್ವೆ ಎಂಬ ಹೆಸರುಗಳೊಂದಿಗೆ ತಮಿಳಿನ 'ಕಾದಲ್ ಪೂ' ಉಲ್ಲೇಖಗಳನ್ನು ಮೆಚ್ಚುಗೆಯಿಂದ ನೀಡಿದ್ದಾರೆ. ಕನ್ನಡದಲ್ಲಿ ಇದಕ್ಕೆ ಸೂಕ್ತ ಹೆಸರಿಲ್ಲವೆಂದು ವಿಷಾದಿಸುವ ಬಿ. ಜಿ. ಎಲ್. ಸ್ವಾಮಿ ಅವರು ''... ಕನ್ನಡಿಗರ ಕಣ್ಣು ಹೂವಿನ ಅಂದಕ್ಕೆ ಒಲಿಯಲಿಲ್ಲ; ಗೆಡ್ಡೆಯ ವಿಷಸತ್ವಕ್ಕೆ ಒಲಿಯಿತು...'' ಎಂಬ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಕೋಲಾರದ ಅಂತರಗಂಗೆ ಬೆಟ್ಟದಲ್ಲಿ ವಿಪುಲವಾಗಿರುವ ಗ್ಲೋರಿಯೋಸ ಸೂಪರ್ಬ ಹೂಗಳನ್ನು ಸ್ಥಳೀಯರಾದವರು 'ಕಣ್ಣೋವಿನ ಹೂವು' ಎಂದು ಕರೆಯುತ್ತಾರೆ. ಕಣ್ಣುಗಳಲ್ಲಿ ಗೀಜು ತುಂಬಿಕೊಂಡು ಕಣ್ಣುರೆಪ್ಪೆ ತೆರೆಯಲಾಗದಂತೆ ಮುಚ್ಚಿದಾಗ ಈ ಹೂವಿನ ಪರಾಗ ರೇಣುಗಳನ್ನು ತಾಯಿಯ ಎದೆಹಾಲಿನಲ್ಲಿ ಕಲಸಿ ಕಣ್ಣುಗಳಿಗೆ ಬಿಟ್ಟುಕೊಂಡರೆ ಕಣ್ಣೋವು ವಾಸಿಯಾಗುತ್ತದೆಯೆಂದು ಹೇಳುತ್ತಾರೆ. ಜನಪದರು ಮೂಲಿಕಾ ಸಸ್ಯಗಳನ್ನು ಗುರುತಿಸುವಾಗ ಅದು ನಿರ್ದಿಷ್ಟವಾಗಿ ಯಾವ ಕಾಯಿಲೆಗೆ ಬಳಕೆಯಾಗುತ್ತದೆಯೋ ಆ ಕಾಯಿಲೆಯ ಹೆಸರಿನಲ್ಲೇ ಗುರುತಿಸುತ್ತಾರೆ. ಉದಾಹರಣೆಗೆ, ಕಾಮಾಲೆ ಸೊಪ್ಪು (= ಕಿರುನೆಲ್ಲಿ, ನೆಲನೆಲ್ಲಿ). ಬಿ. ಜಿ. ಎಲ್. ಸ್ವಾಮಿ ಹೇಳಿರುವ 'ಕುರುಡು ಕಣ್ಣು ಗೆಡ್ಡೆ' – ಎಂಬುದು ಕಣ್ಣುಗಳನ್ನು ಕುರುಡುಮಾಡುವ ಗೆಡ್ಡೆ ಅಲ್ಲ; ಕಣ್ಣೋವಿನಿಂದ ಕುರುಡರಂತೆ ಆಗುವುದನ್ನು ತಪ್ಪಿಸುವ ಗಿಡದ ಗೆಡ್ಡೆ ಎಂದು ತಿಳಿಯಬೇಕು. ನಮ್ಮೂರು ನಂಗಲಿಯಲ್ಲಿ ಬೇಲಿ ಸಾಲುಗಳಲ್ಲಿ ಕಂಡುಬರುವ ಗ್ಲೋರಿಯೋಸ ಸೂಪರ್ಬ ಹೂಗಳನ್ನು ಕೋಡಿಜುಟ್ಟು (= ಕೋಳಿಜುಟ್ಟು) ಎಂದು ಕರೆಯುತ್ತಾರೆ. ಗ್ಲೋರಿಯೋಸ ಸೂಪರ್ಬ ಹೂಗಳಿಗೆ ಸಂವಾದಿಯಾಗಿ ಅಗ್ನಿಜಿಹ್ವೆ, ಕಾದಲ್ ಪೂಗಳ ಸಾಲಿನಲ್ಲಿ ಕೋಲಾರ ಕನ್ನಡದ ಸೊಗಡಿನ 'ಕೋಳಿಜುಟ್ಟು' ಎಂಬುದನ್ನು ಬಳಸಬಹುದು. ಸಸ್ಯವಿಜ್ಞಾನದಂಥ ಅನ್ಯಜ್ಞಾನ ಶಿಸ್ತುಗಳಲ್ಲಿ ಕನ್ನಡದ ಸೊಗಡುಗಳನ್ನು ಹದವರಿತು ಬಳಸಬಹುದು. ಶಿಷ್ಟಭಾಷೆ, ಕನ್ನಡದಲ್ಲಿ ಈ ಹೂವಿಗೆ 'ಗೌರಿ ಹೂ' ಎನ್ನುತ್ತಾರೆ. ಇಷ್ಟೆಲ್ಲ ಮಾಹಿತಿಯಿದ್ದರೂ ಕನ್ನಡ ವಿಶ್ವವಿದ್ಯಾಲಯ ಪ್ರಕಟಿಸಿರುವ ವಿಶ್ವಕೋಶದಲ್ಲಿ ಈ ಹೂವಿನ ಚಿತ್ರ ಕೊಟ್ಟು 'ಪಶ್ಚಿಮಘಟ್ಟಗಳಲ್ಲಿ ಕಾಣಿಸುವ ಒಂದು ಹೂವು' – ಎಂದು ನಿರೂಪಿಸಿದ್ದಾರೆ.

(ii) ಸೆಂಟೆಲ ಏಷಿಯಾಟಿಕ ಎಂಬ ಮೂಲಿಕಾ ಸಸ್ಯಕ್ಕೆ ಸಂಸ್ಕೃತದಲ್ಲಿ ಬ್ರಾಹ್ಮಿ, ಶೀತಕಾಮಿನಿ ಎಂಬ ಹೆಸರುಗಳಿವೆ. ಕನ್ನಡದ ಶಿಷ್ಟ ಭಾಷೆಯಲ್ಲಿ 'ಒಂದೆಲಗ' ಎನ್ನುತ್ತಾರೆ. ತುಳಸಿ ಗಿಡದಲ್ಲಿ ಶ್ರೀತುಳಸಿ ಮತ್ತು ಕೃಷ್ಣತುಳಸಿ ಎಂಬ ಎರಡು ಪ್ರಭೇದಗಳಿರುವಂತೆಯೇ ಬ್ರಾಹ್ಮಿಯಲ್ಲಿ ಶ್ರೀಬ್ರಾಹ್ಮಿ, ಕೃಷ್ಣಬ್ರಾಹ್ಮಿ ಎಂಬ ಎರಡು ಪ್ರಭೇದಗಳಿವೆ. ಇದನ್ನೇ ಮಲೆನಾಡು, ಬಯಲುಸೀಮೆ ಕೋಲಾರ, ನೆರೆಯ ಆಂಧ್ರ ಪ್ರದೇಶಗಳಲ್ಲಿ 'ಇಲಿ ಕಿವಿ ಸೊಪ್ಪು' (= ಎಲುಕ ಚೆವುಲಾಕು) ಎಂದು ಕರೆಯುತ್ತಾರೆ. ಸಸ್ಯ ವಿಜ್ಞಾನಿಗಳು ಕನ್ನಡನಾಡಿನ ಮೂಲಿಕಾ ಸಸ್ಯಗಳನ್ನು ವಿವರಿಸುವಾಗಿ 'ಇಲಿ ಕಿವಿ ಸೊಪ್ಪು' ಎಂಬ ಸೊಗಡುಗಳನ್ನು ಬಳಸಬಹುದು.

೪. ಪ್ರಕೃತಿ ವಿಜ್ಞಾನಗಳು ಮತ್ತು ಮಾನವಿಕ ಅಧ್ಯಯನಗಳಲ್ಲಿ ಸೊಗಡುಗಳ ಬಿಂಬಜ್ಞಾನವನ್ನು ಬಳಸಲು, ಒಳಗೊಳ್ಳಲು ಸಮೃದ್ಧ ಅವಕಾಶಗಳಿವೆಯಾದರೂ ಇದಕ್ಕೆ ಕನ್ನಡದ ಶಿಷ್ಟ ಭಾಷೆ ಮತ್ತು ಪ್ರಮಾಣ ಭಾಷೆಯ ಅಡೆ-ತಡೆಗಳು ಮಾತ್ರವಲ್ಲದೆ, ಇಂಗ್ಲಿಷಿನ ಅಡ್ಡಗೋಡೆಯೂ ಅಡ್ಡಿಯಾಗಿದೆ. ಉದಾಹರಣೆ : ಇಂಗ್ಲಿಷಿನಲ್ಲಿ ಸೈಲೆಂಟ್ ಡಿಯರ್ ಅಥವಾ ಮೌಸ್ ಡಿಯರ್ ಎಂಬ ಪುಟಾಣಿ ಜಿಂಕೆಯನ್ನು ಗುರುತಿಸುವುದುಂಟು. ಬೆಕ್ಕು ಮತ್ತು ಹುಲಿ ಹೇಗೋ ಹಾಗೆಯೇ ಸೈಲೆಂಟ್ ಡಿಯರ್ ಮತ್ತು ಬಾರ್ಕಿಂಗ್ ಡಿಯರ್‌ಗಳು ಚಿಕ್ಕ ಮತ್ತು ದೊಡ್ಡ ಗಾತ್ರದ ಜೀವಿಗಳಾಗಿವೆ. ಇದನ್ನು ಕನ್ನಡದಲ್ಲಿ 'ಬರ್ಕ' ಎಂದು ಕರೆಯುತ್ತಾರೆ. ಇದಕ್ಕೆ ಕೆದಂಬಾಡಿ ಜತ್ತಪ್ಪ ರೈ ಕೊಟ್ಟಿರುವ ವಿವರಣೆಯಿದು : ಮೊಲದ ಜಾತಿಗೆ ಸೇರಿದ ಚಿಗರೆ. 'ಬರ್ಕ' ಎಂಬ ಹೆಸರನ್ನು ಕುವೆಂಪು ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ಬಳಸಿದ್ದಾರೆ. ಇಂಗ್ಲಿಷಿನ 'ಸೈಲೆಂಟ್ ಡಿಯರ್'ಗೆ ಮಲೆನಾಡಿನ ಸೊಗಡು 'ಬರ್ಕ' ಬಳಸಬಹುದು. ಕೋಲಾರದ ಕನ್ನಡದಲ್ಲಿ ಇದಕ್ಕೆ 'ಕೂರಪಂದಿ' ಎಂಬ ಹೆಸರಿದೆ.

೫. ಕೋಲಾರ ಕನ್ನಡದ ಸೊಗಡಿನ ಮತ್ತೊಂದು ವೈಶಿಷ್ಟ್ಯವೆಂದರೆ ಲಿಪಿಗೆ ಸಂಬಂಧಿಸಿದ್ದು. ಕೋಲಾರದ ಬಹುತೇಕ ಲಗ್ನ ಪತ್ರಿಕೆಗಳು ಮತ್ತು ದೇವಸ್ಥಾನಗಳ ಪೂಜೋತ್ಸವಗಳು, ಆಹ್ವಾನ ಪತ್ರಿಕೆಗಳನ್ನು ಮುದ್ರಿಸುವಾಗ ತೆಲುಗು ಭಾಷೆಯನ್ನು ಕನ್ನಡ ಲಿಪಿಯಲ್ಲಿ ಕೊಟ್ಟಿರುತ್ತಾರೆ. ದ್ವಿಭಾಷಿಕತೆಯ ಪರಿಸರದ ಈ ಮಾದರಿ ಅನುಸರಣೀಯವೆಂದು ನನ್ನ ಅಭಿಪ್ರಾಯ. ಸಂಸ್ಕೃತವನ್ನು ದೇವನಾಗರಿಯಲ್ಲಿ ಬರೆಯದೆ, ಕನ್ನಡ ಲಿಪಿಯಲ್ಲಿ ಬರೆಯುತ್ತಾ ಬಂದಿದ್ದರಿಂದ ಸಂಸ್ಕೃತದ ಬಗ್ಗೆ ನಮಗೆ ಇದ್ದ ಅನ್ಯವೆಂಬ ಭಯ ದೂರವಾಯಿತು. ಪ್ರಸ್ತುತ, ರೋಮನ್ ಲಿಪಿಯಲ್ಲಿರುವ ಇಂಗ್ಲಿಷ್ ಎಂದರೆ ಕನ್ನಡ ಮಾಧ್ಯಮದಲ್ಲಿ ಓದಿದ ವಿದ್ಯಾರ್ಥಿಗಳಿಗೆ ಭಯ! ಇದನ್ನು ಹೋಗಲಾಡಿಸಬೇಕೆಂದರೆ, ಇಂಗ್ಲಿಷ್‌ಗೆ ರೋಮನ್ ಲಿಪಿ ಬಳಸುವ ಬದಲು 'ಕೋಲಾರ ಮಾದರಿ'ಯಂತೆ ಕನ್ನಡ ಲಿಪಿಯನ್ನು ಶೈಕ್ಷಣಿಕ ವ್ಯಾಸಂಗದಲ್ಲಿ ಬಳಸಬಹುದು. ಇದರಿಂದ ವಿದ್ಯಾರ್ಥಿಗಳ ಮಾನಸಿಕ ಭಯ ದೂರವಾಗುತ್ತದೆ. ಅನುವಾದ ಸಾಹಿತ್ಯದ ಸಂದರ್ಭದಲ್ಲಿ ಹಿಂದಿ, ಉರ್ದು, ತಮಿಳು, ಮಲಯಾಳ, ಮರಾಠಿ, ಕನ್ನಡ ಇವುಗಳ ನಡುವೆ ಅವರವರಿಗೆ ಅವರವರ ಲಿಪಿಯಲ್ಲೆ ಆಯಾ ಭಾಷೆಗಳ ಸಾಹಿತ್ಯವನ್ನು ಕೊಡುವ ಅಂತರ್ ಲಿಪಿಕ ಸಂಬಂಧಗಳು ಹೆಚ್ಚು ಹೆಚ್ಚಾಗಬೇಕು. ಏಕೆಂದರೆ, ಭಾಷಾವಾರು ರಾಜ್ಯಗಳೆಂದರೆ, ಭಾಷಾವಾರು ಜೈಲುಗಳಲ್ಲ, ಅಲ್ಲವೆ ?

*(ಸೆಪ್ಟೆಂಬರ್ ೨೦೦೯ರಲ್ಲಿ ಶಿವಮೊಗ್ಗದಲ್ಲಿ ನಡೆದ ಸಮಾವೇಶದ ಉಪನ್ಯಾಸ)*

ಡಾ॥ ವಿ. ಚಂದ್ರಶೇಖರ ನಂಗಲಿ
ಪ್ರಿನ್ಸಿಪಾಲರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಹಾನಗಲ್ - ೫೮೧ ೧೦೪

# ವೀರಭದ್ರಯ್ಯ ಸಾರುಗಳು

ರಿಟೈರ್ ಆದ್ಮೇಲೆ ಎ ಎಸ್ ಐ ವೀರಭದ್ರಯ್ಯನೋರು ಅತಿ ಅಸಹನೀಯವನ್ನೇನೂ ಅನುಭವಿಸುವ ಯಾವುದೇ ಪ್ರಸಂಗ ಈ ನಡುವೆ ನಡೆದಿರಲಿಲ್ಲ. ರಿಟೈರ್ಮೆಂಟ್ ಇನ್ನೂ ಎರಡ್ಮೂರೊರ್ಷ ಇದೆ ಅನ್ನೋವಾಗಲೇ, ದುರಂತ ನಾಟಕದ ಕೊನೇ ದೃಶ್ಯಾವಳಿ ಮುಂಗಂಡು, ಆಗ ನೋವು ಕಡಿಮೆಮಾಡಿಕೊಳ್ಳುವ, ಹೊಂದಿಕೊಳ್ಳಲೇಬೇಕಾಗಿರುವುದರ ಸಖೇದ ಖಾಯಿಲೆಗೆ; ಆಂಟಿಬಯಾಟಿಕ್ಸ್ ಬಿಹೇವಿಯರನ್ನ ಈಗಿನಿಂದಲೇ ತಮಗೆ ತಾವೇ ಜಾರಿಕೆ ಮಾಡಿಕೊಂಡು, ಅಧಿಕಾರ ವ್ಯವಕಲನ, ತಮ್ಮ ಮೇಲೆ ಅತೀ ಪ್ರಭಾವ ಬೀರದಿರುವಲ್ಲಿ ಎಚ್ಚರ ವಹಿಸಿದ್ದರು. ಅನಂತರದಲ್ಲಿ, ತಮಗೂ ಮಾಮೂಲೀ ಜನಕ್ಕೂ ಭೇದವಿರದ ಆ ಕ್ರೂರ ಸಮಾನತೆ, ಅತಿ ಅಸಮಾಧಾನಕರ ಸತ್ಯತೆಯ ಅರಿವಿನ ಭಯವು ಸಾ – ಅವರನ್ನ ಅತಿತ್ತರಲಾಗಿ ದೈವ ಭಕ್ತರನ್ನಾಗಿಯೂ ಮಾಡಿತ್ತೆಂಬುದರಲ್ಲಿ ಆಶ್ಚರ್ಯವೇನೂ ಇರಲಿಲ್ಲ; ಅವರೇಂತ್ರಿ ಸುಶೀಲಮ್ಮನಿಗೆ ವಿನಾ. ಏಕೆಂದರೆ ತಮ್ಮ ಧರ್ಮಪತಿ ಎ ಎಸ್ ಐ ವೀರಭದ್ರಯ್ಯನೋರು ಸರ್ವೀಸಲ್ಲಿ ಕಾಸೂ ಗೀಸೂ ಎಲ್ಲಾ ಮಾಡ್ಕೊಂಡಿದ್ರೂ, ಅನಾವಶ್ಯಕ – ಪೋಲೀಸ್ ಟಿಪಿಕ – ದುರಾಗತಗಳನ್ನು ಮಾಡುವುದು ಕಂಡೂ ಕಂಡೂ ಭಾಳವೇ ಕೊರಗುತ್ತಿದ್ದರೂ, ಸರಿಮಾಡಲಾಗದ್ದಕ್ಕೆ ವಿಧಿಯಿಲ್ಲದೇ ಯಾವುದೇ ಕರ್ಮ ತ್ಯಾಗವನ್ನೇನೂ ಮಾಡದೇನೆ, ಕೇವಲ ಕರ್ಮಫಲಕ್ಕೆ ಕೈಚೆಲ್ಲಿ, ತುಂಬುಪತಿ ವೀರಭದ್ರಯ್ನೋರ ಎರಡೆಣ್ಮಕ್ಕಳ ತಾಯಾಗಿ, ಸೈಲೆಂಟ್ ಸತಿಯಾಗಿ ಜೀವ ಸವೆಸ್ತಿದ್ರು. ಅದೂ ಅಲ್ಲದೇ, ಇಬ್ರೆಣ್ಮಕ್ಕಿಗೂ, ಇರ್ಲಿ ಅಂತ ಒಬ್ಳನ್ನ ಎಸ್ಸೆಲ್ಸಿ, ಇನ್ನೊಬ್ಳನ್ನ ಬಿ ಎ ವರ್ಗೂ ಓದ್ಸಿ, ಸ್ವಂತದ ಮಾಗಡಿ ಕಡೆಗೊಂದು, ಇನ್ನೊಂದು ತುಮಕೂರಿನ ಕಡೆ ಲಗ್ನ ಮಾಡಿಕೊಟ್ಟುದ್ದರಿಂದ ಗಂಭೀರವಾಗಿ ಚಿಂತಿಸಬೇಕಾದ ಬೇರೆ ಅವಶ್ಯಕತೆಯೇ ಇದ್ದಂತೆ ಆಕೆಗೆ ಕಂಡಿರ್ಲಿಲ್ಲ. ವೀರಭದ್ರಯ್ನೋರೂ ಅಷ್ಟೆ; ಚಳ್ಳಕೆರೆಯ ಕಡೆಗಿನ ಕ್ಯಾದಿಗುಂಟೆ ಬಳಿ, ಅಪ್ಪ ನಾರಾಯಣಪ್ಪ ಬಿಟ್ಟಿದ್ದ ಪಿತ್ರಾರ್ಜಿತ ಆರೆಕೆರೆ ಫಲವತ್ತಾದ ಆಸ್ತೀನ ತಾವು ಎ ಎಸ್ ಐ ಆಗಿದ್ದಾಗಿನ ಮೊದಲ ವರ್ಷಗಳಲ್ಲಿ, ಯಾವುದೋ ಕೇಸಿನಲ್ಲಿ ಸಿಕ್ಕಾಕ್ಕೊಂಡು; ಕಾಣೀ – ದುಗ್ಗಾಣಿ, ಖರ್ಚಿಲ್ಲದೇ ಸರ್ಕಾರದ ಕಛೇರಿ ಕೆಲಸಕ್ಕಂತಾ ಎಣಗ್ತಾ, ಅರಸಾಹಸ

ಕೆ. ಪುರುಷೋತ್ತಮ ರೆಡ್ಡಿ

ಮಾಡ್ಸಿದ್ದ ಪಾವಗಡದ ಕಡೆಯ ರಾಜಪ್ಪನೆಂಬೋನಿಗೆ ಸಾಯ ಮಾಡಿ, ಅವನನ್ನ, ಸಂಸಾರ ಸಮೇತ ತಮ್ಮ ಜಮೀನಿನ ಒಕ್ಕಲಾಗಿಸಿ ತಮ್ಮೂರಲ್ಲಿ ಮನೆ ಹಾಕಿಸಿದರು. ಬಡವಂಗೆ ಬೇರೇನೂ ಇಲ್ಲದೇ ರಾಜಪ್ಪನೂ ಕೂಡಾ, ತನ್ನ ಊರನ್ನೇ – ಒದ್ದೆ ನನೆ ಪ್ರಟ್ಟೆನ್ಗು ಬಿಯ್ತು – ಅಂತ ಕೊಡವಿಕೊಂಡು ಬಂದು, ಇಲ್ಲಿ ಬಿಡಾರಕ್ಕಂಟಿ, ನಿಯತ್ತಾಗೇ ಗೇದು ವರ್ಷ ವರ್ಷದ ಗುತ್ತಿಗೇನ 'ಕಪ್ಪ-ಕಾಣಿಕೆ' ರೂಪದಲ್ಲಿ – ಸಾರುಗೆ ಆಗಾಗ ಒಪ್ಪಿಸಿ ಬರ್ತಿದ್ದ.

ತಮ್ಮ ರೆಟ್ಟೆಗಳ ಜೀವಿತಾವಧಿಯಲ್ಲಿ ಎ ಎಸ್ ಐ ವೀರಭದ್ರಯ್ನೋರು ಜವಾಬ್ದಾರಿಯಿಂದ ಮಾಡಿದ್ದ ಕೆಲಸವೆಂದರೆ ಇದೊಂದೇ ಮತ್ತು ಇದರ ಪರಿಣಾಮ ಸುಶೀಲಮ್ಮನೋರ ಮನಸಿನ ಮೇಲೆ ಗಾಢವಾದ ದಿಗ್ಭ್ರಾಂತಿಪೂರಿತ ಗೌರವದ ರೂಪವಾಗಿ ಅದು ಗಂಡನ ಬಗ್ಗೆ ವಿಪ್ರೀತ ನಂಬಿಕೆಯಾಗಿ ಮಾರ್ಪಟ್ಟು ಆಕೆ ಇನ್ನೂ ನಿರುಮ್ಮಳವಾಗಲು ಸಹಾ ಕಾಂಟ್ರಿಬ್ಯೂಟ್ ಮಾಡಿತ್ತು.

ಎಷ್ಟೋ ಮಂದಿ ಸಾಹೇಬ್ರುಗಳ ಕೆಳಗೆ ಕೆಲಸ ಮಾಡಿ ಅದೆಷ್ಟೊ ಊರುಗಳು, ಸ್ಟೇಶನ್ನುಗಳು, ನೈಟ್ ಡ್ಯೂಟಿಗಳು, ಥರೇವಾರಿ ಜನಗಳು ಎಲ್ಲವನ್ನೂ ಕಂಡಿದ್ದರು ವೀರಭದ್ರಯ್ಯ. ಇಲಾಖೆಯ ಕಂತೆ-ಕಂತೆಯ ತಂತುಗಳನ್ನೆಲ್ಲ ಬಲ್ಲವರಾಗಿದ್ರು. ಆದರೂ ಅವೆಲ್ಲ ನಾಲೆಡ್ಜನ್ನ ಬಳಸಿಕೊಳ್ಳುವ ಚಾತುರ್ಯ, ಜಾಣ್ಮೆ, ಜೆನಿಟಿಕಲ್ ಆಗಿ ಅವರಿಗೆ ಬರಬೇಕಿದ್ದರೂ ಸಹ ಅದೇಕೋ ಅವೆಲ್ಲಾ ಅವರಿಗೆ ಒಂಚೂರು ಮಟ್ಟಿಗೆ ಮಾತ್ರ ಆಗಿ ಬಂದಿದ್ದು !

ರಿಟೈರ್ ಆದ್ಮೇಲಂತೂ ಒಂದೊಂದ್ಸಾರಿ, ಇಲ್ಲಿ ಅಪ್ರಸ್ತುತವಲ್ಲದ ಕೆಲವು ಪಿರಿಪಿರಿ ಉಂಟುಮಾಡುವ ಘಟನೆಗಳು ಸಂಘಟಿಸಿದಾಗಲಂತೂ, ಅನಿವಾರ್ಯತೆಯ ನಿಬದ್ಧತೆಗಳಿಗೆ ಕಟ್ಟುಬಿದ್ದು, ಹಲ್ಕಡ್ದು ಸುಮ್ಮನಾಗಿ – ''ಥುತ್ತೇರಿ'' ಅಂತ ಸಾತ್ವಿಕವಾಗಿಸಿಕೊಂಡು ಬಿಡುತ್ತಿದ್ದರು. ಅದಾಗಿ ಯಾವುದೋ ತಿಳಿಯದ ಜಾದೂ ವಶೀಲಿಕೆಯಿಂದ ಆರು ತಿಂಗಳಾದರೂ ಅವರು, ತಮ್ಮ ಅಧಿಕಾರವಿದ್ದಾಗ ವಾಸಕ್ಕಿದ್ದ 'ಕ್ವಾರ್ಟರ್ಸ್'ನಲ್ಲಿಯೇ ಜಂಡಾ ಕಿಳಗಿಸಬೇಕಾದ ಸ್ಥಿತಿ ಇನ್ನೂ ಉದ್ಭವವಾಗಿರಲಿಲ್ಲವಾದ್ದರಿಂದ –

ಆ ಪೋಲೀಸ್ ಮನೆಯೇ (ಕಾಂಪೌಂಡ್ ಸಮೇತ ಅಂತ ಓದ್ಕೋಬೇಕು) ಅವರಿಗಿನ್ನೂ 'ನಾನು ಅದೇ' ಎಂಬ ಪ್ರೊಟೆಕ್ಟೀವ್ ಶೀಲ್ಡ್ ಆಗಿ ಕೆಲಸ ಮಾಡುತ್ತಿದ್ದರೂ ಡ್ರೆಸ್ ಇಲ್ದೆ, ಬೆತ್ತ ಇಲ್ದೆ, ಕಮ್ಯಾಂಡ್ ಇಲ್ದೆ, ಉಗಿಸಿಕೊಳಾಕೆ ಬಿಟ್ಟಿ ಸಿಗೋ ಲೈಸೆನ್ಸ್ ಇಲ್ದೆ



ಒಂಟಿ ಕುಂಟಿ ಮೇಲೆ ಆಟೋ; ಓಡ್ಸೋ ಉಡುಗ್ರೂ, ಮುಸ್ಸಂಜೇಲ್ಲಿ ಪಕ್ಕೆ ಲೈಸನ್ಸು ಅಲ್ವಾ ಲೈಟೂ ಇಲ್ಲದ ಸೈಕಲ್ಲುಗಳು, ಕಿರಿಚೆ-ಬಿಡ್ಸೋಗೆ ಬರೋ ರಾತ್ರಿ ರತೀರು, ಅವ್ರ ಗಿರಾಕಿ ಪೇಟೆಯಾಡೋ ಕಾಂಜೀಪೀಂಜಿ ಹುಡುಗ್ರೂ, ಯಾರಂದ್ರೆ ಯಾರೂ ಇಲ್ಲೆ, ಬಾಯಿಗೆ ಬೇಕಿಲ್ಲದ ಬಲವಂತದ ರೆಸ್ಟ್ ಸಿಕ್ಕಿದ್ದು ಇರುಸು ಮುರುಸಾಗಿ – ಒಂಥರದ ಅನಾವರಣಗೊಳ್ಳದ ಸುಪ್ತ ಭಯದ ಗುಪ್ತಛಾಯೆ ಸೃಷ್ಟಿಸಿತ್ತು. ಇದ್ದಕ್ಕಿದ್ದಂಗೆ – ಸಿನಿಮಾ ಹೀರೋನನ್ನ ವಿಲನ್ ಗ್ಯಾಂಗ್‌ನವ್ರು ಫೈಟಿಂಗ್ ಸೀನ್ ಶೂಟಿಂಗ್ನಲ್ಲಿ – ನಿಜವಾಗ್ಲೂ ಹಿಂದಕ್ಕೆ ತಿರಿಕ್ಕೊಂಡು ಸಮಾ ಇಕ್ಕಿದಾಗಿನ ಹೀರೋನ ಮುಸ್ಡಿ ಲೆವೆಲ್‌ನಲ್ಲಿ ತಮ್ಮ ಫೇಸ್ ಛೇಂಜ್ ಆಗ್ದಿದ್ರೂ, ಅಟ್‌ಲೀಸ್ಟ್, ಮಾಮೂಲಾಗಿ ಕಾಣಿಸಿಕೊಳ್ಳೋ ಪ್ರಯತ್ನಾ ಅಂತೂ ವೀರಭದ್ರಯ್ನೋರು ಮಾಡ್ತಾಲೇ ಇದ್ರು. ಇನ್ನೊಂದೇನಪ್ಪ ಅಂದ್ರೆ, ದೊಡ್ಡ ಸಾಯೇಬ್ರುಗಳಿಂದ ಸಣ್ಣ ಮಾತುಗಳನ್ನಿಸಿಕೋ ಬೇಕಾದ್ದು ಇನ್ನಿಲ್ಲವೆಂಬ ಖುಷಿ ಅವರಿಗಿತ್ತು.

ಅದೇನೋ, ಅವತ್ತು – ಡಿ ಷೈ ಎಸ್ಪಿ ಎಣ್ತೆ – ''ಎಂಗೂ ಆ ಕಡೇನೆ ಹೋಗಿದ್ದೀರಿ, ಬರ್ತಾ ನನ್ನ ಹೊಲ್ದಿರೋ ಜಾಕೀಟು ನಾಗೋಜಿರಾವ್ ಕಡೆಯಿಂದ ಇಸ್ಕೊಂಬರ್ತೀರಾಣ್ಣ'' ಅಂತ ನುಲುಕೊಂತಾ, ಗೌರವಾ ಕೊಟ್ಟಂಗೇ ಕೊಡ್ತಾ ಕೆಲಸ ತಗೊಂಡಿದ್ದೂ ಅಲ್ದೆ, ಕೂಲಿ ಸಾ ತಾವೇ ಕೊಡಂಗಾಗಿದ್ದು, ಸ್ವಲ್ಪ ದುಬಾರಿಯಾಗಿ, ನೆನೆಸಿಕೊಂಡ್ರೆ ''ಅಷ್ಟೇ ಯಾಕೆ ಒಳಗಿರೋದ್ನ ಕೇಳಿದ್ರೂ ತಂದ್ಕೊಡ್ತಿರ್ಲಿಲ್ವಾ'' ಅಂತ ಸೇರಿಸ್ಕೊಂಡು ಸುಮ್ನಾಗಿದ್ರು. ಅದೆಲ್ಲಾ ಈಗ ಮುಗಿದ ಅಧ್ಯಾಯ ಅಂತ ಮತ್ತೆ ಗೊತ್ತಾತ್ತಕ್ಷಣ ಎಂಥದೋ ಖುಶಿಯಾಗಿ ನೆರೆತ ಪೊದೆ ಮೀಸೆ ಮೇಲೆ ಜರ್ಬಾಗಿ ಕೈ ಆಡಿಸ್ಕೊಂಡ್ರು. ಆ ಕ್ರಿಯೆಯಲ್ಲಿ, ಸರ್ವತಂತ್ರ ಸ್ವಾತಂತ್ರ್ಯದ ಝುಲಕ್ ಇತ್ತು.

ತಮಗೆ ಜೋಲು-ಬೊಜ್ಜು ಹೊಸದಲ್ಲವಾದ್ರೂ, ಕೇವಲ ಇತ್ತೀಚೆಗೆ ಬೆಳ್ಬೆಳಗ್ಗೆ ವಾಕ್ ಎದ್ದೋಗೋದು ರೂಢಿಸಿಕೊಂಡಿದ್ರು, ಅಂತಹ ಐದು ಗಂಟೆಯ ಬೆಳಗಲ್ಲಿ, ಜನವಿರದ ಬೀದಿಗಳಲ್ಲಿ ತಮ್ಮ ಅಧಿಕಾರವಿಲ್ಲದರ ಪ್ರಭಾವ ತೀರಾ ಅಲ್ಲಲ್ಲಿ ಕಾಣಿಸ್ತಿದ್ರೂ, ಭಾಳಾ ವಿಕಾರವಾಗದ ರೀತಿಯಲ್ಲಿ ವಾಕಿಸುತ್ತಿದ್ದರು. ಮೈ ಬೆಳಸಿಕೊಂಡೋ, ಇಲ್ಲವೆ, ಆರೋಗ್ಯದ ಕಾಳಜಿಗೆಂದೋ, ದುಡ್ಡಿದ್ದೋ, ಅಧಿಕಾರ ವಿದ್ದೋ, ನಿದ್ದೆ ವಂಚಿತವಾದ, ಥಂಡಿ ಟೈಮಿದ್ದ ಅಕ್ಷರಸ್ಥ ಮಂದಿಯೇ ಹೆಚ್ಚಾಗಿ ವಾಕ್‌ಗೆ ಬರುತ್ತಿದ್ದುದರಿಂದ, ಅಂತವರಿಂದೇನೂ ತಮಗೆ ಗೌರವದ, ಕನಿಷ್ಠ ಮರ್ಯಾದೆಯ 'ವಿಶ್' ಪಡೆಯಬೇಕೆಂಬ ಇರಾದೆಯೇನೂ ವೀರಭದ್ರಯ್ನೋರ್ಗೆ ಇರ್ದಿದ್ರೂ, ಸ್ಟೇಶನ್ ಕಾಂಪೌಂಡ್ ಪಕ್ಕಕ್ಕೇ ಇದ್ದ ಎಸ್ ಟಿ ಡಿ ಬೂತಿನ, ಯಕಃಶ್ಚಿತ್ ಕುಂಟಾ ಸಾ ತಮ್ಮಾಕ್ರುತಿ ಕಂಡಾಗ ''ಸಾ, ನಂಸ್ಕಾರ'' ಅಂತನ್ನದಿದ್ದುದರ ವಿಷಯ ಕೋಪ ತರಿಸ್ತಿತ್ತು. ಕೇವಲ ಅದೇ ಕಾರಣಕ್ಕಾಗಿಯೇ ಅಂಥಾ ಡಿಸೆಂಬರ್ ಛಳಿಯಲ್ಲೂ ಅಂಗ್ಡೀ ಮುಂದೆ, ತನ್ನಾಡಿಗೆ ತಾನು ಕಸ ಹೊಡ್ಕೊಂತಿದ್ದ ಹೆಳವನ್ನ, ಕುಂಟ್ಸೂಳೆಮಗ ಅಂತ ಸಶಬ್ದವಾಗೇ ಬೈಕೊಂಡ್ರು. ಹಂಗೇ ಸ್ವಲ್ಪ ಮುಂದ ನಡೆಯೋತ್ಲೆ, ಚೌರಸ್ತಾದಲ್ಲಿ, ಚಿತ್ರದುರ್ಗದಿಂದ ತಿರುಪತಿಗೆ ಪಾವಗಡ ಮಾರ್ಗವಾಗಿ ಹೋಗೋ ಎಸ್ ವಿ ಟಿ ಬಸ್ ನಿಂತ್ಕೊಳ್ಳಕ್ಕೂ, ಅದ್ರಿಂದ ಕವೆನ್ನುಕ್ಕು ರಾಜಪ್ಪ ಇಳಿಯುಕ್ಕೂ ತಾವ್ರ ನೋಡೋಕೂ

## ವೈವಿಧ್ಯ

ಹೆಣ್ಣು
ಮಲ್ಲಿಗೆಯಾಗಬಹುದು,
ತಾವರೆಯಾಗಬಹುದು,
ಗುಲಾಬಿಯಾಗಬಹುದು,
ಕೆಂಡಸಂಪಿಗೆಯಾಗಬಹುದು,
ಕೆಲವೊಮ್ಮೆ ಕೆಂಡವೂ !

ಸಿ.ಪಿ.ಕೆ.
ಮೈಸೂರು

ಸರಿಯಾಗಿ ತಾಳೆ ಆಯ್ತು. ಹತ್ತಿರಕ್ಕೆ ಬಂದವನು ತಮ್ಮನ್ನ ಗುರ್ತಿಸಿ ಛಳಿಗಾಗಿ ಕಿವಿ, ಗಡ್ಡ ಬಳಸಿ ಸುತ್ತಿಕೊಂಡಿದ್ದ ಪಟಾಪಟಿ ತಿರುಪೂರು ಟವಲ್ಲು ಮತ್ತು ಇಳಿಯುವಾಗ ಎತ್ತಿ ಕಟ್ಟಿದ್ದ ಪಂಚೆ ಎರಡನ್ನೂ ಸಡಿಲಿಸಿ ಕೆಳಗಿಳಿಸಿಕೊಳ್ಳುತ್ತಾ ಗೌರವ ತೋರಿಸಿ ''ನಮಸ್ಕಾರ ಸಾ'' ಅಂತಂದು ಸ್ವಲ್ಪ ಒರೆಯಾಗಿ ನಿಂತ್ಕೊಂಡ. ''ಇದೇನೋ. ಇಷ್ಟೊತ್ತಿಗೇ ಬಂದೆ'' ಅಂತ ವೀರಭದ್ರಯ್ನೋರು ಗದರಿಸಿದಂತೆಯೇ ಕೇಳುತ್ತಾ – ಬಾ ಅಂತ ದರ್ಪದ ಕಣ್ಸೈಗು ಮಾಡಿ, ಅಲ್ಲೇ ಪಕ್ಕದಲ್ಲಿದ್ದ ಸತ್ತೆಪ್ಪನ 'ಸತ್ಯ ನಾರಾಯಣ ವಿಲಾಸ್' (ಬೋರ್ಡಿನ ಕೆಳಗಡೆ ಒಂದು ಮೂಲೆಗೆ ಶುಚಿ ಅಂತಾನೂ, ಒಂದು ಮೂಲೆಗೆ ರುಚಿ ಅಂತಾನೂ ಬರ್ದಿತ್ತು) ಎಂಬೊ ಗುಡಿಸಲೋಟ್ಲನ ಅತ್ರಕ್ಕೆ ನಡೆದರು. ವಾಕ್ ಎಂಗೂ ಕ್ಯಾನ್ಸಲ್ಲಾಯ್ತೆಂಬ ಖಾತ್ರಿ ಆದವರಂಗೆ, ಐ ಟಿ ಸಿ ಸ್ಟೈಲಿನ ಮೂತಿಗೆ ಬೆಂಕಿಕೊಟ್ಟು – ಎರಡರ್ದ ಕಾಫೀಗೆ, ಆಗ್ತಾನೆ ಪಂಪ್ ಸ್ಟವನ್ನ 'ಭಸ್ಸೋ' ಅಂತಾ ಭರಗುಟ್ಟಿಸ್ತಾ ಪಂಪಿಸುತ್ತಿದ್ದ ಸತ್ತೆಪ್ಪನಿಗೆ ಆರ್ಡರ್ ಮಾಡಿದ್ರು. ಮಾರ್ಕೆಟಿಂಗ್ ಗೊತ್ತಿದ್ದ ಸತ್ತೆಪ್ಪ, ''ಬಾರಣೊ ಕುಂತ್ಕ'' ಅಂತಂದು, ಗಲೀಜು ಪಲೀಜು ತುಂಬ್ಕೊಂಡಿದ್ದ ಒಂದೇ ಛೇರಿನ ಮುಖಾನ, ತನ್ನ ಟವಲ್ ಎಂಬೋ ಚೌಕದಿಂದಾ ತಿಕ್ಕಿ ಒರೆಸಿ – ಹತ್ತಿರಕ್ಕೆ ನೂಕಿದಾಗ, ಅಲ್ಲೇ ಮನೀಕ್ಕಂಡಿದ್ದ ನಾಯಿ ಕಾಲಿಗೆ ತಗುಲಿ, ನಾಯಿ ಕಿಸಿಗುಡ್ತಾ, ಬೆದರಿ, ಹಿಂಗಾಲ ಸಂದಿಗೆ ಬಾಲ ತೂರಿಕ್ಕೊಂಡು ಬಯಲಿನ ಬೆಳಕಿಗೆ ನುಗ್ತು. ಛೇರಿನ ಸೀದೂಗಿದ್ದ ಮುಖ ನೋಡಿ ಕಿವಿಚಿಕೊಂಡರೂ, ಸಾಯೇಬ್ರು ಅದರ್ಮೇಲೆ ಕುಂತ್ಕಳ್ದೇನೇ, ಹಂಗೇ ಗೋಡೆಗಾನಿಕೊಂಡು ಕಾಲ ಮುಗ್ಗುಲು ಬದಲಾಯಿಸಿಕೊಂಡು ''ಏನ್ ವಿಷ್ಯ ?'' ಅಂತನ್ನೋ ಅರ್ಥ ಬರುವ ರೀತಿ ಕಣ್ಣುಬ್ಬೇರಿಸಿ ರಾಜಪ್ಪನ್ನ ಕೇಳಿದ್ರು.

**ನೇಪಥ್ಯದಲ್ಲಿ...**

ವೀರಭದ್ರಯ್ನೋರಪ್ಪ, ಗೊಂಚಿಗಾರ ನಾರಾಯಣಪ್ಪ ಕ್ಯಾದಿಗುಂಟೆಯ ಶಾನುಭೋಗ್ರು ವೆಂಕಟ್ರಾವ್ ಅವರಿಗೆ ಭಾಳಂದ್ರೆ ಭಾಳಾ ಖಾಸಾ ಮನುಷ್ಯ. ಆ ದಿನಗಳ ಶಾನು ಭೋಗಿಕೆಯೆಂಬ ಮಂತ್ರಿಗಿರಿ ಭಾಳಾ ಶಕ್ತಿವಂತದ್ದಾಗಿತ್ತು. ಜೊತೆಗೆ ಗೌಡಿಕೆ ಮಾಡ್ತಿದ್ದ ಜಗಳೂರು ಮೂಲದ ಕಮ್ಮ ರೆಡ್ಡಿ, ಅನಂತ ರೆಡ್ಡಿ ತಮಗೇನೂ ಹಿಡಿದಿಲ್ಲವೆಂಬಂತಿರುತ್ತಿದ್ದುದರಿಂದ, ಕ್ಯಾದಿಗುಂಟೆ ಯಾವತ್ತೂ ವೆಂಕಟ್ರಾವ್ ಅಂಡ್ ಕಂಪನಿಯನ್ನೇ ನೆಚ್ಚಿಕೊಂಡಿತ್ತು ಮತ್ತು ವೆಂಕಟ್ರಾವ್ ಸ್ವತಃ ಖಯಾಲಿಯ ಬುದ್ಧಿವಂತನಾದ್ದರಿಂದ, ತನ್ನೆಲ್ಲಾ ಅನಿರ್ಬಂಧಿತ ಅಧಿಕಾರವನ್ನು ಸಾವಕಾಶವಾಗಿಯೇ ಆನಂದಿಸುತ್ತಿದ್ದರು. ಗೊಂಚಿಗಾರ ನಾರಾಯಣಪ್ಪ ಸಾ (ತಾವು + ಸಹ ಅಂತ ಓದ್ಕೋಬೇಕು) ಭಾಳಾ ಶಾಣ್ಯಾ ಇದ್ದಿದ್ರಿಂದ ಅದು ಅವನಿಗೆ ಶಾನುಭೋಗ್ರ, ಪೆರಪೆರ ಇನ್ನರ್ ಸರ್ಕಲ್ಲಿನ ಮನುಷ್ಯನಾಗುವ ಎಲ್ಲಾ ಅರ್ಹತೆಯನ್ನೂ ಮುಡಿಪು ಮಾಡಿ ಒದಗಿಸಿಕೊಟ್ಟುಬಿಟ್ಟಿತ್ತು. ಅದೇ ಧೈರ್ಯದಿಂದ, ಒಂದಿನ ಗುಂಡಿಗೆ ಹದ ಮಾಡಿಕೊಂಡು ಆಯಕಟ್ಟಾದ ಸಮಯ ನೋಡ್ಕೊಂಡು ''ಅಯ್ನೋರು ಮನಸ್ಮಾಡಿದ್ರೆ ಒಂದೀಟು ಜಮೀನ್ ಗಿಮೀನ್ ಅಂತ ಮಾಡ್ಕೊಂಡು ನಾನೂ ಒಬ್ಬ ಮನ್ಸಾ ಅನ್ನಿಸ್ಕಂತೀನಿ'' ಅಂತನ್ನೋ – 'ತನಗೇನೂ ಸ್ವಂತ ಜಮೀನಿಲ್ಲ ಅನ್ನುವ ಮತ್ತು ಜಮೀನ್ ಗಿಮೀನ್ ಇದ್ರೇನೆ ಹಳ್ಳೀಲಿ ಮನಿಷ್ಯ ಆಗೋದೆಂಬ' ನಿಖಾರ್ಸಿನ ಸತ್ಯದ ಬಟ್ಟೆ ಪೂರಾ ಬಿಚ್ಚಿ ಮುಂದಿಟ್ಟು, ಕೈ ಹೊಸಕಿಕೊಳ್ಳುತ್ತಾ; ಸ್ವಾಮೋರ 'ಅರ್ಧಂಗೆ' ಅಂತ ಬರಬಹುದಾದ ಉತ್ತರ ಬರುವ ಮುಂಚೆಯೇ, ಅದಕ್ಕೆ ಕಾಯದೇನೇ, ತಾನಾಗಲೇ ಸಮರ್ಪಣೆಗಂತಾ ಗೊತ್ತುಮಾಡಿದ್ದ ಪಾರಿ, ಕತ್ಲಲ್ಲಿ ಈ ಕಡೆಗೇ – ಶಾನುಭೋಗ್ರ ಸೇವಾರ್ಥಕ್ಕೆ ಬರ್ತಿದ್ದದ್ದು ಖಾತ್ರಿ ಮಾಡಿಕೊಂಡು ಸರಕ್ಕಂತ ಜಾರಿಕೊಂಡ. ಸಾಮಾನ್ಯಕ್ಕೆ ಅಷ್ಟು ಈಸಿಯಾಗಿ ಈಲ್ಡ್ ಆಗದ ವೆಂಕಟ್ರಾವ್ ತಮ್ಮ ಅಧಿಕಾರ ವ್ಯಸನದ ''ಆಯ್ತುನೋಡಾನ'' ಅಂತ ಮಾಮೂಲಿ ರಾಗ ಹಾಡಲಾರದವರಾದದ್ದಕ್ಕೆ ಆ ಎಳೇ ರಾತ್ರಿ, ನವಿರು ಚಳಿ, ಖಾಲೀಯಾದ ಪಟ್ಟದ ಬಾಟ್ಲಿ, ಪರ್ಸನಲ್ ಜಿಡದಿ, ನಾಯಕರ ಚೌಡಪ್ಪನ ಕಂಟ್ರಿ ಗಡಂಗು ಕಮ್ ಮನಿಯಿಂದ ಬೆಂದು ಬಂದು ಪುಡಿಯಾಗಿದ್ದ ನಾಟಿ ಕೋಳಿ ಎಲುಬಿನ ಚೂರು ಪಾರು ಜೊತೆಗೆ ನಾರಾಯಣಪ್ಪನ ಮೇಸ್ತ್ರಿಕೆಯಿಂದ, ತಮ್ಮಲ್ಲಿಗೆ ಬರುತ್ತಿದ್ದ, ವಿಪ್ರೀತ ಅಟ್ಯಾಕ್ಟೀವಾಗಿ, ಒಳಗಿನ ದೊಡ್ಡ ಪಟ್ಟೆಯ ಬಟ್ಟೆ ಬಾಡಿ ಕಾಣಂಗೆ – ಗುಬ್ಬಿ ರೆಟ್ಟೆ ಜಾಕೀಟ್ ತೊಟ್ಕೊಂಡು, ಬಳುಬಳುಕಿ ಬರ್ತಿದ್ದ ಮಾಟ ದೇಹದ ಪಾರಕ್ಕ (ಇವ್ಳು, ಊರ ಗೌಡಿಕೆ ಮಾಡ್ತಿದ್ದ ಅನಂತ ರೆಡ್ಡಿ ಕರೆಸಿಕೊಂಡಾಗಲೂ ಒಪ್ಪಿರ್ಲಿಲ್ಲ ಅಂಬೋದು ಇಲ್ಲಿ ಭಾಳಾ ರೆಲೆವೆಂಟ್ !) – ತಮ್ಮೆರಡೂ ಬಾಹುಗಳು ಅಂತ ಭ್ರಮಿಸುತ್ತಿದ್ದ ಕೈಗಳಲ್ಲಿ ಆಕೆ ತೆಕ್ಕೆಯಾಗಿ ಬಳಲುವುದೂ – ಎಲ್ಲಾ ಸಾಕ್ಷೀಭೂತಗಳಾಗಿ, ಅವು ವೆಂಕಟ್ರಾವ್ ಬಾಯಿ ಮುಚ್ಚಿಸಿದ್ದಷ್ಟೇ ಅಲ್ಲದೇ ಒಂದು ಮಾದರಿಯ ಅನುಪಸ್ಥಿತಿಯ ಭಯ ಮಿಶ್ರಿತ ವಿಹಂಗಮ ಅಂತರ್ರಾಗವಾಗಿ ನರ ನಾಡಿಗಳನ್ನು ಝೇಂಕರಿಸಿ ತಮ್ಮ ಲೆಕ್ಕಾಚಾರದ ತಲೆ ತೂಗಿಸಿ, ದರ್ಪ ಮೆರೆಸಲು ಇದು ಟೈಂ ಅಲ್ಲವೆಂಬ ತೀರ್ಮಾನಕ್ಕೆ ಸಂತೋಷವಾಗಿಯೇ ಬಂದು, ತಮ್ಮಲ್ಲೇ ನಾರಾಯಣಂಗೇನಾರ ಮಾಡಿಕೊಡಬೇಕೆಂದು ಕೊಳ್ಳುತ್ತಾ, ಇಷ್ಟೊತ್ತಿಗೆ ಬಾಗಿಲಿಗೇ ಬಂದಿರಬಹುದಾಗಿದ್ದ ಅರ್ತನ್ ಬ್ಯೂಟಿ, ಪಾರೀನ ಎದುರಾಗಲು ಎದ್ದು ನಿಂತಾಗ, ಒತ್ತಡ ಮುಕ್ತವಾದ, ಕತ್ತಾಳೆ ನಾರು ನೂಲಿನ ಮಂಚ ಸದ್ದುಮಾಡಿ ಕಿರಕ್ಕಂತು.

ಅಮ್ಮಯ್ನೋರು ''ನೀವೇ ಏನಾರ ಮಾಡಿ. ಆ ಒಲೀರು, ಬರೀ ರೆಡ್ಯೋರ ಮಾತ್ನೇಲೆ ಸಾಗು ಮಾಡ್ಕಂತಿರೋ, ರಾಮುನ ಗುಡಿ ಮಾನ್ಯದಾಗಿನ, ಆ ಆರೆಕ್ರೆ ಜಮೀನು ನಂಗೆ ಬರೋಂಗೇ ಅಯ್ನೋರಿಗೇಳ್ಬೇಕು; ನಿಮ್ಗೆಸರಾಗೆ ದೀಪ ಅಚ್ಕಂತೀನಿ'' ಅಂತ ಜಗಲೀ ಮೇಲೆ ದೇದೀಪ್ಯಮಾನವಾಗಿ ಬಿದಿರುಬೆತ್ತದ ವಾಲುಛೇರಿನ ಮೇಲೆ

ವಿರಾಜಿಸಿದ್ದ ಒಂದೆರಡ್ಮೂರಾಕೃತಿಯ ಸಿಂಗಲ್ ವ್ಯಕ್ತಿ, ವೆಂಕಟ್ರಾವ್ ಅವರ ಸದ್ಧರ್ಮ ಪತ್ನಿಯಾದಂತಾ ಶ್ರೀಮತಿ ವಕುಳಾದೇವಮ್ಮನವರಿಗೆ ಮಸ್ಲತ್ ಮಾಡ್ತಿರೋವಾಗ್ಗೆ, ನೈವೇದ್ಯ ಮುಗಿಸಿ ಶಾಂಭೋಗ್ರು ಬಂದರು. ಊರಿನ ಶಾನುಭೋಗಿಕೆಯ, ಫಸ್ಟ್ ಲೇಡಿ ಪ್ರಿವಿಲೇಜುಗಳೆಲ್ಲವನ್ನೂ ಚಾಚೂ ತಪ್ಪದಂತೆ ಸಾಂಪ್ರದಾಯಿಕ ಶೈಲಿಯಲ್ಲಿ ಅನುಭವಿಸುತ್ತಿದ್ದ, ದೊಡ್ಡ ಮನೆತನದ ಒಳ್ಳೇ ಮನಸಿನ ವಕುಳಮ್ಮಂಗೆ, ಕೆಳಗೆ ದೂರದಲ್ಲಿ ಎರಡು ಜಗಲೀ ಮಧ್ಯದ ಓಣಿ ಓರೆಯಲ್ಲಿ, ಅದೇ ತಿರುಪೂರಿನ ಪಟಾಪಟಿ ಉದ್ದನೇ ಲಾಡೀ ಡ್ರಾಯರ್ ಮತ್ತು ಚೀಟಿ ಬಟ್ಟೆಯ ಅಂಗೀ ತರದ, ಒಳಗಿನ ಜೇಬಿದ್ದ ಸ್ಲೀವ್ ಲೆಸ್ ಬನೀನಲ್ಲಿ ದೇಹ ತುರಿಕ್ಕಂಡು, ಕೂತಿದ್ದ ಕುಕ್ಕುರ ಕಾಲಿಗೆ, ಎಲ್ಡೂ ಕೈ ಕಟ್ಕಂಡು ಆಸೀನನಾಗಿದ್ದ, ಆಪ್ತ ನಾರಾಯಣನ ನೋಟ ಕರುಣೆಯುಕ್ಕಿಸಿತಾದರೂ ತಾವು ಅಭಯ ನೀಡುವ ಹಾಗಿಲ್ಲ ದಿದ್ದುದರಿಂದ ಹತ್ತಿರ ಬಂದ ಯಜಮಾನ್ರನ್ನ ಕಂಡು, ''ಅವ್ರೇ ಬಂದ್ರಲ್ಲ, ಹೇಳಿ ನೋಡೋಣ ಬಿಡು'' ಅಂತಂದ್ರು. ಅಷ್ಟೊತ್ಗೆ, ಶಾನುಭೋಗರಿಗೆ ಗೌರವ ತೋರಬೇಕಾದ ಲಾಂಛನದ ಪ್ರಶ್ನೆ ನೆನಪು ಮಾಡಿಕೊಂಡ ನಾರಾಯಣ, ಗೆಬರಿಕೊಂಡು ಧಡಕ್ಕಂತ ಅರ್ಧ ಎದ್ದು, ಹಂಗೇ ಮುಂದಕ್ಕೆ ದೇಹಾ ಬಗ್ಗಿಸಿ, ಹಿಂದಹಿಂದಕ್ಕೇ – ಟವಲ್ ಸಮೇತ ಕೈ ಎರಡೂ ಕೆಳಕ್ಕೆ ನೇತಾಕಿಕೊಂಡಿದ್ದರ ನಜರೆ ಒಪ್ಪಿಸಿ ಮರೆಯಲ್ಲಿ ದೂರಾದ. ಇವನನ್ನು ಒಂದರೆಕ್ಷಣ ಗಮನಿಸಿ ಅನುಮಾನಿಸಿದ ವೆಂಕಟ್ರಾವ್ ಕಾಲು ತೊಳೆಯೋವಾಗ ಅದೇ ಗುಂಗಲ್ಲಿ ಹಿಮ್ಮಡಿ ನೆನೀದಿದ್ದುದನ್ನೂ ಗಮನಿಸದೆ ಬಂದದ್ದನ್ನ ವಕುಳಮ್ಮೋರು ನೆನಪಿಸಿದಾಗ ಅವರು ಮತ್ತೊಮ್ಮೆ ಹಿಮ್ಮಡಿಗಳೆರಡೂ ಸರಿಯಾಗಿ ನೆನಸಿ ತೊಳ್ಯೋ ಒತ್ಗೆ ಈಗಿನ ರಿಟೈರ್ಡ್ ಎ ಎಸ್ ಐ, ವೀರಭದ್ರಯ್ನೋರವ್ರ, ಅಂದ್ರೆ ನಾರಾಯಣನ ಎಣ್ತಿ ಕೈಲೊಂದು ಖಾಲಿ ಪಾತ್ರೆ ಇಟ್ಕೊಂಡು, ಕಂಕ್ಳಿಗೆ ಖಾಲೀ ಕುಂಡಿ, ಸುರಿದ ಸಿಂಬಳ ಮಕ್ಕಲ್ಲಾ ಮೆತ್ತಿ, ಅಲ್ಲಲ್ಲಿ ಒಣಗಿ, ಹಾಪಿನ ಪೊರೆ ತರಾ ಆಗಿದ್ದ ಅಂದಾಜು ಒಂದೆರಡ್ವೊರ್ಷದ ಮೊಮ್ಮಗಳನ್ನ ಸೊಂಟಕ್ಕೇರಿ ಸ್ಕೊಂಡು ಸಾರಿಗಂತಾ ಅಯ್ನೋರ ಮನೇಗ್ಬಂದ್ಲು.

ಅಯ್ನೋರು ಒಳಗೋದ್ರೂ ಸಾ, ಬಟ್ಟೆ ಬಿಚ್ಚಿ, ಜನಿವಾರ ತೀಡಿ ಊಟದ ಶಾಸ್ತ್ರಕ್ಕೆ ರೆಡಿಯಾಗುವ ಟೈಂ ಗ್ಯಾಪ್ ಇದ್ದಿದ್ರಿಂದ, ವಕುಳಾದೇವಿ ಹಂಗೇ ಇನ್ನೂ ಇದ್ರು. ತಕ್ಷಣ ಸ್ವಸ್ಥಾನಕ್ಕೆ ಬಂದ ನಾರಾಯಣ, ಮೊದಲೇ ಪ್ರಿಪೇರ್ ಆಗಿ ಬಂದಿದ್ದ ಜಮೀನು ಟಿಪ್ಪಣಿ ಅಮ್ಮಯ್ಯೋರ್ಗೆ ಹಿನ್ನೆಲೆ ಸಮೇತ ನೀಡಿದ. ಗಂಡ ಅಲ್ಲೇ ಇದ್ರೂ ಆಳುಗಳ ಕೈಯ್ಯಿಂದ, ಇತರರಿಗೆಂದೇ ತಯಾರಾಗಿರುತ್ತಿದ್ದ ಸಾರನ್ನು ಉಯ್ಯಿಸಿ ಕೊಂಡ ನಾರಾಯಣನ ಎಣ್ತಿ, ಆದಾಗಲೇ ಓಗಿದ್ದಳು.

''ಅಮ್ಮಯ್ಯ, ಆ ಒಲೇರು ಅವರವರಲ್ಲೇ ಕಿತ್ತಾಡ್ಕಂತಪ್ರೆ. ಅದೂ ಅಲ್ದೆ, ಮಾನ್ಯದ ಜಮೀನು ಸುಮ್ಕೆ ಒಂದೆರ್ಡೊರ್ಷ ಗೇಕೊಳ್ರಿ ಅಂತ ಕೊಟ್ಟಿರೋದು. ಎಂಗರಾ ಮಾಡಿ ಕೊಡುಸ್ರಿ'' ಅಂತ ಫೈನಲ್ ಟಚ್ ಎಪಿಲಾಗಿನಂತೆ ನೀಡಿ, ಕಾಲ್ಮುಗಿಯೋನ ಹಾಗೆ ಕುಂತಲ್ಲೇ ಕೈ ಮೈ ಪೂರಾ ಬಗ್ಗಿಸಿ ಎಡ್ರೂ ಕೈ ನೆಲಕ್ಕಾನಿಸಿ ಕಣ್ಮುಗ್ತ್ಕೊಂಡು ಮುಗಿದು ಎದ್ದುನಿಂತ. ಸಂಪ್ರದಾಯದಂತೆ, ಮಂದಸ್ಮಿತೆಯಾಗಿ ವಕುಳಾದೇವಿಯವರು ನಿಧಾನಕ್ಕೆ ಎದ್ದು ಒಳಗಾದರು.

ಅಂಗೈ ನೆಲಕ್ಕಾಕಿದಾಗ, ಅದೆಲ್ಲಿತ್ತೋ ಸ್ವಲ್ಪ ಒಣಗಿ – ಕಬ್ಬಿಣದ ಕಡ್ಡಿಗೆ ನೇತಾಕಿದ್ದ ಲಾಟೀನು ಬೆಳಕಿಗೆ ಕಾಣದಂಗಿದ್ದ ಕೋಳಿ ಏಲು ಕೈಗೆ ಮೆತ್ತಿಕೊಂಡಿದ್ದರಿಂದ, ಏನೆಂದು ತಕ್ಷಣಕ್ಕೆ ತಿಳಿಯದೆ ಅತಿ ಸಹಜವಾಗೇ ಮೂಗಿಗಿಡಿದು ಮೂಸಿ ''ಥುತ್ ಇವನನ್ನು'' ಅಂತ ಬೈಕೊಂಡು, ಅಯ್ನೋರ ಮನೀಗೆ ಇದೆಂಗೆ ಬಂತು ಅಂತನ್ನೋ ಸಖೇದಾಶ್ಚರ್ಯದಿಂದ ಸುತ್ತಲೂ ಕಣ್ಣಾಡಿಸಿದಾಗ, ಹಿಂದಿನ ಮನೆ ಅಂಜಮ್ಮನ ಎಂಟೆ, ತಪ್ಪಿಸಿಕೊಂಡು ಅಯ್ನೋರ ಅಂಗಳದ ಬೇವಿನ ಮರವೇರಿ ಕುಂತಿದ್ದು ಕಂಡು ಏಲಾಗಿದ್ದ ಕೈ, ಡ್ರಾಯರಿಗೆ ತಿಕ್ಕೊಂತಾ ಮನಸಿನಲ್ಲೇ ಮಸಾಲೆ ಅರೆದ.

ಹೆಂಡಿರ ಗಾತ್ರದ ಪ್ರಾಬಲ್ಯದಿಂದ ಮತ್ತು ಸಂತಾನವೂ ಇಲ್ದೇ ಇದ್ದಿದ್ರಿಂದ, ಅಲ್ಲಲ್ಲಿ ತುರಿಕೆ ಚಟವಿದ್ದ ರಸಿಕ ವೆಂಕಟ್ರಾವ್ಗೆ ತಮ್ಮ ಸಂಸಾರದ ಬಗ್ಗೆಯೂ ಪಾಪ ಭೀತಿ ಇದ್ದಿತ್ತಾದ್ರೂ, ಅಯ್ನೋರೆಣ್ಮಕ್ಕನ್ನ ಬಳಸೋದಿರ್ಲಿ, ಭ್ರಮಿಸಿದ್ರೂ ಏಳೊರ್ಷಗಳ ದರಿದ್ರ ಬರ್ತೈತೆ ಅನ್ನೋ ಜನಗಳ ಬಲವಾದ ನಂಬಿಕೆ, ವೆಂಕಟ್ರಾವ್ಗೆ ತಮ್ಮ ಗಲೀಜು ಚಟಗಳ ಮಧ್ಯೆಯೂ ಒಂದ್ರೀತಿಯ ಸೆಕ್ಯೂರಿಟಿ ಫೀಲಿಂಗ್ ನೀಡಿತ್ತಲ್ದೆ, ಗರತಿ ವಕುಳಮ್ನೋರು ಸಾ ಇದ್ಯಾವುದರ ಪರಿವೆಯೂ ಇಲ್ದೆ, ದೇಹಬಾಧೆಯೂ ಇಲ್ದೆ ಇದ್ದವ ರಾಗಿದ್ದು ಚಿಕ್ಕಂದಿನಲ್ಲೇ ಕೇಳಿ ತಿಳಿದಿದ್ದ, 'ತೂತೊಂಭತ್ತಿನ ತೊಗಲ ಚೀಲವಿದು' ಅನ್ನೋ ಆಧ್ಯಾತ್ಮಿಕಾರ್ಥದ ಜೀವನಕ್ಕೆ ಒಗ್ಗಿಹೋಗಿದ್ದರು. ಈ ಎಲ್ಲಾ ನೇಪಥ್ಯದಲ್ಲಿ ನಾರಾಯಣ ತನ್ನ ಕೇಸನ್ನ ಫೂಲ್ ಪ್ರೂಫ್ ಮಾಡಿಕೊಳ್ಳುವ ಹಣಾಹಣಿಯಲ್ಲಿದ್ದ. ನೀತಿವಂತರ ಮನೆತನದ ಹೆಣ್ಣಾಗಿದ್ದ ವಕುಳಮ್ಮ ಸಹಜವಾಗೇ ನಾರಾಯಣನ ಕೇಸನ್ನು ಗಂಡನೊಂದಿಗೆ ನೆಗೋಶಿಯೇಶನ್ನಿಗೆ ವಹಿಸಿಕೊಂಡರು.

> ವೀರಭದ್ರಯ್ನೋರಿಗೆ ಆಂಧ್ರ ಮೂಲದ ಮರ್ಡರಸ್ ರಾಜಕೀಯಗಳೂ, ಫ್ಯಾಕ್ಷನ್ ವರ್ಗ ಹೋರಾಟಗಳೂ, ಡೈಲ್ಯೂಟ್ ಆಗಿದ್ರೂ ಬದಿಕ್ಕಂಡಿದ್ದ ನಕ್ಸಲಿಸಂ, ವೆಂಕಟಾಪುರಂ, ಮದ್ದುಲ ಚೆರುವು ಎಲ್ಲಾ ಗೊತ್ತಿತ್ತು. ಇವೆಲ್ಲಾ ತನ್ನ ಸ್ಟೇಶನಿನ ತೆಕ್ಕೆಗೇ ಇದ್ವು ಅನ್ನೋದು ಗೊತ್ತಿತ್ತು. ಆದ್ರೂ ಅದ್ಯಾಕೋ ಸಣ್ಣ ಮತ್ಯಾಲೀನ ಸಖತ್ತಾಗೇ ಜಬರಿಬಿಟ್ಟಿದ್ರು. ಈ ಮಂದೀನ ಯಾರು ಏನೂ ಮಾಡಾಕಾಗಲ್ಲ ಅಂತ ಅವ್ರಿಗೆ ಗೊತ್ತಿತ್ತು. ತಾವು ಈಗ ರಿಟೈರ್ಡ್ ಆದ ಮೇಲೆ ಮಗನಂತ ತಮ್ಮನಿಗೆ ಜೀವಭಯ, ತಮ್ಮ ಆಸ್ತೀ ಜಾರಿಹೋಗೋ ಭಯ, ಅವಮಾನದ ಭಯ ಎಲ್ಲಾ ಸೇರಿ ಅವರ ಕಣತೆಗಳನ್ನ ಬಿಗಿಮಾಡಿ ಸೆಟಗೊಂಡವೇ ವಿನಾ ಐಡಿಯಾ ಹೋಳೀಲಿಲ್ಲ.

ಕೊನೆಗೆ, ಊಟದ ಶಾಸ್ತ್ರ ಮುಗಿಯೋತ್ಗೆ ಶಾನುಭೋಗ್ರು ''ಆಯ್ತು ನೆವಕ್ಕಾದರೂ ರೆಡ್ಡೋರ್ಗೆ ಹೇಳಿ ಒಂದ್ಮಾತು ಆಯ್ತು ಅನ್ನಿಸಿಕೊಂತೀನಿ'' ಅಂದ್ರು. ಅವರಿಗೆ ಅದರ ವಿನಃ ಬೇರೆ ದಾರೀನೆ ಇರ್ಲಿಲ್ಲ. ಯಾಕೆಂದ್ರೆ, ಎಂಥ ರೆಕಮೆಂಡೇಶನ್ ಜೊತೆಗೆ ಹಾರುವಿನ ಭಾರೀ ಎದೆ, ಕುತ್ತಿಗೆ, ಬಾಹುಗಳಲ್ಲಿ ಅವಳ ಬಳಲಿಕ (ಅಂತ ಅವರು ಗರ್ವಿಸುತ್ತಿದ್ದರು). ಇನ್ನೂ ಎಂತೆಂಥದೋ ನೆನಪಾಗಿದ್ದೇ ಅಲ್ದೆ, ರೆಡ್ಡಿಯ ಮುಂದೆ ತನ್ನ ಸುಪ್ರಿಮೆಸಿಯ ವೈಭವಕ್ಕೆ, ಹಳ್ಳಿ ರಾಜಕೀಯಕ್ಕೆ, ಮತ್ತು ನಾರಾಯಣನ ಅತೀ ಅನಿವಾರ್ಯತೆಯ ಅರಿವಿಗೆ ಶರಣಾಗಿ ಊಟದ ಹೊತ್ತಿಗೆ, ತಮ್ಮ ಭಾರದ ಒತ್ತಡಕ್ಕೆ ಕುಂಡೆಗೆ ಅಂಟಿ ಕೊಂಡಂತಾಗಿದ್ದ ಪಂಚೇನ ಮೇಲೇಳುತ್ತಲೇ ತಿಕ್ಕಿ ಬಿಡಿಸಿ ಕೊಳ್ಳುತ್ತಾ ಸಡಿಲಾಗಿಸಿಕೊಂಡು ನಿರ್ಧಾರ ತಗೊಂಡ್ರು.

ಆರೆಕರೆ ತನ್ನ ಸುಪರ್ದಿಗೆ ಬಂದಮೇಲೆ, ಶಾನುಭೋಗರ ವಕುಳಾ ವಂಚಿತ ದೇಹಕ್ಕಂತಾ ಸುಮಾರು ಸುಮಾರು ಸಮರ್ಪಣೆಗಳನ್ನು ನೈವೇದ್ಯಕ್ಕಾಗಿಸಿದ ಮೇಲೆ, ಶಾನುಭೋಗರ ಮೇಲಿನ ನಾರಾಯಣನ ಹಿಡಿತ ಒಂದು ಹದಕ್ಕೆ ಬಂದಿತ್ತು. ಹೊಲ ಕಳಕೊಂಡ ಒಲೇರ ಮಂದೀ ಸಾ ವಿಪರೀತ ಕುಡಿತಗಳಿಗೆ ಬಿದ್ದು, ಕೂಲಿಗಳು ಬರವಾದಾಗ, ಇನ್ಯಾರ ದುಸ್ರಾ ಮರುಕವೂ ಗಳಿಸಲಾಗದೇ, ಜೊತೆಗೆ ಸೋಮಾರಿತನವೂ ಮೈಗಂಟಿದ್ದರಿಂದ ಮಾನ್ಯದ ಜಮೀನಿನ ವಿಷಯಕ್ಕೆ ಬಾಯಿ ಬರಲೇ ಇಲ್ಲ. ಹಾಗಾಗಿ ಅಲ್ಲಿರುವ ಕಾರಣವೇ ಇಲ್ಲದಿದ್ದರಿಂದ, ಇನ್ಯಾವುದೋ ಕಾರಣಕ್ಕೆ ಅವರೆಲ್ಲಾ ಊರು ಬಿಟ್ಟು ಮಗ್ಗುಲಿಗೇ ಆಂಧ್ರದ ಗಡಿಯಲ್ಲಿದ್ದ ಕುಂದಿರ್ಪಿಯಲ್ಲಿ ನೆಲೆ ಕಂಡ್ರು. ನಿಧಾನಕ್ಕೆ, ನಾರಾಯಣ ಖಾತೆ ಕಿರ್ದಿ, ಪಟ್ಟ, ಕಂದಾಯ, ಪಾಡು ಪಡಸೆಟ್ಟಿ ಅಂತ ಏನೇನು ಬೇಕೋ ಅದೆಲ್ಲ ಮಾಡಿಸಿ ಕೊಂಡು ಆರೆಕ್ರೆ ಜೊತೆಗೆ, ಕುಂಡಿ ಒತ್ತಿರ್ಸಿ ಒತ್ತಿರ್ಸಿ, ಇನ್ನೊಂದೆರ್ಡೆಕ್ರೆ ಸೇರಿಸಿಕೊಂಡು, ಮಾತಾಡೋಕೆ ಬಂದೋರ್ಗೆ, ತಾನು ಗೋರ್ಮೆಂಟಾಗಿದ್ದ ಶಾಂಭೋಗ್ರಿಗೆ ಕಿಸ್ತು ಕಟ್ಟಿ ಸರ್ಕಾರಿ ಖರಾಬು, ಗೇ ಕಂಡಿದೀನಿ ಅಂತೇಳ್ತಾ ಬುಲ್ದೇ ಬಿಟ್ಟು ಎಂಟೆಕೆರೆಯ ನೆಲಕ್ಕೆ ಕಿಲ್ಲೇದಾರನಾದ.

ಎಸ್ಸೆಲ್ಸಿ ಮುಗಿಸಿಕಂಡು ಆದಾಗ್ಲೇ ಮದುವೆಯಾಗಿ, ಒಂದು ಹೆಣ್ಣು ಮಗೀನ ಹೆತ್ತು ಗಂಡಸಾಗಿದ್ದ ಒಬ್ಬೇ ಒಬ್ಬ ಮಗ ಈರ್ಭದ್ರನ್ನ ನಾರಾಯಣ ಚಳ್ಳಕೆರೆಯ ರಾಧಾಕೃಷ್ಣ ಶೆಟ್ಟರ ಜವಳಿ ಅಂಗಡಿಯಲ್ಲಿ ಕೆಲಸಕ್ಕಿಟ್ಟು, ಊಟದ ಖರ್ಚಿಗಂತಾ ನೆಂಟರ ಮನೆ ಗೊತ್ತುಮಾಡಿ ದರ್ಶಾ ಇಷ್ಟು ಅಂತಾ ಕಳ್ಳೇಕಾಯಿ ಕೊಟ್ಟ. ದಿವ್ಯದೃಷ್ಟಿಯಿಂದ ಭವಿಷ್ಯ ನೋಡ್ತೋನಂಗೆ ತಾನೂ ಸಾ ನಿಧಾನಕ್ಕೆ ಪರಶುರಾಂಪುರಕ್ಕೆ ಸೂರು ಬದಲಾಯಿಸಿ, ಇದ್ದ ಗೂರಲಿಗೆ ನಾಟಿ ಔಷಧಿಯ ನೆಪಕೊಟ್ಟ. ಬದಲಾವಣೆ ಗಾಳಿ ಜೋರಾಗಿ ಬೀಸ್ತಾ [illegible] ಇತ್ತು. ಆ ಗಾಳೀಲಿ ಒಂದ್ಕಾಲ ಗೌಡಿಕೆ, ಶಾನುಭೋಗಿಕೆ ಎಲ್ಲಾ ಪಟಾ ಪಂಚಲಾಗಿ ಹೋಯ್ತು. ಪಟ್ಟಗಳನ್ನ ಸುತ್ತಿ, ಮೊದಲೇ ಇಂತದುದರ ನಾಡಿ ಅರಿತಿದ್ದ, ತಕ್ಕಮಟ್ಟಿಗೇ ಸಂಭಾವಿತನೇ ಆಗಿದ್ದ ಅನಂತ ರೆಡ್ಡಿ ಸಾ ವಾಸ್ತವ್ಯ ಚಿತ್ರದುರ್ಗಕ್ಕೆ ಬದಲಾಯಿಸಿ ಜಮೀನುಗಳ ವ್ಯವಸಾಯಕ್ಕೆ ಮಾತ್ರ ಬರ್ತಾ ಹೋಗ್ತಾ ಇದ್ದ. ಇಷ್ಟರಲ್ಲೇ ಯಾವ ಲಾಲನೆ, ಪಾಲನೆ ಕಂಡಿರದಿದ್ದ, ದೇವರ ಮೇಲೇ [illegible] ವಕುಳಮ್ಮೋರು ಸಾ [illegible]ದಲ್ಲೇ, ಪಾಪ.

[illegible] ಊರಿಂದಾಚೆಗೇ [illegible]. [illegible] ಹಿಂದೆ ಬಿಟ್ಟೋಗಿದ್ದ ಗಂಡ [illegible] ಪಾವರ್ತಿ, ಮಾಜಿ ಶಾನುಭೋಗ್ರ [illegible] ಈಗಲೂ ಬೇಕಾದಾಗಿ [illegible]. ಇನ್ನಾ [illegible] ಸಿದ್ಧತ್ತನ [illegible], ಇನ್ನ ದುರ್ಗಾಪ್ಟೋ [illegible] ನಿರ್ಧಾರಕ್ಕೆ [illegible]ದ್ದರಿಂದ ಎಲ್ಲಾಬಿಟ್ಟು ಮಾವಂದಿರಿದ್ದ ದೂರದ ಮೈಸೂರಿಗೆ ಅಂತನ್ನೋ ವಿಷಯ ತೀರ್ಮಾನಿಸೋ ಒತ್ತಿಗೆ ''[illegible] ನಕ್ಸಲೈಟು ಸಾರುಗಳು [illegible] ಜಮೀನಿನ [illegible] ಜಮೀನೆಲ್ಲಾ [illegible] ಕಿತ್ಕೊಂಡು ಜಮೀನಿಲ್ಲೋರಿಗೆಲ್ಲಾ ಅಂಚ್ತಾರಂತೆ. ತೀಟೆ ತರ್ಲೆ ಮಾಡಿದ್ರೆ, ಕೊಚ್ತಾರಂತೆ'' ಎಂಬ ದಾವಾನಲ ಸದೃಶ ಕಾಡ್ಗಿಚ್ಚಿನ ಸುದ್ದಿ [illegible] ಈಗಾಗಲೇ ಆಂಧ್ರದ ತೆಲಂಗಾಣದ ನಕ್ಸಲೈಟುಗಳ [illegible], [illegible] ಕರ್ನಾಟಕ ಗಡಿ ಪ್ರವೇಶ, [illegible] ಹೋರಾಟಗಳು, ಎಲ್ಲಾ ಒಮ್ಮೆಗೇ ನೆನಪಾಗಿ, ವೆಂಕಟ್ರಾವ್ [illegible] ತಲೆ ಕೆಡಿಸಿಕಳ್ದಂಗೆ, ಬುದ್ಧಿವಂತಿಕೆಯಿಂದ – ಕಾಣೀ ದುಗ್ಗಾಣಿ ಗುತ್ತಿಗೆಗೆ, ಕೌಲಿಗೆ – ತಮ್ಮೆಲ್ಲಾ ಎಕರೆಗಳನ್ನ ಒಪ್ಪಿಸಿ ವೃದ್ಧ ಅಪ್ಪನ ಕ್ಷಯದ ಕಾರಣ ಹಿಡಿದು ಗಂಭೀರವಾಗಿ ಮೈಸೂರವರಾದರು. ಅಪ್ಪ ನಾರಾಯಣ ಮಾತ್ರ ಗೂರಲು ಗುಳಿಗೇ ನುಂಗುತ್ತಲೇ ಇದ್ದು, ಇತ್ತ ಬರಲೇ ಇಲ್ಲ. ಆಮೇಲಾಮೇಲೆ ವಿಷಯದ ಅರಿವರಿತಿದ್ದ ನಾರಾಯಣ ತನ್ನ ಎಂಟೆಕರೆಯಲ್ಲಿ, ಒಂದೆರ್ಡೆಕರೆ ಅಣ್ಣನ ಕೊನೇ ಮಗ ವೆಂಕಟೇಶನಿಗೆ ಓರೇರ ಮೊಕ್ತಾ ಸುಮ್ಮನೆ ಬರಕೊಟ್ಟು, ಮಿಕ್ಕ ಜಮೀನು ಸಾ ಸದ್ಯಕ್ಕೆ ಅವರ ಸುಪರ್ದಿಗೆ ಬಿಟ್ಟು, ತಾನು ಪೂರ್ತಿ ಜಂತೀ ಜಾಗಟೇ ಸಮೇತ [illegible]. ಅದೃಷ್ಟವ್ರೂ ಸಾ ಅಲ್ಲಲ್ಲಿ ಉಗಿಸ್ಕೊಂಡು ನಾರಾಯಣನನ್ನೇ ಉಡಿಕ್ಕಂಡ್ ಬರ್ತಿತ್ತು. ಅಂಗೂ ಇಂಗೂ ಮಗ ಈರ್ಭದ್ರನಿಗೆ ಒಡೆಯ ಶಾನುಭೋಗರ ಹೊರಗಿನ ನೆಚ್ಚಿಕೆಯವರನ್ನೆಲ್ಲಾ ಕಂಡು ''ನೀ ಕಾಲ್ಮೊಕ್ತಾ ದೊರಾ ನೀ ಭಾಂಚನ್' (ನಿನ್ನ ಕಾಲ್ಮುಗಿತೀನೊಡೆಯ, ನಿನ್ನ ಗುಲಾಮು) ಅಂತೆಲ್ಲ ತೆಲಂಗಾಣಾ ಸ್ಟೈಲಿನಲ್ಲಿ ಅಡಿ ಅಟ್ಟಕ್ಕೇರಿಸಿ ಅಡ್ಬಿದ್ದು, ಅವರ ಗತಗಳ ಠೀವಿಯನ್ನ ಆಗಾಗ ಠೇಂಕರಿಸಿ ಅವರು ತಬ್ಬಿಬ್ಬಾದ ಶುಭ ಗಳಿಗೆಗಳಲ್ಲಿ ಅವರನ್ನ ಒಪ್ಪಿಸಿ ಮಗನಿಗೆ ಖಾಕಿ ಬಟ್ಟೆಯ ಪೊಲೀಸಿನ ಗೋರ್ಮೆಂಟ್ ನೌಕ್ರಿ ಗಿಟ್ಟಿಸಿಯೇ ಬಿಟ್ಟ. ನಂತರದಲ್ಲಿ, ಖಾಕಿ ಬಟ್ಟೆಯ ಗೋರ್ಮೆಂಟ್ ನೌಕರನ ತಂದೆ, ನಾರಾಯಣಪ್ನೋರು ಅವಾಗಾವಾಗ ಕ್ಯಾದಿಗುಂಟೆಗೆ ಬಂದು ಒಗೋ ಕೆಲಸ ಮಾಡ್ಕೊಂಡು ಕೌಲು ತಗೊಂತಾ ನಕ್ಸಲೈಟುಗಳ ವಿಷಯದಲ್ಲಿ ಮೈಯೆಲ್ಲಾ ಕಣ್ಣಾಗೇ ಇದ್ರು. ಆತ ಬದುಕಿದಷ್ಟು ಕಾಲ ಯಾವ ಸಾರುಗಳೂ ಬರಲೇ ಇಲ್ಲ. ಹಂಗೇ [illegible] ಕಳೆದೋದ್ಮೇಲೆ, ನಾರಾಯಣಪ್ಪ ದಂಪತಿಗಳು, ಅಷ್ಟೊತ್ತಿಗಾಗಲೇ ದಫೇದಾರ್ ಮಗನ ಮನೇಲಿ ಫೋಟೋ ಆದ್ರು ಮತ್ತು ಗೋಡೆ ಏರಿದ್ರು. ಬಂಗಾರದ ಬಣ್ಣದ ಫ್ರೇಮ್ ಒಳಗಿದ್ದ ಅವರಿಗೆ ಸುಶೀಲಮ್ಮ ವಾರಕ್ಕೆರಡು ದಿನಾ ಮರೀದಂಗೆ ನಾಕಾಣೆ ವರ್ತನೇ ಹೂ ಏರಿಸ್ತಿದ್ಲು. ಊದಕಡ್ಡಿ ಸಿಗಿಸ್ತಿದ್ದ ಮೂಲೆ ಮಾತ್ರ ಸ್ವಲ್ಪ ಇತ್ತೀಚೆಗೆ ಕಪ್ಪಾಗಿತ್ತು. ಒರೆಸಿದ್ರೂ ಬಣ್ಣ ಹೋಗ್ತಿರಲಿಲ್ಲ.

ಸುಟ್ಟ ಬೂದಿ ಇಟ್ಕೊಂಡು, ಸಿಗರೇಟು ಕೊನೆಗೆ [illegible] ರಾಜಪ್ಪ ಟವಲ್ಲಿನಲ್ಲಿಡಿದು, ಎರಡೇ ಗುಟುಕಿಗೆ ಕುಡಿದು, ತುಟಿ ಸವರಿಕೊಳ್ಳುತ್ತಾ ಬಾಯ್ಬಿಟ್ಟ.

''ಸಾ ಮನ್ನೆ ದಿನಾ ಕುಂದಿರ್ಪಿ ಕಡೆಯ ನಕ್ಸಲೈಟು ಸಾರುಗಳು ಬಂದಿದ್ರು, ತಮ್ಪೆ ಒಡ್ಕಂತಾ. ರಾಮುನ ಮಾನ್ಯದ ಅಳೇ ಜಮೀನೆಲ್ಲಾ ಬಿಡಿಸಿ ಬಡವರ್ಗ ಈ ಸಾರಿ ಅಂಚೇಬಿಡ್ತಾರಂತೆ. ಅವೆಂತೆಂತವೋ ಆಡುಗಳೂ ಏಳಿದ್ರು, ನಮ್ಮ ಜಮೀನೇ ಅಲ್ದೆ, ವೆಂಕಟೇಶಣ್ಣನ ಜಮೀನ್ನಾಗೂ ಕೆಂಪನ್ನೆ ಜಂಡಾ ನೆಟ್ಟವ್ರೆ. ಅಳೇ ಶಾಂಭೋಗ್ರು ವೆಂಕಟ್ರಾವ್ ಅಂತಿದ್ರಂತಲ್ಲ, ಅವ್ರೆಸ್ರೂ ಮತ್ತೆ ನಿಮ್ಮಪ್ನೋರು ನಾರಾಯಣಪ್ನೋರ ಎಸ್ರೂ ಸಾ ಏಳಿದ್ರು. ಅಷ್ಟೇ ಅಲ್ದೆ, ನನ್ನೂ ವೆಂಕಟೇಶಣ್ಣನ್ನೂ ಕರ್ಸಿ ಜಮೀನಿನ [illegible] ಎಲ್ಲಾ ಏಳಿ, ಇನ್ನೊಂದ್ವಾರ್ದಾಗೆ ಪರ್ಯಾರ ಅಂತ ಎತ್ತೀಗಿವತ್ತಾದ್ಹಂತೆ ಆವತ್ತು ಊರು ಬಿಟ್ಟೋರ್ಗೆ ಕೂಡ್ಲಿಲ್ಲಾಂದ್ರೆ ನೋಡ್ಕಂತೀವಂತಾ. ಬಾಂಬು ತೋರ್ಸಿ ಏದರಿಸಿದ್ರು. ಅಗ್ನೋ, ಅವರತ್ರ ಬಂದೂಕು, ಬಟ್ಟೇ ಬ್ಯಾಗಿನಾಗೆ ಪಿಸ್ತೂಲು ಪಾಂಪ್ಲೇಟು ಎಂತೆಂತವೋ ಇದ್ವು. ಅವರ ಗುಂಪ್ನಲ್ಲಿ, ನಿಮ್ಮಪ್ನೋರು ಊರು ಬಿಡಿಸಿದ್ರಂತಲ್ಲಾ – ಆ ಒಲೇರ ಜನಾನೂ ಇದ್ರಂತೆ'' ಅಂತ ರಂಗಬಿರಂಗಾಗಿ ಹೇಳಿ ಒಪ್ಪಿಸಿದಾಗ ರಿಟೈರ್ಡ್ ಎ ಎಸ್ ಐ ವೀರಭದ್ರಯ್ನೋರು ಹಳೇ ಈರಭದ್ರನಾಗಿ ಒಳ್ಗೊಳ್ಗೆ ಫೀಲಾದ್ರು. ಜಮೀನಿನ ವಿಷಯ ತಮಗೆಲ್ಲಾ ಗೊತ್ತಿತ್ತು. ''ಇವನವ್ವನ್ನಾಡ ವಿಪ್ಲವ ಮಾಡ್ತಾರಂತೆ ವಿಪ್ಲವ... – ನಾನು ಸರ್ವೀಸಲ್ಲಿದ್ದಂಗೆ ಬರ್ಬೇಕಿತ್ತು ಆ ನನ್ ಮಕ್ಳಿಗೇಳ್ತಿದ್ದೆ'' ಅಂತ ತಮ್ಮ ಕೈಲಾಗದ್ದನ್ನ ಇಲ್ಲದ ಸರ್ವೀಸಿಗೆ ಆನಿಸಿಕೊಂಡು, ಇನ್ನೊಂದ್ಸಾರ್ತಿ, 'ಸೂಳೇ ಮಕ್ಳು ಬರ್ಲಿ ಬರ್ಲಿ' ಅಂತ ಸ್ವಗತಿಸಿಕೊಂಡು ವಿಸ್ಮಯದಲ್ಲಿ ಮೌನವಾದ್ರು.

ಬೆಳಿಗ್ಗೇನೇ ಚುಮುಚುಮು ಬಿಸಿಲಾಗಿದ್ರೂ, ಛಳೀ ಇದ್ರೂ ಕಿವಿ ಮಗ್ಗುಲಿನ ಸೈಡ್ ಕ್ರಾಪಿಗುಂಟಾ ಎರಡು ವೃದ್ಧ ಬಿಳಿರನ್ನ ಕೆನ್ನೆ ಸಾರಿಸಿಕೊಂಡು ಇಳೀತಾಯಿತ್ತು. ದವಡೇ ಕಚ್ಚಿ, ಸಾವರಿಸಿಕೊಂಡು ''ಹೋಗ್ರಲೇ'' ಅಂತಾ ರಾಜಪ್ಪನಿಗೇಳಿ ಹೊರಡಲನುವಾದ ಹಳೇ ಸಾಯೇಬ್ರನ್ನ ಓಟ್ಲು ಸತೆಪ್ಪ, ''ಇನ್ನೂ ಬೋಣೀ ಇಲ್ಲಣೋ'', ಅಂತ ಹಲ್ಲುಗಿಂಜಿ ತಡೆದದ್ದೇ ಮಹಾ ಪಾತಕವೆಂಬಂತೆ ... ನೋಡಿ, ಜೋಬಲ್ಲಿದ್ದ ಚಿಲ್ರೇನ, ಸೂತಕದವನಿಗೆ ಕೊಟ್ಟಂಗೆ, ದೂರದಿಂದಲೇ ಅವನ ಮಾಸಿದ್ದ ಕೈಗಾಕಿದರು.

ತಮ್ಮನಾದ ದೊಡ್ಡಪ್ಪನ ಮಗ ವೆಂಕಟೇಶನ್ನ ಸ್ವಂತ ಮಗನಂತೆಯೇ ನೋಡಿಕೊಂಡಿದ್ದ ವೀರಭದ್ರಯ್ನೋರು ತನ್ನ ಮಗನೇ ಅನ್ನೋ ಅಂಗೆ ಸಾಯಮಾಡಿ ಇಂಪ್ರೂ ಮಾಡಿದ್ರು. ಅಣ್ಣ ಪೊಲೀಸ್ ಅನ್ನೋ ವಿಷಯ ಬಳಸಿ ಅಷ್ಟೋ ಇಷ್ಟೋ ಏಸರಾಗಿದ್ದ ವೆಂಕಟೇಶ ಕಟ್ಟುಮಸ್ತಾದ ಆಳಾಗಿದ್ದ. ಅವ್ರಪ್ಪ ಬೊಮ್ಮಯ್ಯ ಅಂದ್ರೆ, ವೀರ್ಭದ್ರಪ್ನೋರ ದೊಡ್ಡಪ್ಪ ಆಗಲೇ ಮಣ್ಣಾಗಿದ್ರು. ಅಂದು ನಾರಾಯಣಪ್ಪ ಇರ್ಲಿ ಅಂತಾ ಕೊಟ್ಟಿದ್ದ ಎರಡೆಕ್ರೇನಲ್ಲಿ ದುಡಿದು ಅದನ್ನು ಪಸಂದಾದ ತೋಟ ಮಾಡಿದ್ರು. ಅವರಲ್ಲೇ ಇದ್ದ ಮಿಕ್ಕ ಜಮೀನನ್ನ, ವೀರಭದ್ರಯ್ನೋರು ವ್ಯವಹಾರಕ್ಕೆ ಬಂದ್ಮೇಲೆ ರಾಜಪ್ಪನಿಗೆ ಈ ನಡುವೆ ಕೊಡಿಸಿದ್ರು. ಈಗಿನ ವಿಚಾರ ತಿಳಿದಾದ ಮೇಲೆ ವೀರಭದ್ರಯ್ನೋರು ಭಾಳಾನೆ ಚಿಂತೆ ಮಾಡಕೆ ಶುರುವಿಟ್ರು. ತಾವು ಹೊಸಕೋಟೆಯಲ್ಲಿದ್ದಾಗ ರ್‍ಯಾಡಿಕಲ್ಸ್ ಕೇಸಿನಲ್ಲಿ ತನ್ನಪ್ಪ ಒಕ್ಕಲೆಬ್ಬಿಸಿದ್ದ ಆ ಒಲೇರ ಮುತ್ಯಾಲಪ್ಪನ ಮಗ ಸಣ್ಣ ಮುತ್ಯಾಲೀನ ಎತ್ತಾಕಂಬಂದಿದ್ರು. ಅಂದು ನಿಜದಲ್ಲಿ ಆಂಧ್ರದಲ್ಲಿ ಸಾರಾಯಿ ನಿಷೇಧವಿದ್ದಾಗ, ಕರ್ನಾಟಕದ ಹೊಸಕೋಟೆ ಇಂದ, ಚೀಪ್ ಲಿಕ್ಕರ್ನ ತಲೇ ಮೇಲೆ ರಾತ್ರೆಲ್ಲಾ ಒತ್ಕೊಂಡು, ದಿಣ್ಣೆಗಳ ಗುಂಟಾ ಸಾಗಿಸಿ ಕುಂದಿರ್ಪಿಯಲ್ಲಿ ಮಾರ್ಕೊಂಡು ಆ ಸಂಸಾರ ಬದುಕು ಮಾಡ್ಕಂಡಿತ್ತು. ಪಾಪ, ಅವನು ರಾಡಿಕಲ್ ಆಗಿಲ್ಲದಿದ್ರೂ, ಎತ್ತಾಕ್ಕಂಬಂದು ಅದ್ಯಾಕೋ ವೀರಭದ್ರಯ್ನೋರು, ಯಾಪಾಟಿ ಬಡ್ಡಿದ್ರು ಅಂದ್ರೆ, ಅವ್ನು ಆಮೇಲೆ ಎರಡ್ಲೂರು ತಿಂಗ್ಳು ಬದುಕು ಮಾಡ್ಲಿಲ್ಲ. ಪೊಲೀಸ್ನೋರೆ ಅವನ್ನ ಕಷ್ಟಪಟ್ಟು ಅರ್ಧಂಬರ್ಧ ರ್‍ಯಾಡಿಕಲ್ ಮಾಡಿಬಿಟ್ರು.

ವೀರಭದ್ರಯ್ನೋರಿಗೆ ಆಂಧ್ರ ಮೂಲದ ಮರ್ಡರಸ್ ರಾಜಕೀಯಗಳೂ, ಫ್ಯಾಕ್ಷನ್ ವರ್ಗ ಹೋರಾಟಗಳೂ, ಡೈಲ್ಯೂಟ್ ಆಗಿದ್ರೂ ಬದಿಕ್ಕಂಡಿದ್ದ ನಕ್ಸಲಿಸಂ, ವೆಂಕಟಾಪುರಂ, ಮದ್ದುಲ ಚೆರುವು ಎಲ್ಲಾ ಗೊತ್ತಿತ್ತು. ಇವೆಲ್ಲಾ ತನ್ನ ಸ್ಟೇಶನಿನ ತೆಕ್ಕೆಗೇ ಇದ್ದು ಅನ್ನೋದು ಗೊತ್ತಿತ್ತು. ಅದ್ರೂ ಅದ್ಯಾಕೋ ಸಣ್ಣ ಮುತ್ಯಾಲೀನ ಸಖತ್ತಾಗೇ ಜಬರಿ ಬಿಟ್ಟಿದ್ರು. ಈ ಮಂದೀನ ಯಾರು ಏನೂ ಮಾಡಾಕಾಗಲ್ಲ ಅಂತ ಅವ್ರಿಗೆ ಗೊತ್ತಿತ್ತು. ತಾವು ಈಗ ರಿಟೈರ್ಡ್ ಆದ ಮೇಲೆ, ಮಗನಂತ ತಮ್ಮನಿಗೆ ಜೀವಭಯ, ತಮ್ಮ ಆಸ್ತೀ ಜಾರಿಹೋಗೋ ಭಯ, ಅವಮಾನದ ಭಯ ಎಲ್ಲಾ ಸೇರಿ ಅವರ ಕಣತೆಗಳನ್ನ ಜಿಗಿ ಮಾಡಿ ಸೆಟಗೊಂಡವೇ ವಿನಾ ಐಡಿಯಾ ಹೋಳೀಲಿಲ್ಲ. ಪೊಲೀಸ್ ಕಂಪ್ಲೇಂಟನ ತಾಖತ್ತು ಏನು ಅಂತ ಅವರಿಗೆ ಗೊತ್ತಿದ್ರಿಂದ, ಅದನ್ನ ಕೈಬಿಟ್ರು. ತಕ್ಷಣ ಏನೋ ಹೊಳೆದವರಂಗೆ, ತಮ್ಮ ವೆಂಕಟೇಶನಿಗೆ ಒಂದು ಚೀಟಿ ಬರೆದು, ಛಾರ್ಜಗಂತಾ ಇಪ್ಪತ್ತು ಜತೆ ಮಾಡಿ, ರಾಜಪ್ಪನ ಕೈಗೆ ಕೊಟ್ರು. ಅದ್ರಲ್ಲಿ ಐದು ರೂಪಾಯಿ ಮಿಕ್ಕೋ ಸೂಚನೆ ಕಂಡ ರಾಜಪ್ಪ ಮೊದಲೇ ಜೀಡಿಕಟ್ಟು ಬೆಂಕಿಪಟ್ಣ ತಗೊಂಡೇ 'ಅನುಮಾನ' ಬಸ್ಹತ್ತಿದ.

ಆಗ ತಾನೇ ಡ್ರಾ ಮಾಡ್ಕೊಂಡ್ ಬಂದಿದ್ದ ನೂರರ ನಾಕು ಕಟ್ಟುಗಳನ್ನ ಊರಿಂದ ಬಂದಿದ್ದ ವೆಂಕಟೇಶನ ಕೈಗೆ ಕೊಟ್ಟು ''ತಗಾ, ಗುಲ್ಲು ಮಾಡ್ಕಂಬೇಡ, ಇದ್ದ ಅವ್ರಿಗೆ ಕೊಟ್ಟು ತಿಕ ಮುಚ್ಕಂಡು ಸೇದ್ಯ ನೋಡ್ಕಳ್ರಿ'' ಅಂತ ಸುಮ್ಮುಮ್ನೇನೆ ಕೋಪಾ ಮಾಡ್ಕಂಡು ದುಡ್ಡು ಕೊಟ್ಟು ಕಳಿಸಿಬಿಟ್ರು. ಯಾವ ಸಾರೂ ಆಗದಿದ್ದ, ಹಳೇ ವಿಷ್ಯ ಯಾರಿಂದ್ಲೊ ತಿಳ್ಕೊಂಡು, ಸಾಮಗ್ರಿ ಸಮೇತ ಬಾಡಿಗೆ ಉಡುಗ್ರನ್ನ ಕರ್ಕಂಡು ಕ್ಯಾದಿಗುಂಟೇಗೆ ಬಂದಿದ್ದ ಸಣ್ಣ ಮುತ್ಯಾಲಿ ಯಾರಿಗೂ ಕಾಣ್ದಂಗೆ ನಗಾಡಿಕೊಂಡು, ಸೇರಿದ್ದ ಕಾಸಿನ ಕಂತೇನ ಮತ್ತೆತ್ತೆ ತಡವಿಕೊಂಡು ''ವಿಪ್ಲವಂ ವರ್ಧಿಂಚಾಲಿ'' (ಕ್ರಾಂತಿ ವರ್ಧಿಸಲಿ), ''ಭೂಸ್ವಾಮುಲು ನಶಿಂಚಾಲಿ'' (ಭೂಸ್ವಾಮಿ ಜಮೀಂದಾರರೆಲ್ಲಾ ನಾಶವಾಗಲಿ) ಅಂತೆಲ್ಲಾ ಸೀರಿಯಸ್ಸಾದ ಖುಶಿಯಿಂದ ಜೋರಾಗಿ ಘೋಷಣೆಗಳನ್ನ ಕೂಗಿಸ್ತಲೇ ಇದ್ದ.

ಅದೇನೂ ಮಾರನೇ ದಿವಸ ಬೆಳಗ್ಗೆ ವಾಕ್ ಹೊರಟಿದ್ದ ರಿಟೈರ್ಡ್ ಎ ಎಸ್ ಐ ವೀರಭದ್ರಯ್ನೋರ್ನ ಕಂಡು ಅದೇ ಎಸ್ ಟಿ ಡಿ ಬೂತಿನ ಹೆಳವ, ಪಾಪ ಸೀದಾ ಎದುರಿಗೆ ಬಂದು ಶಿಷ್ಟವಾಗಿ ''ನಂಸ್ಕಾರ ಸಾ'' ಅಂತಂದ. ''ಹುಂ ಹುಂ'' ಅಂತ ಕೈ ಆಡ್ಸಿ ಮುಂದುವರಿದ ವೀರಭದ್ರಯ್ನೋರು ''ಯಾವೋನೇಳ್ದ ಈ ಕುಂಟ್ಸೂಳೇಮಗನಿಗೆ ನಂಸ್ಕಾರ ಮಾಡಾಕೇ'' ಅಂದ್ಕೊಂತಾ ಒಗರೊಗರಾಗಿ ಫೀಲಾದ್ರು.

ಕೆ. ಪುರುಷೋತ್ತಮ ರೆಡ್ಡಿ
ಪತಂಜಲಿ ನಗರ, ಪಾವಗಡ

# ವಿಷದ ಸೀಸೆ

ಆ ಪೇಟೆಯಲ್ಲಿ ರಂಗಯ್ಯನಿಗೆ ಪುಟ್ಟದೊಂದು ವಿಷದ ಸೀಸೆ ಬೇಕಾಗಿತ್ತು. ಪೇಟೆಯಲ್ಲಿ ಅಡ್ಡಾಡಿದ ಆಸಾಮಿಯಲ್ಲ. ಕುರಹಟ್ಟಿಯಲ್ಲಿದ್ದ ಏಕೈಕ 'ಮಲೆಮಹದೇಶ್ವರ ಜನರಲ್ ಸ್ಟೋರ್' ರಂಗಯ್ಯನ ಕುಟುಂಬದ ಎಲ್ಲಾ ಅಗತ್ಯ ವಸ್ತುಗಳನ್ನು ಪೂರೈಸುತ್ತಿದ್ದರಿಂದ, ನಂಜನಗೂಡಿನಂತಹ ಪೇಟೆ ಅವನನ್ನು ಕರಸಿಕೊಳ್ಳುವ ಮನಸ್ಸು ಮಾಡಿರಲಿಲ್ಲ. ಆ ಪೇಟೆಯಲ್ಲಿ ವಿಷದ ಸೀಸೆ ದೊರೆಯುವ ಸ್ಥಳ ತಿಳಿದಿಲ್ಲವಾದರೂ ಕೇಳುವುದಕ್ಕೆ ಅವನಿಗೆ ಮುಜುಗರ. ದಿಕ್ಕುತಪ್ಪಿಹೋಗುವಷ್ಟು ದೊಡ್ಡದೇನೂ ಅಲ್ಲದ ನಂಜನಗೂಡಿನಲ್ಲಿ ರಂಗಯ್ಯ ಅಲೆಯುತ್ತಿದ್ದಾರೆ. ಅಚ್ಚುಕಟ್ಟಾಗಿ ಕೂರಿಸಿದರೆ ಮೆಟ್ರೋದ ಕಾರ್ ಪಾರ್ಕಿಂಗ್‌ನಲ್ಲಿ ಕೂಡಿಡುವಷ್ಟು ಅಂಗಡಿಗಳಿದ್ದವು. ಆದರೆ ಅವೋ... ಸಂದಿಗೊಂದಿಗಳಲ್ಲಿ ಚದುರಿಕೊಂಡು ಸ್ವತಂತ್ರವಾಗಿದ್ದವು; ಕೆಲವು ನಡೆದಾಡುತ್ತಲೂ ಇರುತ್ತವೆ.

ಇಂತಹ ನಂಜನಗೂಡಿನಲ್ಲಿ ಊರಿಗಿಂತ ತುಸು ದೊಡ್ಡದಾದ ಶಿವಾಲಯ. ಮಹಾ ಶಿವರಾತ್ರಿಯ ತಯಾರಿ ಭರ್ಜರಿಯಾಗಿಯೆ ನಡೆದಿದೆ; ನಾಳೆಯೇ ಶಿವರಾತ್ರಿ. ಕಪಿಲೆಯ ದಂಡೆಯಲ್ಲಿ, ಶಿವಾಲಯದ ಒಳಹೊರಗೆ ಭಕ್ತರ ಜಾತ್ರೆ ತರಾತುರಿಯಲ್ಲಿ ನಡೆದಾಡುತ್ತಿತ್ತು. ರಂಗಯ್ಯ ಒಂದಷ್ಟು ಹೊತ್ತು ಪೇಟೆಯ ಓಣಿಗಳಲ್ಲಿ ಓಡಾಡಿದವನು ಕಪಿಲೆಯಲ್ಲಿ ಮುಖ ತೊಳೆದು ಚುರುಚುರು ಬಿಸಿಲಿನಲ್ಲಿ ಶಿವಾಲಯದ ಕಡೆಗೆ ಹೆಜ್ಜೆ ಕಿತ್ತಿಟ್ಟ. ಸುತ್ತಲೂ ದಟ್ಟವಾಗಿ ಹರಡಿದ್ದ ಭಕ್ತಿಯ ಗೌಜಿನಲ್ಲಿ ಸೇರಿಕೊಂಡಿದ್ದ ಮಾತಿನ ಅರೆಬರೆ ತುಣುಕುಗಳು ರಂಗಯ್ಯನ ಕಿವಿಯ ಮೇಲೂ ಬಿದ್ದವು : 'ಗಂಗಾ... ಉಚಿತ... ನಾಳೆ ಜಲ... ವಿತರಣೆ ಪವಿತ್ರ...' ಹೀಗೆ ಏನೇನೋ... ಅವನ ಮನಸ್ಸು ಮಾತ್ರ ಕಿವಿ ಮೇಲೆ ಬಿದ್ದವುಗಳನ್ನು ಮನಸ್ಸಿಗೆ ಹಾಕಿಕೊಳ್ಳದೆ ವಿಷ ಸಿಗುವ ಜಾಗೆ, ಕುರಹಟ್ಟಿಯಲ್ಲಿನ ಈ ಕ್ಷಣವನ್ನು ಕಲ್ಪಿಸಿಕೊಳ್ಳುವುದಕ್ಕೆ ಹೆಣಗಾಡುತ್ತಿತ್ತು. ಶಿವಾಲಯದ ಎದುರಿನ ಡಾಂಬರು ರಸ್ತೆ ಬಿಸಿಲಿಗೆ ಮೈ ಕಾಯಿಸಿಕೊಂಡು ಬೆತ್ತಲೆ ಪಾದಗಳ ಸತ್ವಪರೀಕ್ಷೆ ಮಾಡಿ ಭಕ್ತರನ್ನು ನಂಜುಂಡೇಶ್ವರನ ಸನ್ನಿಧಿ ತಲುಪಿಸುತ್ತಿತ್ತು. ರಂಗಯ್ಯನೂ ಇದರಿಂದ ತಪ್ಪಿಸಿಕೊಳ್ಳಲಾರದೆ, ನೆರಳಲ್ಲಿ ಕುಳಿತು ಆಲೋಚನೆಗೆ ಒಳಗಾದ.

'ಏಳಯ್ಯ !!' ಎಂದವನೊಬ್ಬ ಏಳುವುದಕ್ಕಿಂತ ಮೊದಲೇ ತಳ್ಳಿಬಿಡುತ್ತಾನೆ. ತನ್ನ ದೇಹವನ್ನೇ ಮರೆತಿದ್ದ ರಂಗಯ್ಯನ ಮನಸ್ಸು ದೇಹದ ಸಮೇತ ಜಗುಲಿಯ ಕೆಳಕ್ಕೆ ಬೀಳುತ್ತದೆ. ಚಪ್ಪಡಿ ಕಲ್ಲಿನ ಅಂಚು ಮೊಣಕಾಲಿನ ಕೆಳಗೆ ಗಾಯಮಾಡಿ ರಕ್ತ ಸೋರುತ್ತದೆ. ಗಾಯಕ್ಕೆ ವಂಚೂರು ಎಂಜಲು ಹಚ್ಚಿ ರಂಗಯ್ಯ ನಡೆಯುತ್ತಾನೆ. ಅವ ಕೂತಿದ್ದ ಜಾಗದಲ್ಲಿ ದೇವರ ಆಳುಗಳು ಸಣ್ಣದೊಂದು ರೆಡಿಮೇಡ್ ಅಂಗಡಿ ನೆಟ್ಟು ಪ್ಲಾಸ್ಟಿಕ್ ಬೋರ್ಡು ನೇತುಹಾಕಿದರು. ರಂಗಯ್ಯನಿಗೆ ಅವೆಲ್ಲವೂ ಕೂಡಿ ಬಣ್ಣ ಬಣ್ಣ ಕಂಡಿತು. ''ಗಂಗಾ... ಜಲ... ವಿತರಣೆ...'' ಮತ್ತೆ ಕಿವಿಮೇಲೆ ಬಿತ್ತು. ಮುಂಚೆ ಕಿವಿಯಲ್ಲಿದ್ದ ಅರೆಬರೆ ತುಣುಕುಗಳು ಈಗ ಬಿದ್ದ ಸದ್ದು ಗುಣಾಕಾರ ಭಾಗಾಕಾರ ವ್ಯವಕಲನ, ಸಂಕಲನಗೊಂಡು 'ನಾಳೆ ಗಂಗಾಜಲ ವಿತರಣೆ... ಉಚಿತ !' ಎಂಬುದು ತಾಳೆಯಾಗುತ್ತದೆ. ಯಾಕೋ ಏನೋ ವಿಷದ ಸೀಸೆಯ ಹುಡುಕಾಟಕ್ಕೆ ತಾತ್ಕಾಲಿಕ ವಿರಾಮ ಬಿದ್ದು ರಂಗಯ್ಯ ಹುರುಪಿನಿಂದಲೇ ನಡೆಯುತ್ತಾನೆ. ಅಷ್ಟೊತ್ತಿಗೆ ಹಸಿವು, ನಿತ್ರಾಣಗಳು ದೇಹದೊಳಗೇ ಬಂಡೆದ್ದು ರಂಗಯ್ಯನ ವೇಗವನ್ನು ಜಗ್ಗಿ ಜಗ್ಗಿ ನಿಯಂತ್ರಿಸುತ್ತವೆ. ರೈಲು ನಿಲ್ದಾಣದಲ್ಲಿ ರಂಗಯ್ಯ ನಿಲುಗಡೆಯಾಗುತ್ತಾನೆ. 'ಶುದ್ಧ ಕುಡಿಯುವ ನೀರು' ಕುಡಿದು ನಿದ್ದೆಯಾಗುತ್ತಾನೆ.

ಕುರಹಟ್ಟಿಯಲ್ಲಿ ರಂಗಯ್ಯನದು ಚಿಕ್ಕ ಸಂಸಾರ. ಬಾಳ್ವುದಕ್ಕೆ ಏನಿಲ್ಲಾ ಮೂರು ಹೊಟ್ಟೆ. ಆದರೂ ತಟ್ಟೆ ಮಾತ್ರ ಯಾವಾಗಲೂ ಪ್ರತಿಭಟನಾ ನಿರತವಾಗಿರುತ್ತಿದ್ದವು. ಇದ್ದ ಅರ್ಧ ಎಕರೆ ಬಾಳೆತೋಟವನ್ನು ನೀರು ಬಹಿಷ್ಕರಿಸಿದ್ದವು; ಬಾಳೆ ತೋಟವನ್ನಷ್ಟೇ ಅಲ್ಲ, ಕುರಹಟ್ಟಿಯನ್ನೇ ! ಹೆಂಡತಿ ಸಾಕಮ್ಮನೋ, ಕ್ಯಾನ್ಸರಿನ ಜೊತೆಗಿನ ಗುದ್ದಾಟದಲ್ಲಿ ಹಣ್ಣಾಗಿ ಬಿರಿಯುವಂತಿದ್ದಳು; ರೋಗ ಪತ್ತೆ ಮಾಡಲಾಗದ ಮಗ್ಗಿಮಾರಮ್ಮನ ಪೂಜಾರಿ ಬಂಡಾರವನ್ನು ಖಾಲಿ ಮಾಡಿಬಿಟ್ಟಿದ್ದ. ಇದ್ದೊಂದು ಮಗು ಬಿಸಿಯೂಟಕ್ಕಾಗಿಯೇ ಹುಟ್ಟಿದ್ದೇನೋ ಅನ್ನೋವಂಗೆ 'ಸಂ... ಡೇ....' ಬಿಟ್ಟು ಬಿಸಿಯೂಟ ತಪ್ಪಿಸಿಕೊಂಡಿದ್ದೇ ಇಲ್ಲ.

ದೇಹದೊಳಗಿನ ದಂಗೆಯನ್ನೇ ಹತ್ತಿಕ್ಕಲಾಗದ ರಂಗಯ್ಯ ಹಟ್ಟಿಯ ಒಳ ಹೊರಗಿನ ಸಾಮೂಹಿಕ ಪ್ರತಿಭಟನೆಗೆ ಮೌನಿಯಾಗಿದ್ದ. ಸಾಲ ಮನ್ನಾದ ಕಾನೂನು ಜಾರಿಯಾಗುತ್ತಲೇ, ಕುರಹಟ್ಟಿಯ ಏಕೈಕ ಮ.ಮ.ಜ. ಸ್ಟೋರ್ ಸಾಲ ನೀಡುವುದನ್ನು ರದ್ದುಪಡಿಸಿ ತನ್ನದೇ ಆದ ವಸೂಲಿ ಕಾನೂನನ್ನು ಜಾರಿಮಾಡಿ ರಂಗಯ್ಯನ ಅ.ಬಾ.ತೋ.ವನ್ನು ಮುಟ್ಟುಗೋಲು ಹಾಕುವ ಯೋಜನೆ ಹೆಣೆದಿತ್ತು.

ಈ ಎಲ್ಲಾ ಜೈವಿಕ ಕಾರಣಗಳಿಂದಾಗಿ ರಂಗಯ್ಯನ ಮನಸ್ಸು ಕೀಟನಾಶಕದ ಕೆಟ್ಟುಪಯೋಗದ ಬಗ್ಗೆ ಸಲಹೆ ನೀಡಿತ್ತು. ರಂಗಯ್ಯ ತನಗಿದ್ದ ಎಲ್ಲಾ ಸೆಂಟಿಮೆಂಟಲ್ ಇನ್‌ಫ್ಲೂಯೆನ್ಸ್ ಬಳಸಿಕೊಂಡು ಮ.ಮ.ಜ. ಸ್ಟೋರ್‌ನಲ್ಲಿ ಕೀಟನಾಶಕಕ್ಕೊಂದು ಲಿಖಿತ ಅರ್ಜಿ ಗುಜರಾಯಿಸಿದ್ದ. ಆದರೆ, ಸಾಲದ ಅರ್ಜಿ ಸಾಮಾಜಿಕ ಮತ್ತು ಆರ್ಥಿಕ ಕಾರಣಗಳಿಂದಾಗಿ ತಿರಸ್ಕೃತಗೊಂಡುಬಿಟ್ಟಿತ್ತು.

ನಿದ್ರೆಯಾಗಿದ್ದ ರಂಗಯ್ಯನನ್ನು ರೈಲ್ವೇ ಸೊಳ್ಳೆಗಳು ಸ್ವಲ್ಪ ಹೊತ್ತು ಪಂಕ್ತಿ ನಡೆಸಿ ಶಿವಾಲಯದ ಬೀದಿಯ ಕಡೆ ಹೊರಟುಹೋಗಿದ್ದವು. ಮೈಸೂರಿನಿಂದ ಬಂದ ಬೆಳಗಿನ ರೈಲು ನಂಜನಗೂಡಿನಲ್ಲಿ ಸೂರ್ಯನ ಬೆಳಕನ್ನು ಬಿಟ್ಟು ಚಾ. ನಗರಕ್ಕೆ ಹೊರಟು ಹೋಯ್ತು. ಬೆಳಕಾದ ನಂಜನಗೂಡಿನಲ್ಲಿ ರಂಗಯ್ಯನ ಕಣ್ಣುಗಳು ತೆರೆದುಕೊಂಡವು. ಮತ್ತೆ ರೈಲ್ವೇ ನೀರು.

ರಂಗಯ್ಯ ಶಿವಾಲಯದ ಕಡೆಗೆ ನಡೆಯುತ್ತಾನೆ. ದೇವರ ಆಳುಗಳು ಭಕ್ತರು ಶಿವರಾತ್ರಿಯ ಸಂಭ್ರಮದಿಂದಾಗಿ ಅಲ್ಲಲ್ಲೇ ಸುತ್ತುವರಿಯುತ್ತಿದ್ದರು. ನೂರಾರು ಸದ್ದುಗಳು, ಗೌಜುಗಳು ತೆರೆದುಕೊಳ್ಳುತ್ತಿದ್ದಂತೆ ಬಿಸಿಲು ತನ್ನ ಇರುವಿಕೆಯನ್ನು ಸ್ಪಷ್ಟವಾಗಿ ಖಚಿತಪಡಿಸಿಕೊಂಡಿತ್ತು. ಸಾವಿರಾರು ಭಕ್ತರ ಸಮೂಹದಲ್ಲಿ ರಂಗಯ್ಯ ಏಕಾಂಗಿಯಾಗಿ



ಸಂತೋಷ ಗುಡ್ಡಿಯಂಗಡಿ

ಲಿಡದ ರೆಡಿಮೇಡ್ ಅಂಗಡಿಯ ಪಕ್ಕದಲ್ಲಿ ಕೂತುಬಿಡುತ್ತಾನೆ. ಭಕ್ತಿಯ ಗೌಜು ರಂಗಯ್ಯನನ್ನು ವಿಚಲಿತ ಗೊಳಿಸಲಿಲ್ಲ. ಶವನನ್ನು ಕದಲಿಸಿದ್ದು ಮಗು. ಆ ಗದ್ದಲದಲ್ಲಿ ಮೈಕು ತನ್ನನ್ನು ಸ್ಥಾಪಿಸಿಕೊಂಡಿದ್ದೇ ಸರಿ, ಬಣ್ಣದ ಅಂಗಡಿಯಲ್ಲಿ ದೇವರ ಆಳುಗಳು ಪ್ರತ್ಯಕ್ಷ. ರಂಗಯ್ಯ ಎದ್ದುನಿಂತ. ಚದುರಿಕೊಂಡಿದ್ದ ಭಕ್ತರು [illegible] ಮತ್ತೆ ಸಾಲ [illegible].

ಹೊಟ್ಟೆ ತುಂಬಾ [illegible] ನೀರಿಟ್ಟುಕೊಂಡು ರಂಗಯ್ಯ ಕುರಹಟ್ಟಿ ತಲುಪಿದಾಗ ಶಿವರಾತ್ರಿಯ ಜಾಗರಣೆ ಮುಗಿದಿತ್ತು. ಮತ್ತೆ ಮೈಸೂರಿಂದ ಬಂದ ರೈಲು ಬೆಳಕನ್ನು ತುಂಬಿ ಬದನವಾಳನ್ನು ಬಿಟ್ಟುಹೋಗುತ್ತಿರುವುದಕ್ಕೆ ಕೂಗುತ್ತಿತ್ತು. ಹಟ್ಟಿಯ ಹೊಕ್ಕವನೇ ಸೀಸೆಯ ನಾಲ್ಕಾರು ಹನಿಯಿಂದ ಸಾಕಮ್ಮನ ಬಾಯಿ ಹಸಿ ಆರಿಸಿದ. ಮತ್ತೆ ಬಿಂದಿಗೆ ಹಿಡಿದು ಮಗುವೊಂದಿಗೆ ರಂಗಯ್ಯ ಟಿ.ಬಾ.ತೋ. ಕಡೆಗೆ ನಡೆಯುತ್ತಾನೆ. ಹೇಗೋ ಒಂದರ್ಧ ಬಿಂದಿಗೆ ನೀರು ಸಂಪಾದಿಸಿ ಅದಕ್ಕೆ ಗಂಗಾಜಲ ಬೆರೆಸಿ ಹೊಲದಲ್ಲಿ ಸಿಂಪಡಿಸಿದ.

ಅಪ್ಪ ಮಗು ಹಟ್ಟಿಯತ್ತ ಬರುವಾಗ ಕುರಹಟ್ಟಿಯ ಸಹಾನುಭೂತಿಗಳು ನೆರೆದು ಸಾಕಮ್ಮನ ಗುಣಗಾನದಲ್ಲಿ ಸಮಯ





ದೂಡಲು ಕಣ್ಣೀರು ಹನಿಯಬಿಡುತ್ತಿದ್ದರು. ಅಂತೂ ರಂಗಯ್ಯ ಬಂದ. ಎಲ್ಲ ಸದ್ದುಗಳು ನಿಶ್ಯಬ್ದದ ಮನೆಹೊಕ್ಕು ನಿರಾಳವಾದವು. ಕುರಹಟ್ಟಿಯಲ್ಲಿ ತಾನೊಬ್ಬನೆ ಗಂಗಾಜಲ ಪಡೆದವನು, ಇವರೆಲ್ಲ ಗಂಗೆಗಾಗಿ ನೆರೆದರೇನೋ? ಥೆ! ಎಂದುಕೊಂಡ ರಂಗಯ್ಯನ ಮನಸ್ಸು ''ನೀನೆಲ್ಲವನ್ನು ಚೆಲ್ಲಿಬಿಟ್ಟೆಯಲ್ಲ!!'' ಎಂದು ಗದರಿತು.

ಸಾಕಮ್ಮ ಬದುಕು ಬಿಡಿಸಿಕೊಂಡು ಹೋಗಿದ್ದಳು. ಯಾರೋ ದೇವರ ಆಳುಗಳು ದಡದಡನೆ ಬಂದವರು ಏಟು ಬಡಿದು ನೆಲಕ್ಕೆ ಹಾಕಿ ತುಳಿಯುತ್ತಾರೆ. ರಂಗಯ್ಯನ ದೇಹಕ್ಕದು ಅಗತ್ಯವಿತ್ತ ಹಾಗಿಯೇ. ಸ್ವಲ್ಪ ಹೊತ್ತು ಕೊಸರಾಡಿ ಹೆಂಡತಿಗೆ ಜೊತೆಯಾದ. ಮಗು ಮಾತ್ರ ಅಳುವಾಗಿತ್ತು, ದೇವರ ಆಳುಗಳು ಬಂದಷ್ಟೇ ವೇಗದಲ್ಲಿ ಕರಗಿಹೋಗಿದ್ದರು. ಏನು ನಡೆಯಿತು ಎಂಬುದು ಅಲ್ಲಿದ್ದ ಯಾರ ಅರಿವಿಗೂ ನಿಲುಕದೆ, ಪ್ರಶ್ನೆಗಳೇ ಕಣ್ಣುಗಳಿಂದ ಕಣ್ಣುಗಳಿಗೆ ಪಾಸಾಗುತ್ತಿದ್ದರೆ ಸದ್ದುಗಳೆಲ್ಲ ಮಗುವಿನ ಅಳುವಿನಲ್ಲಿ ಲೀನಗೊಂಡವು. ಕುರಹಟ್ಟಿಯ ಏಕೈಕ ಮ.ಮ.ಜ. ಸ್ಟೋರ್‌ನ ಬಂಗಾರಸೆಟ್ಟಿಯ ಚಿನ್ನಲೇಪಿತ ದೇಹವು ಅಲ್ಲಿಗಾಗಮಿಸಿ ಹಟ್ಟಿಯೊಳಗೆ ನುಗ್ಗಿ ಏನೇನೋ ತಡಕಾಡಿ ಮಾಸಿದ ಕಾಗದಪತ್ರವನ್ನು ವಶಪಡಿಸಿಕೊಂಡು ಹೊರ ಬಂದಿತು. ಗಾಳಿಯಲ್ಲಿ ಹರಿದಾಡುತ್ತಿದ್ದ ಪ್ರಶ್ನೆಗಳನ್ನು ಬಂಗಾರಸೆಟ್ಟಿಯ ಮೂಗು ಉಸಿರಾಡಿ ಬಾಯಿ ಉತ್ತರವನ್ನು ಉಗುಳಿತು.

ಕುರಹಟ್ಟಿಯ ಸಹಾನುಭೂತಿಗಳಿಗೆಲ್ಲ ರಂಗಯ್ಯನ ದೈವ ದ್ರೋಹದ ಧಾರ್ಮಿಕ ಕಾರಣಗಳು ಅರಿವಾಗಿ ಗುಜುಗುಜು ಸದ್ದುಗಳು ಅಣಬೆಯಂತೆದ್ದು ಮಂದಿ ಕರಗತೊಡಗಿದರು. ರಂಗಯ್ಯ ಗಂಗಾಜಲವನ್ನು ಮಣ್ಣಿಗೆ ಹಾಕಿ ದೇವರ ದ್ರೋಹ ಕಟ್ಟಿಕೊಂಡದ್ದು, ಸಾಕಮ್ಮ ಸಕಾರಣಕ್ಕಾಗಿಯೇ ಹೆಣವಾದದ್ದು, ರಂಗಯ್ಯನನ್ನು ದೇವರ ಆಳುಗಳು ಬಡಿದದ್ದು ಸರಿಯೆ ಇರಬಹುದು ಎಂಬ ಸಂಶಯಾಸ್ಪದ ಅನುಮಾನಗಳ ಮುದ್ದೆಯಾಗಿ ನಿತ್ಯದಲ್ಲಿ ನಡೆದುಬಿಟ್ಟರು ಕುರಹಟ್ಟಿಯ ಸಹಾನುಭೂತಿಗಳು.

ಆದರೆ, ಆ ದ್ಯಾವನೂರಿನ ಚನ್ನನ ಮಗನಿಗೆ ಸಂಶಯದ ಪರ್ವತವೇ ತಲೆ ಮೇಲೆ ನಿಂತು ತಾಳಲಾರದೆ ಭಾರವಾಗಿ ಕೂತಿದ್ದವನು, ರಂಗಯ್ಯನ ಮಗುವನ್ನು ಸಮಾಧಾನಿಸುವ ಕಾರಣಕ್ಕಾಗಿ ಮಾತೊಡೆಯುತ್ತಾನೆ. ಕೊನೆಗೂ ಅಳುವು ತನ್ನನ್ನು ನಿಯಂತ್ರಿಸಿಕೊಂಡು ಮಗುವನ್ನು ಚನ್ನನ ಮಗನೊಂದಿಗೆ ಮಾತಿಗೆ ದೂಡಿತು.

ಚ.ಮ. : ಗಂಗಾಜಲವನ್ನು ಮಣ್ಣಿಗೆ ಚೆಲ್ಲಿದ್ಯಾಕೆ ?

ರಂ.ಮ. : ನಮ್ಮೂರಲ್ಲಿ ಮಳೆಯಿಲ್ಲದ್ದು ಗೊತ್ತಲ್ಲ!

ಚ.ಮ. : ಗೊತ್ತು.

ರಂ.ಮ. : ನಮ್ಮವ್ವನಿಗೆ ಗುಣಪಡಿಸಲಾಗದ ರೋಗ ಗೊತ್ತಲ್ಲ!

ಚ.ಮ. : ಗೊತ್ತು.

ರಂ.ಮ. : ನಮ್ಮ ತೋಟದ ಬಾಳೆ ಒಣಗಿರುವುದು ಗೊತ್ತಲ್ಲ!

ಚ.ಮ. : ಗೊತ್ತು.

ರಂ.ಮ. : ಅದಕ್ಕೆ ಅಪ್ಪ, ಅವ್ವನ ರೋಗ ಗುಣ ಆಗಲಿ, ಮಳೆ ಬರಲಿ, ನಮ್ಮೂರಿಗೆಲ್ಲ ನೀರಾಗಲಿ, ನಮಗೆಲ್ಲ ಉಣ್ಣಲಿಕ್ಕೆ ಸಿಗಲಿ ಅಂತ ಪವಿತ್ರ ಗಂಗಾಜಲ ಹೊಲದಲ್ಲಿ ಸಿಂಪಡಿಸಿದ್ದ!!

ಆ ದ್ಯಾವನೂರಿನ ಚನ್ನನ ಮಗ ಎದ್ದುನಿಂತ ರಂಗಯ್ಯನ ಮಗುವಿನ ಜೊತೆ.

**ಸಂತೋಷ ಗುಡ್ಡಿಯಂಗಡಿ**
ನಾಟಕ ಅಧ್ಯಾಪಕ, ಸರ್ಕಾರಿ ಸಂಯುಕ್ತ ಪದವಿಪೂರ್ವ ಕಾಲೇಜು
ಹೆಮ್ಮರಗಾಲ, ನಂಜನಗೂಡು ತಾಲೂಕು, ಮೈಸೂರು ಜಿಲ್ಲೆ

# ಕರ್ನಾಟಕದ ಸಾಮಾಜಿಕ ಸ್ಥಿತ್ಯಂತರಗಳು

ಡಾ|| ಧನವಂತ ಹಾಜವಗೋಳ



ಸಾಮಾಜಿಕ ಸ್ಥಿತ್ಯಂತರವೆಂದರೆ 'ಬದಲಾವಣೆ' ಅಥವಾ 'ಪರಿವರ್ತನೆ' ಎಂದು ಸಾಮಾನ್ಯವಾಗಿ ಹೇಳಲಾಗುತ್ತದೆ. ಇದನ್ನು ಸಮಾಜಶಾಸ್ತ್ರೀಯ ನೆಲೆಯಲ್ಲಿ ನೋಡಬೇಕಾಗುತ್ತದೆ. ಸಮಾಜದಲ್ಲಿ ನಿರಂತರವಾಗಿ ಕಾಲಕಾಲಕ್ಕೆ ಆಗುವ ಏರುಪೇರುಗಳನ್ನು ಸ್ಥಿತ್ಯಂತರಗಳೆನ್ನಬಹುದು. ಸಮಾಜ ನಿರಂತರ ಕ್ರಿಯಾಶೀಲತೆಯಿಂದ ಕೂಡಿರುವುದರಿಂದ ಈ ಬದಲಾವಣೆಗಳು ಕಾಲಕಾಲಕ್ಕೆ ಘಟಿಸುತ್ತಲೇ ಇರುತ್ತವೆ. ಕರ್ನಾಟಕದ ಧಾರ್ಮಿಕ, ರಾಜಕೀಯ, ಆರ್ಥಿಕ, ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಸ್ಥಿತಿಗತಿಗಳನ್ನು ಅನುಸರಿಸಿ ಸ್ಥಿತ್ಯಂತರಗಳು ಸಂಭವಿಸುತ್ತವೆ. ಅಂದರೆ ಸಮಾಜದ ಚಲನಶೀಲತೆ ಅದರ ಕ್ರಿಯಾಶೀಲತೆಗೆ, ಸ್ಥಿತ್ಯಂತರಕ್ಕೆ ಕಾರಣವಾಗುತ್ತದೆ. ಸಮಾಜ ನಿರಂತರ ಬದಲಾವಣೆಯನ್ನು ಬಯಸುತ್ತದೆ. ಜಡಸಮಾಜವನ್ನು ಕ್ರಿಯಾತ್ಮಕಗೊಳಿಸುವ ಪ್ರಕ್ರಿಯೆಗಳು ನಡೆಯುತ್ತಿರುತ್ತವೆ. ಈ ಹಿನ್ನೆಲೆಯಲ್ಲಿ ಕರ್ನಾಟಕದ ಸಾಮಾಜಿಕ ಸ್ಥಿತ್ಯಂತರಗಳನ್ನು ಗುರುತಿಸುವ ಪ್ರಯತ್ನವನ್ನು ಈ ಪ್ರಬಂಧದಲ್ಲಿ ಮಾಡಲಾಗಿದೆ.

**ಪ್ರಾಚೀನ ಸಮಾಜದ ಪರಿಕಲ್ಪನೆ**

ಭಾರತೀಯ ಸಮಾಜದ ಚರಿತ್ರೆ ಕುರಿತ ಅಧ್ಯಯನಕ್ಕೆ ಇರುವ ಪ್ರಮುಖ ಆಕರಗಳೆಂದರೆ ವೇದಗಳು. ಈ ವೇದಗಳ ಕೊನೆಯ ಘಟ್ಟದಲ್ಲಿ ಕಂಡುಬರುವ ವರ್ಣವ್ಯವಸ್ಥೆಯಲ್ಲಿ ಸಮಾಜವನ್ನು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ನಾಲ್ಕು ವರ್ಗಗಳಾಗಿ ವಿಂಗಡಿಸಲಾಯಿತು. ಈ ವರ್ಣ ವ್ಯವಸ್ಥೆಯೇ ಕಾಲಾಂತರದಲ್ಲಿ ಜಾತಿ ವ್ಯವಸ್ಥೆಗೆ ಅವಕಾಶ ಮಾಡಿಕೊಟ್ಟಿತು. 'ಜಾತಿ'ಪದದ ಮೂಲದಲ್ಲಿ 'ಹುಟ್ಟು' ಎಂಬ ಅರ್ಥವಿದೆ. ವ್ಯಕ್ತಿಯ ಜಾತಿಯನ್ನು 'ಹುಟ್ಟು' ನಿರ್ಣಯಿಸುತ್ತಿರುವುದು ಈ ದೇಶದಲ್ಲಿ ಸತ್ಯಸಂಗತಿಯಾಗಿದೆ. ಈ ವರ್ಣವ್ಯವಸ್ಥೆಯಲ್ಲಿ ಶೂದ್ರರನ್ನು ಕಟ್ಟಕಡೆಯವರೆಂದು ಪರಿಗಣಿಸಲಾಗಿದೆ. ಅವರನ್ನು ನಿರಂತರ ಶೋಷಣೆ, ಅಪಮಾನಗಳಿಗೆ ಗುರಿಪಡಿಸಲಾಗಿದೆ. ಈ ವರ್ಗೀಕರಣ ಸಮಾಜದಲ್ಲಿ ಅಸಮಾನತೆಯನ್ನು ಹುಟ್ಟುಹಾಕಿದ್ದು, ಇದು ಅತ್ಯಂತ ಅವೈಜ್ಞಾನಿಕವಾಗಿದೆ. ಮನುಷ್ಯನ ಸ್ವಾರ್ಥ ಮತ್ತು ಅಹಂಕಾರಗಳ ಅತಿರೇಕ ಈ ವಿಭಜನೆಯ ಹಿಂದೆ ಕೆಲಸ ಮಾಡಿರುವುದು ಸ್ಪಷ್ಟವಿದೆ. ಈ ವರ್ಗೀಕರಣ ಹಲವಾರು ಅನಿಷ್ಟ ಪದ್ಧತಿಗಳ ಆಚರಣೆಗೆ ಕಾರಣವಾಗಿದೆ. ಅಲ್ಲದೆ ಈ ವರ್ಗೀಕರಣ ಮತ್ತು ಅನಿಷ್ಟ ಪದ್ಧತಿಗಳ ಆಚರಣೆಗಳನ್ನು ಧರ್ಮದ ಚೌಕಟ್ಟಿನೊಳಗೆ ಸಮರ್ಥಿಸುತ್ತ ಬಂದಿರುವುದು ವೈದಿಕ ಧರ್ಮದ ಕುಕೃತ್ಯವೆಂದೇ ಹೇಳಬೇಕಾಗುತ್ತದೆ. ಈ ರೀತಿಯಾಗಿ ಸೃಷ್ಟಿಗೊಂಡ ಸಾಮಾಜಿಕ ಅಸಮಾನತೆಯನ್ನು ಕಾಪಾಡಿಕೊಂಡುಬಂದದ್ದೇ ವೈದಿಕಶಾಹಿಯ ಮಹತ್ಸಾಧನೆ ಮತ್ತು ಅವುಗಳಿಗೆ ರಾಜಮುದ್ರೆಯನ್ನೊತ್ತಿ, ಶಾಸನ ಕೆತ್ತಿಸಿದ್ದು, ಭಾಷ್ಯಗಳನ್ನು ಬರೆಸಿದ್ದು ತುಂಬ ವಿಪರ್ಯಾಸವಾಗಿ ಕಾಣುತ್ತದೆ.




ರಾಜಕೀಯ ವ್ಯವಸ್ಥೆಯಲ್ಲಿ ಸಾಕಷ್ಟು ಬದಲಾವಣೆಗಳಾದರೂ ಆ ಕಾಲದ ಸಾಮಾಜಿಕ ವ್ಯವಸ್ಥೆ ಮಾತ್ರ ಸ್ಥಗಿತಗೊಂಡಂತೆ ಕಾಣುತ್ತದೆ. ''ಯಾವುದೇ ಒಂದು ಧರ್ಮ ಸಮುದಾಯದ ಶ್ರೇಯಸ್ಸನ್ನು ಸಾಧಿಸಬೇಕಾದರೆ ಅದು ತನ್ನ ಸಮಾಜದ ಎಲ್ಲ ವರ್ಗದವರನ್ನು ಸಮಾನರೆಂದು ಪರಿಗಣಿಸುವುದು ಅದರ ಸಾಮಾಜಿಕ ಜವಾಬ್ದಾರಿ

ಅವೈಜ್ಞಾನಿಕವಾದ, ಕೃತಕವಾದ ಶ್ರೇಣೀಕೃತ ಸಮಾಜದ ವಿಘಟನೆ, ಅನಿಷ್ಟ ಪದ್ಧತಿಗಳ ನಿರ್ಮೂಲನೆ ಹಲವು ಸಂದರ್ಭ ಮತ್ತು ಸನ್ನಿವೇಶಗಳಲ್ಲಿ ಅನುಸರಿಸುತ್ತಿದ್ದ ಭೇದ ನೀತಿಗಳು ನಮ್ಮೆಲ್ಲ ಇತಿಮಿತಿಗಳಲ್ಲಿಯೂ ಕಡಿಮೆಯಾಗುತ್ತಿರುವುದು ಸ್ವಾಗತಾರ್ಹ. ಸಾರ್ವಜನಿಕ ಸ್ಥಳಗಳಾದ ಹೋಟೆಲ್, ದೇವಾಲಯಗಳಲ್ಲಿ ಮುಕ್ತ ಅವಕಾಶ ಕೆಳ ಸಮುದಾಯಗಳಿಗೆ ದೊರಕುವುದು ಸಾಮಾನ್ಯವಾಗುತ್ತಿದೆ. ಆದರೆ ಎಂಥ ಉನ್ನತ ಹುದ್ದೆಯಲ್ಲಿ ಇದ್ದರೂ, ಆರ್ಥಿಕವಾಗಿ ಸಬಲವಾಗಿದ್ದರೂ ಸಾಮಾಜಿಕವಾಗಿ ಘನತೆ - ಗೌರವ ಪಡೆದಿದ್ದರೂ 'ಜಾತಿ' ಹಿನ್ನೆಲೆಯಲ್ಲಿ ನೋಡುವ ಪ್ರವೃತ್ತಿಯಲ್ಲಿ ಯಾವ ಬದಲಾವಣೆ ಆಗಿಲ್ಲ. ಜಾತೀಯತೆಯ ಪ್ರಸಂಗಗಳು ಈಗಲೂ ನಡೆಯುತ್ತಿರುವುದಕ್ಕೆ ಹಲವಾರು ನಿದರ್ಶನಗಳಿವೆ. ಎಲ್ಲೆಲ್ಲೂ ನೈತಿಕತೆಯ ಅಧಃಪತನ ಎದ್ದುಕಾಣುತ್ತಿದೆ. ಅನಾಮತ್ತಾಗಿ ಒದಗಿಬಂದ ಸಂಪತ್ತಿನ ಒಡೆಯರಾದ ಯುವಪೀಳಿಗೆಯವರು ಕೌಟುಂಬಿಕ ಸಮಸ್ಯೆಗಳಿಗೆ ಎಡೆಮಾಡಿಕೊಡುತ್ತಿದ್ದರು. ಇಂಥವರಿಂದ ಸಮಾಜಮುಖಿಯಾದ ಪ್ರಗತಿಯಾಗಲಿ, ಮೌಲ್ಯಗಳ ಅನುಷ್ಠಾನವಾಗಲಿ ಸಾಧ್ಯವಾಗದೇ ಇರುವುದು ದುರದೃಷ್ಟಕರ ಸಂಗತಿಯಾಗಿದೆ.

ಆಗಿದೆ. ಯಾಕೆಂದರೆ, ನಿಜವಾದ ಧಾರ್ಮಿಕ ಮನಃಸ್ಥಿತಿ ಎಂದರೆ ಅದು ಮನುಷ್ಯರೆಲ್ಲರ ಏಕತೆ ಹಾಗೂ ಸಮಾನತೆಯನ್ನು ಕಾಣುವ ಮತ್ತು ಕಟ್ಟುವ ನಿಲುವು'' (ಜಿ. ಎಸ್. ಶಿವರುದ್ರಪ್ಪ) ಎಂದು ಹೇಳಬಹುದು.

ಸಮಾನತೆಯ ಪರವಾಗಿ ಜಗತ್ತಿನಲ್ಲೇ ಮೊಟ್ಟಮೊದಲ ಬಾರಿಗೆ ಮಾತಾಡಿದ ಮಹಾದಾರ್ಶನಿಕನೆಂದರೆ ಗೌತಮ ಬುದ್ಧ. ಬುದ್ಧ ''ಮನುಷ್ಯನನ್ನು ಮನುಷ್ಯನನ್ನಾಗಿ ಕಾಣಿರಿ'' ಎಂದು ಮನುಷ್ಯಪರವಾದ ಕಾಳಜಿಯನ್ನು ಮೆರೆದವನು; ಆತ ಗುಣದಿಂದ ಶ್ರೇಷ್ಠತೆಯನ್ನು ಅಳೆಯಬೇಕೇ ಹೊರತು ಜಾತಿಯಿಂದ ಅಲ್ಲ ಎಂದು ಸಾರಿದನು. ಆತನೇ ಅಸ್ಪೃಶ್ಯತೆಯ ವಿರುದ್ಧ ಮಾತಾಡಿದ ಮೊದಲ ಮಹಾಮಾನವನಾಗಿದ್ದಾನೆ. ಏಸುಕ್ರಿಸ್ತ, ಕಬೀರ, ಗುರುನಾನಕ ಮೊದಲಾದವರು ಸಮಾನತೆಯ ಬಗ್ಗೆ ಮಾತಾಡಿದರು. ಆದರೆ ಸಮಾಜವು ವೈದಿಕ ಧರ್ಮದ ಕಪಿಮುಷ್ಟಿಯಲ್ಲಿದ್ದ ಕಾರಣ ಇವರ ಸಮಾಜಪರವಾಗಿದ್ದ, ಮನುಷ್ಯಪರವಾಗಿದ್ದ ಕಾಳಜಿಗೆ ಅರ್ಥ ಬರಲಿಲ್ಲ. ಅದಕ್ಕಾಗಿ 'ಹಿಂದು ಧರ್ಮ' ತನ್ನ ಸಾಮಾಜಿಕ ಜವಾಬ್ದಾರಿಯಿಂದ ನುಸುಳಿಕೊಂಡಿದೆ ಎಂದೇ ಹೇಳಬೇಕಾಗುತ್ತದೆ. ಹೀಗಾಗಿ ಪ್ರಾಚೀನ ಕಾಲದ ಸಾಮಾಜಿಕ ಜೀವನ ಯಾವುದೇ ಬದಲಾವಣೆಯಿಲ್ಲದೆ ಜಡತೆಯಿಂದಲೇ ಕೂಡಿದ್ದಿತು.

**ಮಧ್ಯಕಾಲೀನ ಸಮಾಜದ ಪರಿಕಲ್ಪನೆ**

ಬಸವಣ್ಣನವರ ನೇತೃತ್ವದಲ್ಲಿ ಕೈಗೊಂಡ ಸಾಮಾಜಿಕ ಧಾರ್ಮಿಕ ಚಳುವಳಿಯು ಕೆಳವರ್ಗಗಳ ಬದುಕನ್ನು ಅನಾವರಣಗೊಳಿಸಿತು. ವಚನ ಸಾಹಿತ್ಯದ ಮೂಲಕ ವ್ಯಕ್ತಿ ಕಲ್ಯಾಣ ಮತ್ತು ಸಮಾಜಕಲ್ಯಾಣಗಳನ್ನು ಸಾಧಿಸುವ ಛಲದೊಂದಿಗೆ ಚಳುವಳಿ ಮುನ್ನಡೆಯಿತು. ಅದರ ಪರಿಣಾಮವಾಗಿ ಕೆಳವರ್ಗದವರಿಗೆ ಸಿಗಬೇಕಾದ ಸಾಮಾಜಿಕ ಸ್ಥಾನಮಾನಗಳು ಲಭ್ಯವಾದವು. ಮಾನವ ಜೀವಿಗಳಿಗೆಲ್ಲ ಸಮಾನವಾದ ನಿಸರ್ಗ ನಿಯಮವೊಂದು ಇರುವಾಗ ಸಾಂಪ್ರದಾಯಿಕವಾದ ವೈದಿಕ ವರ್ಗೀಕರಣಕ್ಕೆ ಆಧಾರ ಏನು ಎಂದು ಶರಣರು ಪ್ರಶ್ನಿಸಿದರು. ಉದ್ಯೋಗ 'ಜಾತಿ'ಯನ್ನು ಪ್ರತಿನಿಧಿಸುವ ಸಾಧನವಲ್ಲ; ವ್ಯಕ್ತಿಗಳು ಮಾಡುವ ಉದ್ಯೋಗಗಳಲ್ಲಿ ಮೇಲು-ಕೀಳುಗಳಿಲ್ಲ. ಸಮಾಜಜೀವನದ ಪ್ರಗತಿಗೆ ಪೂರಕವಾಗುವ ಎಲ್ಲ ವೃತ್ತಿಗಳೂ ಬೇಕೇ ಬೇಕು ಎಂದು ಸಾರುವ ಮೂಲಕ ಬಸವಣ್ಣನವರು ಕುಲಕಸಬುಗಳಿಗೆ ಮಾನ್ಯತೆ ತಂದುಕೊಟ್ಟರು. ಸಬಲ ಸಮಾಜದ ನಿರ್ಮಾಣಕ್ಕೆ ಅಗತ್ಯವಿರುವ ಅಸ್ಪೃಶ್ಯತಾ ನಿವಾರಣೆ, ಅಂತರಜಾತಿ ವಿವಾಹದಂತಹ ಕಾರ್ಯಗಳನ್ನು ಮಾಡುವ ಮೂಲಕ ಸಮಾಜದಲ್ಲಿ ಸ್ಥಿತ್ಯಂತರಗಳುಂಟಾಗುವಂತೆ ಮಾಡಿದರು. ಇಷ್ಟಾದರೂ ಜಾತಿಯನ್ನು ನಿರ್ಮೂಲನ ಮಾಡಿ, ಸಮಾಜದಲ್ಲಿ ಆಮೂಲಾಗ್ರ ಬದಲಾವಣೆಯನ್ನು ತರಲು ರೂಪಿಸಿದ ಬಸವಣ್ಣನವರ ಹೋರಾಟಕ್ಕೆ ಹಿನ್ನಡೆಯುಂಟಾದುದು ಚಾರಿತ್ರಿಕ ಸತ್ಯವಾಗಿದೆ. ಬಸವಣ್ಣನವರದು ಪ್ರಜಾಶಕ್ತಿಯ ಹೋರಾಟ, ಪುರೋಹಿತಶಾಹಿ ಬಿಜ್ಜಳನದು ರಾಜಶಕ್ತಿಯ ಹೋರಾಟ. ಯಾವಾಗಲೂ ರಾಜಶಕ್ತಿಗೆ ಜಯ. ಹೀಗಾಗಿ ಬಸವಣ್ಣ ಕಟ್ಟಬಯಸಿದ ಸಮಾಜ, ತರಬಯಸಿದ ಸುಧಾರಣೆಗಳು ಜನಮಾನಸದಲ್ಲಿ ವೈಚಾರಿಕ ಬೀಜವನ್ನು ಬಿತ್ತಿ ಹೋದವು. ಬದಲಾವಣೆಯ ಕನಸು ಕಾಣುತ್ತಿದ್ದ ಜನ ನಿರಾಶರಾಗಬೇಕಾಯಿತು. ಹೀಗಾಗಿ ಮಧ್ಯಯುಗದಲ್ಲೂ ಪುರೋಹಿತಶಾಹಿಯ ಮೇಲುಗೈ ಇರುವ ಪರಂಪರಾಗತ ಸಾಮಾಜಿಕ ಸ್ಥಿತಿ ಮುಂದುವರೆಯಿತು.

**ಬ್ರಿಟಿಷರ ಆಗಮನ - ವಸಾಹತುಶಾಹಿ ಪ್ರಭಾವ**

ಬ್ರಿಟಿಷರು ಈಸ್ಟ್ ಇಂಡಿಯಾ ಕಂಪನಿಯ ಸ್ಥಾಪನೆಯ ಮೂಲಕ ಭಾರತದಲ್ಲಿ ಭದ್ರವಾಗಿ ನೆಲೆಯೂರಿದರು. ಬಂಗಾಲ, ಬಿಹಾರಗಳನ್ನು ಒಳಗೊಂಡಂತೆ ದೇಶದ ಪ್ರಮುಖ ರಾಜ್ಯಗಳು ಅವರ ಅಧೀನಕ್ಕೆ ಒಳಪಟ್ಟವು. ಟಿಪ್ಪು ನಿಧನದ ನಂತರ ಶ್ರೀರಂಗಪಟ್ಟಣವನ್ನು ವಶಪಡಿಸಿಕೊಂಡರು. ನಿಜಾಮನ ಆಡಳಿತದಲ್ಲಿದ್ದ ಬಳ್ಳಾರಿ ವಿಭಾಗ, ಪೇಶ್ವೆಗಳ ಆಡಳಿತದಲ್ಲಿದ್ದ ಮುಂಬೈ, ಕರ್ನಾಟಕದ ಬಹುಭಾಗಗಳು ಬ್ರಿಟಿಷರ ಕೈವಶವಾದವು. ಹೀಗೆ ಒಂದೊಂದು ಪ್ರದೇಶವನ್ನು ಬ್ರಿಟಿಷರು 'ತಮ್ಮ ಅಧೀನದಲ್ಲಿ ಇಟ್ಟುಕೊಂಡು ಆಡಳಿತ' ನಡೆಸತೊಡಗಿದರು. ೧೯ನೇ ಶತಮಾನದ ಹೊತ್ತಿಗೆ ಬ್ರಿಟಿಷರ ಹಾಗೂ ಸಣ್ಣಪುಟ್ಟ ಸಂಸ್ಥಾನಿಕರ ನಡುವೆ ಹರಿದು ಹಂಚಿಹೋಗಿದ್ದ ಕನ್ನಡಿಗರು ಏಕೀಕರಣವಾಗುವವರೆಗೆ ಬೇರೆ ಬೇರೆ ಪ್ರಾಂತ್ಯಗಳಲ್ಲಿ ನೆಲೆಸಿದ್ದರು.

ಹೀಗಾಗಿ ಶಿಕ್ಷಣ, ಉದ್ಯೋಗ ಮತ್ತು ಸಾಹಿತ್ಯಕ ಜೀವನದ ಹಲವು ರಂಗಗಳಲ್ಲಿ ಕರ್ನಾಟಕ ಹಿಂದೆ ಉಳಿದಿದ್ದು ಕಂಡುಬರುತ್ತದೆ. ಬ್ರಿಟಿಷರು ಇಂಗ್ಲಿಷ್ ಶಿಕ್ಷಣ ಪದ್ಧತಿಯನ್ನು ಜಾರಿಗೆ ತಂದರು. ಅನೇಕರು ಇದರ ಲಾಭ ಪಡೆದು ಜ್ಞಾನ ಸಂಪಾದನೆಯೇ ಅಲ್ಲದೆ ಅಧಿಕಾರದ ರುಚಿಯನ್ನೂ ಅನುಭವಿಸುವಂತಾಯಿತು. ಸೈನಿಕ ವ್ಯವಸ್ಥೆ, ಪೊಲೀಸ್ ವ್ಯವಸ್ಥೆ, ಸರ್ಕಾರಿ ಕಚೇರಿಗಳಲ್ಲಿ ಕೆಲಸ, ಮುಂತಾದ ಅವಕಾಶಗಳು ಆಗ ಕನ್ನಡಿಗರಿಗೂ ದೊರೆತವು. ರೈಲ್ವೆ, ಅಂಚೆ ವ್ಯವಸ್ಥೆ, ತಂತಿಯ ಸಂಪರ್ಕ ಮುಂತಾದ ನಾಗರಿಕ ಸೌಕರ್ಯಗಳು ಬಳಕೆಗೆ ಬಂದವು. ಕೈಗಾರಿಕೀಕರಣ, ಔದ್ಯೋಗೀಕರಣ, ಆರೋಗ್ಯವರ್ಧನೆ, ಇತ್ಯಾದಿ ಸುಧಾರಣಾತ್ಮಕ ಕಾರ್ಯಗಳು ಚಾಲ್ತಿಗೆ ಬಂದವು. ಇದರಿಂದಾಗಿ ಇಲ್ಲಿ ಚಾತುರ್ವರ್ಣ್ಯ ಪದ್ಧತಿಯಲ್ಲಿ ಸ್ವಲ್ಪಮಟ್ಟಿನ ಸಡಿಲಿಕೆ ಕಂಡುಬಂದಿತು. ಸಮಾಜವನ್ನು ಒಡೆದು ಚೂರು ಚೂರಾಗಿಸಿದ್ದ ಜಾತಿಯನ್ನು ಗಣತಿ ಮಾಡುವ ಮೂಲಕ ಬ್ರಿಟಿಷರು ಭಾರತೀಯ ಸಮಾಜದ ವಿರಾಟ್ ದರ್ಶನವನ್ನು ಪಡೆದರು. ಆದರೆ ಇಲ್ಲಿಯ ಜಾತಿವ್ಯವಸ್ಥೆಯನ್ನು 'ಒಡೆದು ಆಳುವ ನೀತಿಗೆ' ಯಶಸ್ವಿಯಾಗಿ ಬಳಸಿಕೊಂಡರು. ವಿವಿಧ ಜಾತಿಗಳ ಜನರನ್ನು ಎತ್ತಿಕಟ್ಟುತ್ತಾ, ಪರಸ್ಪರ ದ್ವೇಷ, ಅಸೂಯೆ, ಸ್ಪರ್ಧೆ, ಕಚ್ಚಾಟಗಳಲ್ಲಿ ತೊಡಗುವಂತೆ ಮಾಡಿದರು. ಜಾತಿ ಸಂಘಟನೆಗಳ ಉದಯಕ್ಕೆ ಕಾರಣರಾದರು. ಇದರಿಂದಾಗಿ ಗ್ರಾಮಗಳ ಐಕ್ಯತೆಗೆ, ಭಾವನಾತ್ಮಕ ಸಂಬಂಧಗಳಿಗೆ ಬರೆ ಎಳೆದಂತಾಯಿತು. ಬ್ರಿಟಿಷರು ಸಮಾಜದಲ್ಲಿ ಜಾತಿಯನ್ನು ಜೀವಂತವಾಗಿಟ್ಟರು. ಈ ಹಿನ್ನೆಲೆಯಲ್ಲಿ ಸಮಾಜದಲ್ಲಿ ಸ್ಥಿತ್ಯಂತರಗಳುಂಟಾದವು.

ಬ್ರಿಟಿಷರ ಆಡಳಿತಾಧಿಕಾರದ ಅವಧಿಯಲ್ಲಿ ಪಾಳೆಗಾರಿಕೆಯ ಪ್ರಭಾವವು ಕ್ಷೀಣಗೊಂಡಿದ್ದು ಮಹತ್ವದ ಸಂಗತಿಯಾಗಿದೆ. ಅನಂತರ ಜಮೀನ್ದಾರಿ ಪದ್ಧತಿ ಅಸ್ತಿತ್ವಕ್ಕೆ ಬಂದಿತು. ಇದರಿಂದ 'ಜೀತಪದ್ಧತಿ' ಕಾಣಿಸಿಕೊಂಡಿತು. ಇದು ಕೂಡ ಅಂದಿನ ಸಮಾಜದಲ್ಲಿ ಆದ ಮುಖ್ಯ ಬದಲಾವಣೆಯೇ ಆಗಿದೆ. ''ಅತ್ಯಂತ ಭಿನ್ನವಾದ ಪಾಶ್ಚಾತ್ಯ ನಾಗರಿಕತೆಯು ಜನಕ್ಕೆ ಆಕರ್ಷಕವಾಗಿ ತೋರಿತು. ಮುಖ್ಯವಾಗಿ ಅವರ ಚಿಕಿತ್ಸಕ ಮನೋವೃತ್ತಿ, ವ್ಯಾವಹಾರಿಕ ದೃಷ್ಟಿ, ಇವು ಭಾರತೀಯರ ಬದುಕಿನ ಮೇಲೆ ಪ್ರಭಾವಬೀರಿ ಅವರ ಜೀವನದೃಷ್ಟಿಯನ್ನು ಬದಲಿಸತೊಡಗಿದವು'' (ಶ್ರೀನಿವಾಸ ಹಾವನೂರ). ಈ ಮಾತು ಕರ್ನಾಟಕದ ಸಾಮಾಜಿಕ ಜೀವನದ ಸ್ಥಿತ್ಯಂತರವನ್ನು ತೋರಿಸುತ್ತದೆ. ಗಾಂಧೀ, ಅಂಬೇಡ್ಕರ್, ಲೋಹಿಯಾ ಮೊದಲಾದ ಮಹಾನ್ ಸಮಾಜ ಚಿಂತಕರೂ, ಸುಧಾರಣಾವಾದಿಗಳೂ ಜನಜೀವನದ ಮೇಲೆ ಗಾಢವಾದ ಪ್ರಭಾವ ಬೀರಿದರು. ಸಮಾಜದ ನಿಮ್ನ ವರ್ಗಗಳು ತಮ್ಮ ಬದುಕಿನಲ್ಲಿ ಬದಲಾವಣೆ ತಂದುಕೊಳ್ಳಲು ಈ ನಾಯಕರ ತತ್ವ-ಸಿದ್ಧಾಂತಗಳನ್ನು ಅಳವಡಿಸಿಕೊಳ್ಳತೊಡಗಿದವು. ಗಾಂಧಿ ಮತ್ತು ಅಂಬೇಡ್ಕರ್ ಅವರ ನಡುವೆ ತಾತ್ವಿಕ ಭಿನ್ನಾಭಿಪ್ರಾಯಗಳಿದ್ದರೂ, ಅವರು ರಾಷ್ಟ್ರದ ಹಿತದೃಷ್ಟಿಯಿಂದ ಹರಿಬಿಟ್ಟ ಚಿಂತನೆಗಳೂ, ಹಾಕಿಕೊಟ್ಟ ಯೋಜನೆಗಳೂ, ಸಮಾಜದ ಎಲ್ಲ ಕ್ಷೇತ್ರಗಳಲ್ಲಿ ಬೆಳವಣಿಗೆಗೆ, ಬದಲಾವಣೆಗಳಿಗೆ ಕಾರಣವಾಗಿವೆ ಎಂಬುದು ಮಾತ್ರ ಚಾರಿತ್ರಿಕ ಸತ್ಯವಾಗಿದೆ. ಹೀಗೆ ಬ್ರಿಟಿಷ್ ವಸಾಹತುಶಾಹಿ ಸಂದರ್ಭದಲ್ಲಿ ಕನ್ನಡಿಗರು ತಮ್ಮ ಪಾರಂಪರಿಕ ಪದ್ಧತಿಗಳನ್ನು ಉಳಿಸಿಕೊಂಡು ಬಾಳಿದರು. ಹಲವು ಸ್ತರಗಳಲ್ಲಿ ಬದಲಾವಣೆಗಳೂ ಆಯಿತೆಂದು ಹೇಳಬಹುದು.

**ಸ್ವಾತಂತ್ರ್ಯೋತ್ತರ ಕಾಲದಲ್ಲಿ ಕರ್ನಾಟಕದಲ್ಲಾದ ಬದಲಾವಣೆ**

ಭಾರತೀಯ ಸಮಾಜ, ಧರ್ಮ, ಜಾತಿ, ಅರ್ಥವ್ಯವಸ್ಥೆ ಮುಂತಾದವುಗಳನ್ನು ತಲಸ್ಪರ್ಶಿಯಾಗಿ ಅಧ್ಯಯನ ಮಾಡಿದ ಡಾ|| ಬಾಬಾಸಾಹೇಬ ಅಂಬೇಡ್ಕರ್ ದಲಿತರ ಉದ್ಧಾರ ಬೇರೆ ಯಾರಿಂದಲೂ ಸಾಧ್ಯವಿಲ್ಲವೆಂಬುದನ್ನು ಸ್ವ-ಅನುಭವದಿಂದ ಕಂಡುಕೊಂಡಿದ್ದರು. ಅಸ್ಪೃಶ್ಯರಿಗೆ ಸಂವಿಧಾನದ ಮೂಲಕವೇ ಎಲ್ಲ ಸವಲತ್ತು ಮತ್ತು ರಕ್ಷಣೆ ಕೊಟ್ಟು ಮೇಲಕ್ಕೆ ಎತ್ತುವ ಸದಿಚ್ಛೆಯನ್ನು ಅವರು ಹೊಂದಿದ್ದರು. ಅದೃಷ್ಟವಶಾತ್ ನಮ್ಮ ಪ್ರಜಾಪ್ರಭುತ್ವ ರಾಷ್ಟ್ರಕ್ಕೆ ಸಂವಿಧಾನವೊಂದನ್ನು ರಚಿಸಿಕೊಡುವ ಸಮಿತಿಯ ಅಧ್ಯಕ್ಷತೆ ಡಾ|| ಅಂಬೇಡ್ಕರ್ ಅವರದಾಯಿತು. ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಹಿಂದುಳಿದ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡಗಳ ಮುನ್ನಡೆಗೆ ವಿಶೇಷ ಸೌಲಭ್ಯ, ಸರಕಾರಿ ನೇಮಕಗಳಲ್ಲಿ ಮೀಸಲಾತಿ, ಜಾತಿಧರ್ಮಗಳ ತಾರತಮ್ಯ ನಿವಾರಣೆ ಮೊದಲಾದ ಸವಲತ್ತುಗಳನ್ನು ಸಂವಿಧಾನಬದ್ಧವಾಗಿ ಒದಗಿಸಿದರು. ಡಾ|| ಅಂಬೇಡ್ಕರ್ ಅವರು ಸಂವಿಧಾನಬದ್ಧವಾಗಿ ತಂದುಕೊಟ್ಟ 'ಮೀಸಲಾತಿ' ಸಮಾಜದಲ್ಲಿ ಬಹುದೊಡ್ಡ ಸ್ಥಿತ್ಯಂತರಗಳು ಉಂಟಾಗುವಂತೆ ಮಾಡಿತು. ಈ ಮೀಸಲಾತಿಯ ಲಾಭ ಪಡೆದು ಕೆಳವರ್ಗದ ಅನೇಕ ಸಮುದಾಯಗಳು ಉನ್ನತ ಶಿಕ್ಷಣ, ಹುದ್ದೆ, ಆರ್ಥಿಕಭದ್ರತೆ, ಆತ್ಮಗೌರವ, ಮತ್ತು ಸಾಮಾಜಿಕ ಸ್ಥಾನಮಾನಗಳನ್ನು ಪಡೆದುಕೊಂಡವು. ಮಂತ್ರಿಗಳು, ಅಧ್ಯಕ್ಷರು, ಸದಸ್ಯರು ಹೀಗೆ ವಿವಿಧ, ಹಂತಗಳಲ್ಲಿ ಸೇವೆ ಸಲ್ಲಿಸುವ ಭಾಗ್ಯವನ್ನು ದಲಿತರು ಪಡೆದರು. ಹೀಗೆ ಕೆಳವರ್ಗದಿಂದ ಉನ್ನತ ಜವಾಬ್ದಾರಿಯುತ ಸ್ಥಾನಗಳನ್ನು ಪಡೆದ ಹಿನ್ನೆಲೆಯಲ್ಲಿ ಈ ಜನರನ್ನು ನೋಡುವ, ಅವರೊಂದಿಗೆ ವ್ಯವಹರಿಸುವ ರೀತಿ ನೀತಿಗಳಲ್ಲಿ ಸ್ವಲ್ಪಮಟ್ಟಿಗೆ ಬದಲಾವಣೆಗಳಾದವು.

'ಮೀಸಲಾತಿ'ಯನ್ನು ಕೊಡುವ ಮುಖ್ಯ ಉದ್ದೇಶ ಶೋಷಿತ ಜನಾಂಗದ ಸ್ಥಿತಿಗತಿಗಳನ್ನು ಉತ್ತಮಗೊಳಿಸಿ ಸಮಾಜದ ಮುಖ್ಯವಾಹಿನಿಗೆ ತರುವುದೇ ಆಗಿದೆ. ಆ ಮೂಲಕ ಸಮಾನತೆಯಿಂದ ಕೂಡಿದ ಆದರ್ಶ ಸಮಾಜವೊಂದರ ನಿರ್ಮಾಣ ಮಾಡುವುದೇ ಆಗಿದೆ. ''ಸಮಾನ ಶಿಕ್ಷಣ, ಸಮಾನ ದುಡಿಮೆ, ಸಮಾನ ವೇತನ, ಸಮಾನ ಗೌರವ ಇವೆಲ್ಲವೂ ಜಾರಿಗೆ ಬಂದು 'ಜಾತಿ' ಆಧಾರದ ಮೇಲೆ ಗುರುತಿಸುವುದು ನಿಂತಾಗ ಮಾತ್ರ ಮೀಸಲಾತಿ ನೀತಿ ಅಗತ್ಯವಾಗಲಾರದು.'' (ಡಾ|| ಎಚ್. ಟಿ. ಪೋತೆ). 'ಮೀಸಲಾತಿ'ಯನ್ನು ಸಮರ್ಪಕವಾಗಿ ಜಾರಿಗೆ ತರದೇ ಇದ್ದುದು, ಉನ್ನತ ಅಧಿಕಾರ, ಆರ್ಥಿಕ ಸಬಲತೆ ಇದ್ದರೂ 'ಜಾತಿ' ಹಿನ್ನೆಲೆಯಲ್ಲಿ ವ್ಯಕ್ತಿಗಳನ್ನು ಗುರುತಿಸುವುದು, 'ಜಾತಿ' ಹೆಸರಲ್ಲಿ ಅವಮಾನ, ದಬ್ಬಾಳಿಕೆ ಶೋಷಣೆಗಳು ಯಾವ ಕಾನೂನಿನ ಹಂಗಿಲ್ಲದೆ ನಿರಾತಂಕವಾಗಿ ಮುಂದುವರೆದದ್ದರಿಂದ ದಲಿತ ಸಮುದಾಯಗಳು ಈಗ ಜಾಗೃತಗೊಳ್ಳುತ್ತಿವೆ.



ಡಾ|| ಬಾಬಾಸಾಹೇಬ ಅಂಬೇಡ್ಕರ್ ಅವರ ಶಿಕ್ಷಣ, ಸಂಘಟನೆ, ಹೋರಾಟವೆಂಬ ಸಿದ್ಧಾಂತಗಳು, ಲೋಹಿಯಾ ವಿಚಾರಧಾರೆಗಳು, ಮಹಾರಾಷ್ಟ್ರದ ದಲಿತ ಪ್ಯಾಂಥರ್, ಬಸವಲಿಂಗಪ್ಪನವರ 'ಬೂಸಾ' ಪ್ರಕರಣ, ಆಫ್ರಿಕಾದ ಕಪ್ಪು ಸಾಹಿತ್ಯ ಮೊದಲಾದವುಗಳ ಪ್ರಭಾವದಿಂದಾಗಿ ಕರ್ನಾಟಕದಲ್ಲಿ 'ದಲಿತ ಸಂಘರ್ಷ ಸಮಿತಿ' ಜನ್ಮತಳೆದು ಹಳ್ಳಿ-ಹಳ್ಳಿಗಳಲ್ಲಿ ತನ್ನ ಶಾಖೆಗಳನ್ನು ವಿಸ್ತರಿಸಿ, ಅಸ್ಪೃಶ್ಯತೆ, ಶೋಷಣೆ, ಅನ್ಯಾಯ, ಅಸಮಾನತೆಗಳ ವಿರುದ್ಧ ಹೋರಾಟಗಳನ್ನು ರೂಪಿಸಿತು. ದಲಿತ ಸಾಹಿತ್ಯದ ಸೃಷ್ಟಿ ಆದುದು ಇದೇ ಸಂದರ್ಭದಲ್ಲಿ, ದೇವನೂರ ಮಹಾದೇವ, ಸಿದ್ಧಲಿಂಗಯ್ಯ, ಮುಳ್ಳೂರು ನಾಗರಾಜ, ಇಂದೂಧರ ಹೊನ್ನಾಪುರ ಮೊದಲಾದವರು ದಲಿತ ಸಾಹಿತ್ಯಕ್ಕೆ ಭದ್ರನೆಲೆಯನ್ನು ಒದಗಿಸಿದರು. ದಲಿತ ಸಂಘಟನೆ ಒಂದು ಪ್ರಬಲಶಕ್ತಿಯಾಗಿ ರೂಪುಗೊಂಡಿತು. ಸರಕಾರದ ಕಡೆಯಿಂದ ಸೌಲಭ್ಯಗಳು, ಯೋಜನೆಗಳು, ದಲಿತರಿಗೆ ದೊರೆಯುವಂತೆ ಮಾಡುವಲ್ಲಿ ಅದು ಪ್ರಮುಖ ಪಾತ್ರ ವಹಿಸಿತು. ಈ ಅವಧಿಯಲ್ಲಿ ದಲಿತರಲ್ಲಿ ಜಾಗೃತಿಯು ಸೃಷ್ಟಿ ಮೂಡಿತು.

ಆದರೆ ದಲಿತ ಸಂಘಟನೆಯ ಶಕ್ತಿಯ ಅಗಾಧತೆಯನ್ನು, ಅದು ಮಾಡಬಹುದಾದ ಜನಪರ ಹೋರಾಟ ಮತ್ತು ಅದರ ಪರಿಣಾಮಗಳನ್ನು ಮೇಲ್ವರ್ಗದ ರಾಜಕಾರಣಿಗಳು

ಆಡಿಕೊಂಡು ಈ ಸಂಘಟನೆಯನ್ನು ಶಿಥಿಲಗೊಳಿಸಿದರು. ದಲಿತರಲ್ಲೇ ಇರುವ ಉಪಜಾತಿಗಳನ್ನು ಬಡಿದೆಬ್ಬಿಸಿ ಒಳ ಜಗಳ, ಆರೋಪ, ಪ್ರತ್ಯಾರೋಪಗಳಲ್ಲಿ ಕಾಲಹರಣ ಮಾಡುವಂತೆ ಮಾಡಿದರು. ಇದು ಸಮಾಜದ ಮೇಲೆ ಹಾಗೂ ರಾಜಕೀಯದ ಮೇಲೆ ಗುರುತರವಾದ ಪರಿಣಾಮಗಳನ್ನುಂಟುಮಾಡಿತು. ದಲಿತರು ಈಗಲಾದರೂ ಇದನ್ನು ಅರಿತುಕೊಂಡು ಪುನಃ ಒಗ್ಗೂಡಬೇಕಾಗಿದೆ. ಅಂಬೇಡ್ಕರವಾದ ಮತ್ತು ಲೋಹಿಯಾವಾದ ಕನ್ನಡ ಸಾಹಿತ್ಯದ ಸೃಜನಶೀಲತೆಯ ಮೇಲೆ ನೇರ ಪ್ರಭಾವ ಬೀರಿವೆ. ಕಾವ್ಯ, ಕಥೆ, ಕಾದಂಬರಿ, ನಾಟಕಗಳಲ್ಲಿ ದಲಿತಲೋಕದ ಜೀವನ ದರ್ಶನ ಅನಾವರಣಗೊಂಡಿದೆ. ತಮ್ಮದೇ ಸಂಸ್ಕೃತಿಯ ಒಳ-ಹೊರಗನ್ನು ಅಭಿಮಾನಪೂರ್ವಕವಾಗಿ ಅಭಿವ್ಯಕ್ತಿಸುವುದು ಈಗ ದಲಿತ ಸಮುದಾಯಕ್ಕೆ ಹೆಮ್ಮೆಯ ಸಂಗತಿಯಾಗಿದೆ.

> **ಜಾಗೃತಿ**
>
> ಜಾಗತೀಕರಣದ
> ಈ ಕಾಲದಲ್ಲಿ
> ನಮ್ಮ 'ಜಾಗ'
> ಕಳೆದುಹೋಗದ ಹಾಗೆ
> ಜಾಗೃತರಾಗಿರಬೇಕು !
>
> ಪಿ.ಪಿ.ಕೆ.
> ಮೈಸೂರು

ಸಮಾಜದ ಪರಿವರ್ತನೆ ಮತ್ತು ಜಾತಿ ನಿರ್ಮೂಲನೆಗಳ ಹೋರಾಟಕ್ಕೆ ನೆರವಾಗುವ ಪ್ರಮುಖ ಅಸ್ತ್ರವೆಂದರೆ ಅಂತರ್‌ಜಾತಿ ವಿವಾಹ. ಇದು ಸಮಾಜದಲ್ಲಿ ಸಮಾನತೆಯನ್ನು ತರಲು ಸಹಾಯಕವಾಗುತ್ತದೆ. ಅಂತರ್‌ಜಾತಿ ವಿವಾಹವಾದವರು ಸಮಾಜದಲ್ಲಿ ಸ್ಥಿತ್ಯಂತರಗಳು ಉಂಟಾಗುವುದಕ್ಕೆ ಕಾರಣರಾಗುತ್ತಾರೆ. ಸರಕಾರ ಅಂತರ್‌ಜಾತಿ ವಿವಾಹವಾದವರಿಗೆ ಪ್ರೋತ್ಸಾಹ ಧನ, ಕಾನೂನಿನ ರಕ್ಷಣೆ, ಉದ್ಯೋಗದಲ್ಲಿ ಮೀಸಲಾತಿ ಮೊದಲಾದ ಸೌಲಭ್ಯಗಳನ್ನು ಒದಗಿಸಿ ಈ ವಿವಾಹ ಪದ್ಧತಿಯತ್ತ ಅನ್ಯ ಜಾತಿಗಳ ಜನರೂ ಆಕರ್ಷಿತವಾಗುವಂತೆ ಮಾಡಬೇಕು.

ಅಂತರ್‌ಜಾತಿ ವಿವಾಹಗಳು ಕರ್ನಾಟಕದಲ್ಲಿ ಬಹು ವಿರಳವೆಂದೇ ಹೇಳಬೇಕು. ಉದ್ಯೋಗ, ಅಂತಸ್ತು ಬದಲಾದರೂ 'ಜಾತಿ' ಮಾತ್ರ ಇಂದಿಗೂ ಉಳಿದುಕೊಂಡು ಬಂದಿದೆ. ಸ್ವಾತಂತ್ರ್ಯ ಬಂದು ಅರವತ್ತು ವರ್ಷಗಳಾದರೂ 'ಜಾತಿ' ವಿಷಯದಲ್ಲಿ ಯಾವ ಸ್ತರದಲ್ಲೂ ಜನರ ಮನೋಭಾವ ಮಾತ್ರ ಬದಲಾಗಿಲ್ಲ. ಹೀಗಾಗಿ ಅಂತರ್‌ಜಾತಿ ವಿವಾಹಗಳಿಗೆ ವಿರೋಧ ಮುಂದುವರೆಯುತ್ತಲೇ ಇದೆ. ನವಸಮಾಜ ನಿರ್ಮಾಣವಾಗಬೇಕಾದರೆ, ವರ್ಗರಹಿತ, ವರ್ಣರಹಿತ ಸಮಾಜ ಸಮಾನತೆಯ ನೆಲೆಯಲ್ಲಿ ರೂಪುಗೊಳ್ಳಬೇಕಾದರೆ ಮೇಲ್ಜಾತಿಯ ಜನಗಳು ಅಂತರ್‌ಜಾತಿ ವಿವಾಹಗಳನ್ನು ಮಾನವೀಯ ನೆಲೆಯಲ್ಲಿ ಮಾನ್ಯ ಮಾಡಬೇಕು. ಕಾನೂನುರೀತ್ಯಾ ಅವುಗಳನ್ನು ಪುರಸ್ಕರಿಸಬೇಕು. ಜಾತಿ ಮತ್ತು ಧರ್ಮದ ಚೌಕಟ್ಟನ್ನು ಮೀರಿ ನಡೆದಾಗ ಸಾಮಾಜಿಕ ಪರಿವರ್ತನೆ ಸಾಧ್ಯವಾಗುತ್ತದೆ. ಜಾತಿಯನ್ನು ಮೀರಿ ಮಾನವನ ಹಿತಕ್ಕಾಗಿ ಧರ್ಮದ ಸದುಪಯೋಗ ಮಾಡಿಕೊಂಡರೆ ಇನ್ನೂ ಹೆಚ್ಚಿನ ಬದಲಾವಣೆಗಳನ್ನು ನಿರೀಕ್ಷಿಸಬಹುದಾಗಿದೆ.

**ಸಂಸ್ಕೃತಿ ಚಿಂತನೆ**

ಇಂದು ಕೆಳವರ್ಗದವರಲ್ಲಿ ತಮ್ಮ ಅಸ್ತಿತ್ವದ ಬಗ್ಗೆ ಪ್ರಜ್ಞೆ ಮೂಡುತ್ತಿದೆ. ವ್ಯಕ್ತಿಪ್ರಜ್ಞೆಯೊಂದಿಗೆ ಸಮೂಹಪ್ರಜ್ಞೆಯನ್ನು ಬೆಳೆಸಿಕೊಳ್ಳಲಾಗುತ್ತಿದೆ. ತಮಗೂ ಒಂದು ಪರಂಪರೆ ಇದೆ; ತಮ್ಮ 'ಜಾತಿ' ಇತರ ಯಾವ ಜಾತಿಗಳಿಗಿಂತಲೂ ಕೀಳಲ್ಲ ಎಂಬ ಭಾವನೆ ಮೂಡಿಬರುತ್ತಿದೆ. ಕರ್ನಾಟದಲ್ಲಿ ಉಪಸಂಸ್ಕೃತಿಯ ಅಧ್ಯಯನಕ್ಕೆ ಚಾಲನೆ ದೊರೆತ ಕಾರಣ ಹಲವು ಜಾತಿಗಳ ಸಮುದಾಯಗಳ ಮತ್ತು ಬುಡಕಟ್ಟುಗಳ ಅಧ್ಯಯನಕ್ಕೆ ಅವಕಾಶ ದೊರೆತಂತಾಗಿದೆ. ಈ ಅಧ್ಯಯನಗಳು ಹೊರಹಾಕುವ ಸತ್ಯ, ಸಾಮಾಜಿಕ ಪರಿವರ್ತನೆಗೆ ಕಾರಣವಾಗುತ್ತವೆ. ಉದಾಹರಣೆಗೆ, ನೀಲಗಿರಿ ಬೆಟ್ಟದ ಗಿರಿಜನರಲ್ಲಾದ ಬದಲಾವಣೆಗಳನ್ನು ನೋಡಬಹುದು. ಸಾಮಾಜಿಕ-ಆರ್ಥಿಕ ಅಭಿವೃದ್ಧಿ ಕಾರಣದಿಂದ ಮನೆ, ಹೊಲ, ಉದ್ಯೋಗ, ಸಾಲ, ಸವಲತ್ತುಗಳಂತಹ ಭೌತಿಕ ಭೋಗದ ಅನುಕೂಲಗಳು ದಲಿತರಿಗೆ ದೊರಕಿದವು. ವ್ಯಕ್ತಿಪ್ರಜ್ಞೆಯಿಂದಾಗಿ ಸಾಮಾಜಿಕ ಅಸ್ತಿತ್ವದ ಸ್ಥಾನಮಾನ, ಗೌರವಗಳೊಂದಿಗೆ ಸ್ವಾಭಿಮಾನದ ಬದುಕನ್ನು ಕಟ್ಟಿಕೊಳ್ಳಲು ಸಾಧ್ಯವಾಗಿದೆ. ಈಗ ಹಲವು ಜಾತಿಗಳು, ಬುಡಕಟ್ಟುಗಳು ಸಂಘಟನೆಗೊಂಡು ತಮ್ಮ ಸವಲತ್ತುಗಳಿಗಾಗಿ ಹಕ್ಕೊತ್ತಾಯ ಮಾಡುತ್ತಿರುವುದು ಕಂಡುಬರುತ್ತಿದೆ. ಅಲ್ಲದೆ ಈ ಜನಾಂಗದವರಿಗೆ ಸಾರ್ವಜನಿಕ ದೇವಾಲಯ, ಹೋಟೇಲ್, ಸಿನೆಮಾ ಮಂದಿರ, ಬಸ್‌ಸ್ಟ್ಯಾಂಡ್, ಶೈಕ್ಷಣಿಕ ವಿದ್ಯಾಲಯಗಳಲ್ಲಿ ಮುಕ್ತ ಪ್ರವೇಶ ದೊರಕಿದೆ. ಮಹಿಳೆ ಮತ್ತು ಮಕ್ಕಳ ಕಲ್ಯಾಣಕ್ಕಾಗಿ ವಿಶೇಷ ಸವಲತ್ತುಗಳು ಒದಗಿವೆ. ಇಂದು ಮಹಿಳೆಯರು ಸ್ವಲ್ಪಮಟ್ಟಿಗೆ ಪುರುಷರಿಗೆ ಸಮಾನವಾಗಿ ಬೆಳೆಯುತ್ತಿದ್ದಾರೆ. ಇದಕ್ಕೆ ಶಿಕ್ಷಣ ಮತ್ತು ಮೀಸಲಾತಿ ಕಾರಣವಾಗಿದೆ. ಕೆಲವು ಗಮನಾರ್ಹವಾದಂತಹ ಬದಲಾವಣೆಗಳೂ ಆಗಿವೆ. ಮಹಿಳೆಯರನ್ನು ಪಾರಂಪರಿಕ ಸ್ಥಿತಿಯಲ್ಲಿ ನೋಡುವ ದೃಷ್ಟಿಕೋನ ಬದಲಾಗುತ್ತಿರುವುದು ಒಂದು ಉತ್ತಮ ಬೆಳವಣಿಗೆಯಾಗಿದೆ.

**ಜಾಗತಿಕ ಸಂದರ್ಭದಲ್ಲಿ ಸ್ಥಿತ್ಯಂತರ**

''ಜಾಗತೀಕರಣ ಎಂಬುದು ಆಧುನಿಕತೆಯ ಇನ್ನೊಂದು ಹಂತವಾಗಿದ್ದು ವಿಶ್ವದ ಸಮಾಜಗಳನ್ನು ಅತ್ಯಂತ ಹತ್ತಿರಕ್ಕೆ ತರುವ ಸಂಕೀರ್ಣವಾದ ಒಂದು ಸ್ಥಿತಿ'' (ಮೊಗಳ್ಳಿ ಗಣೇಶ). ಜಾಗತೀಕರಣ ಇಂದು ಅನೇಕ ಸವಾಲುಗಳನ್ನು ತಂದೊಡ್ಡಿದೆ. ಕೆಳವರ್ಗದ ಎಲ್ಲ ಸಮುದಾಯಗಳಿಗೆ ದೇಶೀ ಚಿಂತನೆ ಅತಿ ಅವಶ್ಯವೆನಿಸುತ್ತಿದೆ. ಜಾಗತೀಕರಣದ ಪ್ರಭಾವದಿಂದಾಗಿ ಹಲವಾರು ಬದಲಾವಣೆಗಳು ಉಂಟಾಗಿವೆ ಎಂದರೂ, ಸಮಾಜದಲ್ಲಿ ಈಗಲೂ ಹಲವು ಸಂದಿಗ್ಧ ಸಂದರ್ಭಗಳನ್ನು ನೋಡಬಹುದಾಗಿದೆ. ಅರೆ ಹೊಟ್ಟೆಯಲ್ಲಿ ಅಲೆಯುವ ಜನ ಒಂದೆಡೆಯಾದರೆ 'ಹಸಿವು' ಶಬ್ದವನ್ನು ಡಿಕ್ಷನರಿಯಲ್ಲಿ ಮಾತ್ರ ಕಾಣುವ ಜನ ಇನ್ನೊಂದೆಡೆ. ಮನೆ ಕಟ್ಟಲು ಸಾಲ ಮಾಡಿ, ಜೀವನಪರ್ಯಂತ ಅದನ್ನು ತೀರಿಸಲು ಹೆಣಗಾಡುವ ಜನ ಇದ್ದಾರೆ. ಒಂದಕ್ಕಿಂತ ಹೆಚ್ಚು ಬಂಗಲೆಗಳನ್ನು ಕಟ್ಟಿಸಿ ಮೆರೆಯುವವರೂ ಇದ್ದಾರೆ. ಬಂಡವಾಳಶಾಹಿಗಳಿಗೆ ತಮ್ಮ ಭೂಮಿಯನ್ನು ಮಾರಿಕೊಂಡು, ಅವರಲ್ಲಿಯೇ ಕೂಲಿ ಕೆಲಸ ಮಾಡಿಕೊಂಡಿದ್ದು, ತಮ್ಮ ಬೆಳೆಗಳಿಗೆ ಉತ್ಪನ್ನಗಳಿಗೆ ಸರಿಯಾದ ಮಾರುಕಟ್ಟೆ ಲಭಿಸದೆ, ಅತಂತ್ರ ಸ್ಥಿತಿಯಲ್ಲಿ ತೊಳಲಾಡುವ ರೈತರ ಜೀವನ ಶೋಚನೀಯವಾಗಿದೆ. ರೈತರು ಆತ್ಮಹತ್ಯೆಗೆ ಶರಣಾಗುತ್ತಿದ್ದಾರೆ. ಆಧುನಿಕತೆ ಎಂಬುದು ಇಡೀ ಸಾಮಾಜಿಕ ವ್ಯವಸ್ಥೆಯನ್ನು ಬಹುಕಾಲದವರೆಗೂ ಒಂದೇ ರೀತಿಯಲ್ಲಿ ಇಡಕೂಡದು. ಇದು ಆಧುನಿಕತೆಯ ಲಕ್ಷಣವೂ ಹೌದು.

೨೦ನೇ ಶತಮಾನದಲ್ಲಿ ಭೌತಿಕ ಸೌಲಭ್ಯಗಳು ಹೆಚ್ಚಿವೆ. ಕಂಪ್ಯೂಟರ್, ಲ್ಯಾಪ್‌ಟಾಪ್, ಮೊಬೈಲ್, ಅಂತರ್‌ಜಾಲಗಳು, ಬೆರಳ ತುದಿಯಲ್ಲಿರುವ ಟಿ.ವಿ.ಚಾನೆಲ್‌ಗಳು, ಸಂಪರ್ಕ ಮಾಧ್ಯಮ ಮೊದಲಾದವು ಸಮಾಜದ ಸಂಚಲನೆಗೆ, ಕ್ರಿಯಾಶೀಲತೆಗೆ ಸಾಧನಗಳಾಗಿವೆ. ಜಾಗತೀಕರಣದಿಂದಾಗಿ ಬದಲಾಗುತ್ತಿರುವ ಮಾನವೀಯ ಸಂಬಂಧಗಳು, ಸಾಮಾಜಿಕ ಮೌಲ್ಯಗಳು ಕೃತಕವಾಗಿ ಅನೇಕ ತಲ್ಲಣ ತಾಕಲಾಟಗಳನ್ನುಂಟುಮಾಡುತ್ತಿವೆ. ಪ್ರೀತಿ, ವಿಶ್ವಾಸ, ಗೌರವಗಳೆಲ್ಲ ಗೌಣವಾಗುತ್ತಿವೆ. ನಮ್ಮ ಪರಂಪರೆಯ ಹಿನ್ನೆಲೆಯಲ್ಲಿ ಮೌಲ್ಯಗಳ ಚಿಂತನೆಗಳೊಂದಿಗೆ ಮಾನವೀಯ ಸಂಬಂಧಗಳನ್ನು ಗಟ್ಟಿಗೊಳಿಸಿ ಬದುಕನ್ನು ಅರ್ಥಪೂರ್ಣವಾಗಿ ತೂಗಿಸಿಕೊಂಡು ಹೋಗುವುದು ಇಂದಿನ ಅವಶ್ಯಕತೆಯಾಗಿದೆ.

ಅವೈಜ್ಞಾನಿಕವಾದ, ಕೃತಕವಾದ ಶ್ರೇಣೀಕೃತ ಸಮಾಜದ ವಿಘಟನೆ, ಅನಿಷ್ಟ ಪದ್ಧತಿಗಳ ನಿರ್ಮೂಲನೆ ಹಲವು ಸಂದರ್ಭ ಮತ್ತು ಸನ್ನಿವೇಶಗಳಲ್ಲಿ ಅನುಸರಿಸುತ್ತಿದ್ದ ಭೇದ ನೀತಿಗಳು ನಮ್ಮೆಲ್ಲ ಇತಿಮಿತಿಗಳಲ್ಲಿಯೂ ಕಡಿಮೆಯಾಗುತ್ತಿರುವುದು ಸ್ವಾಗತಾರ್ಹ. ಸಾರ್ವಜನಿಕ ಸ್ಥಳಗಳಾದ ಹೋಟೆಲ್, ದೇವಾಲಯಗಳಲ್ಲಿ ಮುಕ್ತ ಅವಕಾಶ ಕೆಳ ಸಮುದಾಯಗಳಿಗೆ ದೊರಕುವುದು ಸಾಮಾನ್ಯವಾಗುತ್ತಿದೆ. ಆದರೆ ಎಂಥ ಉನ್ನತ ಹುದ್ದೆಯಲ್ಲಿ ಇದ್ದರೂ, ಆರ್ಥಿಕವಾಗಿ ಸಬಲವಾಗಿದ್ದರೂ ಸಾಮಾಜಿಕವಾಗಿ ಘನತೆ-ಗೌರವ ಪಡೆದಿದ್ದರೂ 'ಜಾತಿ' ಹಿನ್ನೆಲೆಯಲ್ಲಿ ನೋಡುವ ಪ್ರವೃತ್ತಿಯಲ್ಲಿ ಯಾವ ಬದಲಾವಣೆ ಆಗಿಲ್ಲ. ಜಾತೀಯತೆಯ ಪ್ರಸಂಗಗಳು ಈಗಲೂ ನಡೆಯುತ್ತಿರುವುದಕ್ಕೆ ಹಲವಾರು ನಿದರ್ಶನಗಳಿವೆ. ಎಲ್ಲೆಲ್ಲೂ ನೈತಿಕತೆಯ ಅಧಃಪತನ ಎದ್ದುಕಾಣುತ್ತಿದೆ. ಅನಾಮತ್ತಾಗಿ ಒದಗಿಬಂದ ಸಂಪತ್ತಿನ ಒಡೆಯರಾದ ಯುವ ಪೀಳಿಗೆಯವರು ಕೌಟುಂಬಿಕ ಸಮಸ್ಯೆಗಳಿಗೆ ಎಡೆ ಮಾಡಿಕೊಡುತ್ತಿದ್ದಾರೆ. ಇಂಥವರಿಂದ ಸಮಾಜಮುಖಿಯಾದ ಪ್ರಗತಿಯಾಗಲಿ, ಮೌಲ್ಯಗಳ ಅನುಷ್ಠಾನವಾಗಲಿ ಸಾಧ್ಯವಾಗದೇ ಇರುವುದು ದುರದೃಷ್ಟಕರ ಸಂಗತಿಯಾಗಿದೆ.

ಡಾ।। ಧನವಂತ ಹಾಜವಗೋಳ
ಪ್ರಾಧ್ಯಾಪಕರು, ಕನ್ನಡ ವಿಭಾಗ, ಕರ್ನಾಟಕ ಕಲಾ ಮಹಾವಿದ್ಯಾಲಯ, ಧಾರವಾಡ - ೫೮೦೦೦೧


ವೆಂಕಿ ರಾಮಕೃಷ್ಣನ್


ಆಡಾ ಯೋನಾತ್


ಟಾಮ್ ಸ್ಟೈಟ್ಸ್

ರಸಾಯನಶಾಸ್ತ್ರದಲ್ಲಿ ಮಾಡಿರುವ ಸಾಧನೆಗಾಗಿ ಮೂವರು ವಿಜ್ಞಾನಿಗಳಿಗೆ ಈ ವರ್ಷ ನೊಬೆಲ್ ಪಾರಿತೋಷಕ ನೀಡಲಾಯಿತು. ಈ ಕೀರ್ತಿ ಗಳಿಸಿದ ಭಾರತೀಯ ಮೂಲದ ವೆಂಕಿ ರಾಮಕೃಷ್ಣನ್, ಅಮೆರಿಕಾದ ಟಾಮ್ ಸ್ಟೈಟ್ಸ್ ಹಾಗೂ ಇಸ್ರೇಲಿನ ಆಡಾ ಯೋನಾತ್. ಇವರಲ್ಲಿ ವೆಂಕಿ ರಾಮಕೃಷ್ಣನ್ನರೇ ಅತ್ಯಂತ ಕಿರಿಯರು. ಎಲ್ಲ ಜೀವಕೋಶಗಳಲ್ಲಿರುವ ರೈಬಸೋಮ್ ಎನ್ನುವ ದೈತ್ಯಾಣುವಿನ ರಚನೆಯನ್ನು ಕ್ಷ-ಕಿರಣದ ಸ್ಫಟಿಕ ವಿಜ್ಞಾನದ ತಂತ್ರಗಳ ಸಹಾಯದಿಂದ ಈ ಮೂವರೂ ಸ್ವತಂತ್ರವಾಗಿ ತಮ್ಮ ಪ್ರಯೋಗಾಲಯಗಳಲ್ಲಿ ನಿರ್ಧರಿಸಿದರು. ರೈಬೊಸೋಮ್ ದೈತ್ಯಾಣು ನೀರಿನ ಅಣುವಿಗೆ ಹೋಲಿಸಿದರೆ ಲಕ್ಷ ಪಾಲು ದೊಡ್ಡದು. ನೀರಿನ ಅಣುತೂಕ ೧೮ ಡಾಲ್ಟನ್ (ಹೈಡ್ರೊಜನ್ ಪರಮಾಣುವಿನ ೧೮ ಪಟ್ಟು). ಏಕಕೋಶ ಜೀವಿಗಳಲ್ಲಿರುವ ರೈಬೊಸೋಮಿನ ಅಣುತೂಕ ೨೫ ಲಕ್ಷ ಡಾಲ್ಟನ್. ಬಹುಕೋಶ ಜೀವಿಗಳ ರೈಬೊಸೋಮುಗಳು ಇನ್ನೂ ದೊಡ್ಡವು. **ಕ್ಷ-ಕಿರಣ ಸ್ಫಟಿಕ ವಿಜ್ಞಾನದಲ್ಲೇ ಸಂಶೋಧನೆ ನಡೆಸುತ್ತಿರುವ ನನಗೆ ಈ ಮೂವರ ಪರಿಚಯವಿದೆ. ಅವರ ಸಾಧನೆಗಳನ್ನು ಮೊದಲಿನಿಂದ ಗಮನಿಸಿದ್ದೇನೆ.** ನನಗೆ ತಿಳಿದಿರುವ ಕೆಲ ವಿಷಯಗಳನ್ನು 'ಹೊಸತು' ಓದುಗರೊಂದಿಗೆ ಹಂಚಿಕೊಳ್ಳುವುದು ಈ ಲೇಖನದ ಉದ್ದೇಶ.

ಜೀವಕೋಶಗಳು ಲಿಪಿಡ್ ಅಣುಗಳ ಪೊರೆಯಿಂದ ಆವರಿಸಲ್ಪಟ್ಟಿರುತ್ತವೆ. ಕೋಶದೊಳಗೆ ಇನ್ನೂ ಅನೇಕ ಪೊರೆ ಹೊದ್ದ ವಿಭಾಗಗಳಿರುತ್ತವೆ. ಕೋಶ ಕೇಂದ್ರಗಳಲ್ಲಿ ಡೀ ಆಕ್ಸಿ ರೈಬೋ ನ್ಯೂಕ್ಲಿಯಿಕ್ ಆಸಿಡ್ (ಡಿ.ಎನ್.ಎ) ದೈತ್ಯಾಣುಗಳಿರುತ್ತವೆ. ಡಿ.ಎನ್.ಎ. ಅಣುಗಳು ನ್ಯೂಕ್ಲಿಯೋಟೈಡುಗಳೆಂಬ ನಾಲ್ಕು ಬಗೆಯ ಸಹಸ್ರಾರು ಸಣ್ಣ ಅಣುಗಳ ರಾಸಾಯನಿಕ ಬಂಧದಿಂದ ಲಭಿಸುವ ಉದ್ದನೆಯ ಸರಪಣಿಗಳು. ಏಕಕೋಶ ಜೀವಿಗಳಾದ ಬ್ಯಾಕ್ಟೀರಿಯಗಳಲ್ಲಿ ಒಂದೇ ಡಿ.ಎನ್.ಎ. ದೈತ್ಯಾಣು ಇದ್ದು ಅದನ್ನು ಲಿಪಿಡ್ ಪೊರೆ ಆವರಿಸಿರುವುದಿಲ್ಲ. ಬಹುಕೋಶ ಜೀವಿಗಳಲ್ಲಿ ಹಲವಾರು ಡಿ.ಎನ್.ಎ. ದೈತ್ಯಾಣುಗಳು ಲಿಪಿಡ್ ಪೊರೆಯಿಂದ ಆವರಿಸಲ್ಪಟ್ಟ ಕೋಶಕೇಂದ್ರ ಭಾಗದಲ್ಲಿರುತ್ತವೆ. ನಮ್ಮ ಜೀವಕೋಶಗಳ ಕೇಂದ್ರದಲ್ಲಿ ಇಂತಹ ೨೩ ಜೊತೆ (ಒಟ್ಟು ೪೬) ಡಿ.ಎನ್.ಎ. ದೈತ್ಯಾಣುಗಳಿರುತ್ತವೆ. ಪ್ರತಿ ಜೀವಕೋಶಗಳಲ್ಲಿರುವ ಡಿ.ಎನ್.ಎ. ಅಣುಗಳ ಒಟ್ಟು ತೂಕ ಸುಮಾರು ೧೦,೦೦೦ ಕೋಟಿ ಡಾಲ್ಟನ್. ಡಿ.ಎನ್.ಎ. ದೈತ್ಯಾಣುಗಳಲ್ಲಿ ಜೀವಕೋಶದ ಎಲ್ಲ ಕ್ರಿಯೆಗಳಿಗೆ ಬೇಕಾಗುವ ಮಾಹಿತಿ ಸಾಂಕೇತಿಕ ರೂಪದಲ್ಲಿರುತ್ತದೆ. ಈ ಮಾಹಿತಿ ಪ್ರಕಟಗೊಳ್ಳುವುದು ರೈಬೊಸೋಮ್ ದೈತ್ಯಾಣುವಿನ ನೆರವಿನಿಂದ. ರೈಬೊಸೋಮ್ ಅಣುಗಳು ಹೆಚ್ಚಾಗಿ ಎಂಡೋಪ್ಲಾಸ್ಮಿಕ್ ರೆಟಿಕ್ಯುಲಂ ಎನ್ನುವ ಲಿಪಿಡ್ ಪೊರೆಗೆ ಅಂಟಿಕೊಂಡಿರುತ್ತವೆ. ರೈಬೊಸೋಮ್ ದೈತ್ಯಾಣುಗಳು ಜೀವಕೋಶಗಳ ಸಮಸ್ತ ಕ್ರಿಯೆಗಳಿಗೂ ಅತ್ಯವಶ್ಯಕ. ಅವುಗಳ

# ೨೦೦೯ರ ರಸಾಯನ ಶಾಸ್ತ್ರದ ನೊಬೆಲ್ ಪ್ರಶಸ್ತಿ

ಮೂಲಕವೇ ಡಿ.ಎನ್.ಎ. ಅಣುಗಳಲ್ಲಿರುವ ವಂಶವಾಹಿ ಸಂದೇಶ ಜೀವಕೋಶಗಳಲ್ಲಿ ಪ್ರಕಟಗೊಳ್ಳುತ್ತದೆ. ರೈಬೊಸೋಮ್ ಹೇಗೆ ವಂಶವಾಹಿ ಮಾಹಿತಿಯನ್ನು ಪ್ರಕಟಗೊಳಿಸುತ್ತದೆ ಎನ್ನುವುದನ್ನು ತಿಳಿಯಲು ಅದರ ಅಣುರಚನೆ ಅತ್ಯವಶ್ಯಕ. ಅಣುವಿನಲ್ಲಿರುವ ಎಲ್ಲ ಪರಮಾಣುಗಳೂ ಹೇಗೆ ಪರಸ್ಪರ ಬಂಧ ಹೊಂದಿವೆ ಮತ್ತು ಯಾವ ಸಾಪೇಕ್ಷ ಸ್ಥಾನಗಳಲ್ಲಿವೆ ಎಂದು ತಿಳಿಸುವುದನ್ನೇ ಅಣುರಚನೆ ಎಂದು ಕರೆಯುತ್ತೇವೆ. ರೈಬೊಸೋಮಿನಲ್ಲಿ ಒಂದು ಲಕ್ಷಕ್ಕಿಂತ ಹೆಚ್ಚಿನ ಸಂಖ್ಯೆಯ ಪರಮಾಣುಗಳಿವೆ. ಎಲ್ಲ ಪರಮಾಣುಗಳೂ ಒಂದಲ್ಲ ಇನ್ನೊಂದು ಪರಮಾಣುವಿಗೆ ರಾಸಾಯನಿಕ ಬಂಧ ಹೊಂದಿರುತ್ತವೆ. ಈ ಪರಮಾಣುಗಳೆಲ್ಲಾ ಪರಸ್ಪರ ಸಾಪೇಕ್ಷವಾಗಿ ನಿಶ್ಚಿತ ಸ್ಥಾನಗಳಲ್ಲಿದ್ದು ರೈಬೊಸೋಮ್ ಕಣಕ್ಕೆ ನಿಶ್ಚಿತ ಆಕಾರ ಮತ್ತು ರಚನೆಗಳನ್ನು ಕೊಡುತ್ತವೆ. ರೈಬೊಸೋಮ್ ಕಣದ ಅಣು ರಚನೆಯನ್ನು ಈ ವರ್ಷದ ನೊಬೆಲ್ ಪಾರಿತೋಷಕ ಪಡೆದ ವಿಜ್ಞಾನಿಗಳು ನಿರ್ಧರಿಸಿದರು. ಇದರಿಂದಾಗಿ ಜೀವಕೋಶಗಳಲ್ಲಿ ಸಾಂಕೇತಿಕ ರೂಪದಲ್ಲಿರುವ ವಂಶವಾಹಿ ಮಾಹಿತಿ ಹೇಗೆ ತರ್ಜುಮೆಗೊಂಡು ಪ್ರಕಟಗೊಳ್ಳುತ್ತದೆ ಎನ್ನುವುದನ್ನು ತಿಳಿಯಲು ಸಾಧ್ಯವಾಗುತ್ತದೆ. ರೈಬೊಸೋಮ್ ರಚನೆ ಬ್ಯಾಕ್ಟೀರಿಯ ಸೋಂಕನ್ನು ನಿವಾರಿಸುವ ಔಷಧಗಳ ಅನ್ವೇಷಣೆಗೂ ಅಗತ್ಯ. ಆದ್ದರಿಂದಲೇ ರೈಬೊಸೋಂ ರಚನೆಯನ್ನು ಕಂಡುಹಿಡಿದ ಈ ಮೂವರು ವಿಜ್ಞಾನಿಗಳಿಗೆ ಪ್ರಪಂಚದ ಅತ್ಯಂತ ಪ್ರತಿಷ್ಠಿತ ಪ್ರಶಸ್ತಿ ದೊರೆಯಿತು.

ಈ ವಿಜ್ಞಾನಿಗಳು ರೈಬೊಸೋಮ್ ದೈತ್ಯಾಣುವಿನ ರಚನೆಯನ್ನು ಕಂಡುಕೊಳ್ಳುವುದಕ್ಕೂ ಮುಂಚೆಯೇ, ಜೀವ ರಸಾಯನಶಾಸ್ತ್ರದ ಪ್ರಯೋಗಗಳಿಂದ ರೈಬೊಸೋಮುಗಳ ರಚನೆ ಹಾಗೂ ಕ್ರಿಯೆಗಳ ಬಗ್ಗೆ ಬಹಳ ಮಾಹಿತಿ ದೊರಕಿತ್ತು. ಈ ಮಾಹಿತಿಯ ಸಂಕ್ಷಿಪ್ತ ವಿವರಣೆ ಹೀಗಿದೆ. ಡಿ.ಎನ್.ಎ. ಅಣುಗಳ ಆವಾಸಸ್ಥಾನ ಕೋಶಕೇಂದ್ರ. ಅವು ಅಲ್ಲಿಂದ ಕದಲುವುದಿಲ್ಲ. ಡಿ.ಎನ್.ಎ. ಅಣುಗಳಲ್ಲಿರುವ ಮಾಹಿತಿಯನ್ನು 'ಜೀನ್' ಅಥವಾ 'ವಂಶವಾಹಿ' ಎನ್ನಬಹುದು. ಪ್ರತಿ ಡಿ.ಎನ್.ಎ. ಅಣುವಿನಲ್ಲಿಯೂ ಇಂತಹ ಸಹಸ್ರಾರು ವಂಶವಾಹಿಗಳಿರುತ್ತವೆ. ನಮ್ಮ ಜೀವಕೋಶಗಳಲ್ಲಿ ಸುಮಾರು ೪೦,೦೦೦ ವಂಶವಾಹಿಗಳಿವೆ. ಈ ವಂಶವಾಹಿಗಳು ಡಿ.ಎನ್.ಎ. ಅಣುಗಳ ಶೇಕಡ ಒಂದು ಭಾಗ ಮಾತ್ರ. ಉಳಿದ ಶೇಕಡ ೯೯ ಭಾಗ ಯಾವ ಸಂದೇಶವನ್ನೂ ಹೊಂದಿಲ್ಲದಂತೆ ತೋರುತ್ತದೆ. ಡಿ.ಎನ್.ಎ. ಅಣುಗಳ ವಂಶವಾಹಿ ಮಾಹಿತಿಯ ಸಂದೇಶದ ಪ್ರತಿಯನ್ನು ಪಾಲಿಮರೇಸ್ ಎಂಬ ಕಿಣ್ವ (ಎನ್‌ಸೈಮ್) ರೈಬೋ ನ್ಯೂಕ್ಲಿಯಿಕ್ ಆಸಿಡ್ (ಆರ್.ಎನ್.ಎ.)

ಪ್ರೊ॥ ಎಮ್. ಆರ್. ಎನ್. ಮೂರ್ತಿ

ದೈತ್ಯಾಣುಗಳ ರೂಪದಲ್ಲಿ ಸಂಶ್ಲೇಷಿಸುತ್ತದೆ. ಆರ್.ಎನ್.ಎ. ಅಣುಗಳೂ ಡಿ.ಎನ್.ಎ. ಅಣುಗಳಂತೆ ನ್ಯೂಕ್ಲಿಯಕ್ ಆಮ್ಲದ ಅಣುಗಳು. ಡಿ.ಎನ್.ಎ.ಗೆ ಹೋಲಿಸಿದರೆ ಆರ್.ಎನ್.ಎ. ಅಣುಗಳು ಸಣ್ಣವು. ಏಕೆಂದರೆ ಇವು ಒಂದೇ ವಂಶವಾಹಿಯ ಪ್ರತಿಗಳು. ಸಂಶ್ಲೇಷಣೆಯಾದ ನಂತರ ಆರ್.ಎನ್.ಎ. ಅಣುಗಳು ಕೋಶಕೇಂದ್ರದಿಂದ ಹೊರಬರುತ್ತವೆ, ರೈಬೊಸೋಮುಗಳಿರುವ ತಾಣ ತಲುಪುತ್ತವೆ. ರೈಬೊಸೋಮುಗಳು, ಇನ್ನೂ ಅನೇಕ ಅಣುಗಳ ಸಹಕಾರದಿಂದ, ಆರ್.ಎನ್.ಎ. ಅಣುಗಳಲ್ಲಿರುವ ಮಾಹಿತಿಯನ್ನು ಬಳಸಿ ಪ್ರೋಟೀನ್ ಅಣುಗಳನ್ನು ಸಂಶ್ಲೇಷಿಸುತ್ತವೆ. ಪ್ರೋಟೀನುಗಳು ಜೀವಕೋಶಗಳಿಗೆ ನಿರ್ದಿಷ್ಟ ಆಕಾರ ಕೊಡುವುದರಿಂದ ಪ್ರಾರಂಭಿಸಿ ಜೀವಕೋಶಗಳ ಸಮಸ್ತ ರಾಸಾಯನಿಕ ಕ್ರಿಯೆಗಳ ವೇಗವನ್ನು ಸಹಸ್ರಾರು ಪಟ್ಟು ಹೆಚ್ಚಿಸಿ, ಎಲ್ಲ ಜೈವಿಕ ಕ್ರಿಯೆಗಳನ್ನೂ ನಿಯಂತ್ರಿಸುತ್ತವೆ.

ಏಕಕೋಶ ಜೀವಿಗಳಾದ ಬ್ಯಾಕ್ಟೀರಿಯಗಳ ರೈಬೊಸೋಮ್ ಕಣಗಳು ೫೪ ಪ್ರೋಟೀನ್ ಅಣುಗಳು ಹಾಗು ೩ ರೈಬೊನ್ಯೂಕ್ಲಿಯಕ್ ಆಮ್ಲಗಳ ಅಣುಗಳನ್ನು ಹೊಂದಿದ ರಚನೆ. ರೈಬೊಸೋಮ್ ಕಣ ಎರಡು ಕಣಗಳ ಜೋಡಿ. ಈ ಎರಡು ಕಣಗಳಲ್ಲಿ ಒಂದು ಇನ್ನೊಂದರ ಎರಡರಷ್ಟಿದೆ. ರೈಬೊಸೋಮಿನ ಸ್ಥೂಲ ಆಕಾರ ಕೆಳಗಿನ ಚಿತ್ರದಲ್ಲಿದೆ.




ಪ್ರೋಟೀನುಗಳ ಸಂಶ್ಲೇಷಣ ಕ್ರಿಯೆಯನ್ನು ರೈಬೊಸೋಮ್ ಕಣ ಹೇಗೆ ನಿಯಂತ್ರಿಸುತ್ತದೆ ಎಂಬುದನ್ನು ಕೆಳಗಿನ ಚಿತ್ರ ತಿಳಿಸುತ್ತದೆ. ಈ ಚಿತ್ರದಲ್ಲಿರುವ ಉದ್ದನೆಯ ಗೆರೆ ಆರ್.ಎನ್.ಎ. ಅಣುವನ್ನು ಸಂಕೇತಿಸುತ್ತದೆ. ಇಂಗ್ಲಿಷ್ ಅಕ್ಷರಗಳು ಆರ್.ಎನ್.ಎ. ಅಣುವಿನಲ್ಲಿರುವ ನ್ಯೂಕ್ಲಿಯೋಟೈಡುಗಳ ಸರಣಿಯನ್ನು ಸೂಚಿಸುತ್ತವೆ. ಈ ಸರಣಿಯೇ ಪ್ರೋಟೀನ್ ಅಣುವಿನ ಸಂಶ್ಲೇಷಣೆಗೆ ಬೇಕಾದ ಮಾಹಿತಿ. ಈ ಸರಣಿಯನ್ನು ಎ, ಟಿ, ಜಿ, ಸಿ ಅಕ್ಷರಗಳಿಂದ ತೋರಿಸಿದೆ. ಈ ಅಕ್ಷರಗಳು ಅಡೆನಿನ್, ಥೈಮಿನ್, ಗ್ವಾನಿನ್, ಸೈಟೋಸಿನ್ ಎನ್ನುವ ನ್ಯೂಕ್ಲಿಯೋಟೈಡುಗಳ ಸಂಕೇತ. ಈ ನ್ಯೂಕ್ಲಿಯೋಟೈಡುಗಳ ಸರಣಿ ನಿರ್ದೇಶಿಸುವ ಅಮೈನೋ ಆಮ್ಲಗಳನ್ನು ರಾಸಾಯನಿಕ ಬಂಧದಿಂದ ಸೇರಿಸಿ ರೈಬೊಸೋಮುಗಳು ಪ್ರೋಟೀನ್ ಅಣುಗಳ ಸಂಶ್ಲೇಷಣೆ ನಡೆಸುತ್ತವೆ. ರೈಬೊಸೋಮ್ ಕಣ ಆರ್.ಎನ್.ಎ. ಅಣುವಿನಲ್ಲಿರುವ ಮಾಹಿತಿಯನ್ನು (ನ್ಯೂಕ್ಲಿಯೋಟೈಡುಗಳ ಸರಣಿಯನ್ನು) ಗುರುತಿಸುತ್ತಾ ಅಡ್ಡಗೆರೆಯ ಮೇಲೆ ಚಲಿಸಿದಂತೆ, ಪ್ರೋಟೀನ್ ಅಣುವಿನ (ಅಮೈನೋ ಅಮ್ಲಗಳ ಸರಣಿ) ಸಂಶ್ಲೇಷಣೆಯಾಗುತ್ತಿರುವುದನ್ನು ಚಿತ್ರದ ಮೇಲುಬಲಭಾಗದಲ್ಲಿ ನೋಡಬಹುದು.




ಕ್ಷ-ಕಿರಣಗಳನ್ನು ಬಳಸಿ ದೈತ್ಯಾಣುಗಳ ರಚನೆಯನ್ನು ನಿರ್ಧರಿಸುವ ತಂತ್ರ ೧೯೬೦ರ ದಶಕದಲ್ಲಿ ಪ್ರಾರಂಭವಾಯಿತು ಎನ್ನಬಹುದು. ಆಕ್ಸಿಜನ್ (ಆಮ್ಲಜನಕ) ಅಣುಗಳನ್ನು ಹಾಗೂ ಎಲ್ಲ ಸ್ನಾಯುಗಳಿಗೂ ತಲುಪಿಸುವ ಕ್ರಿಯೆಗಾಗಿ ವಿಕಾಸಗೊಂಡ ಮಯೋಗ್ಲಾಬಿನ್ ಮತ್ತು ಹೀಮೊಗ್ಲಾಬಿನ್ ಪ್ರೋಟೀನ್ ಅಣುಗಳ ರಚನೆಗಳನ್ನು ೧೯೬೦ರ ದಶಕದಲ್ಲಿ ಕ್ಷ-ಕಿರಣ ಸ್ಪಟಿಕ ತಂತ್ರ ಬಳಸಿ ಬಿಡಿಸಲಾಯಿತು. ಇದನ್ನು ಸಾಧಿಸಿದ ಮ್ಯಾಕ್ಸ್ ಪೆರುಟ್ಸ್ ಮತ್ತು ಜಾನ್ ಕೆಂಡ್ರೂರವರಿಗೂ ನೊಬೆಲ್ ಪಾರಿತೋಷಕ ದೊರೆತಿತ್ತು. ರೈಬೊಸೋಮಿಗೆ ಹೋಲಿಸಿದರೆ, ಮಯೋಗ್ಲಾಬಿನ್ ಮತ್ತು ಹೀಮೊಗ್ಲಾಬಿನ್ ಅಣುಗಳು ಗಾತ್ರದಲ್ಲಿ ಬಹು ಸಣ್ಣ ಅಣುಗಳು. ೧೯೬೦ರ ದಶಕದಲ್ಲಿ ತಿಳಿದಿದ್ದ ತಂತ್ರಗಳಿಂದ ರೈಬೊಸೋಮ್ ರಚನೆ ಕಂಡುಕೊಳ್ಳಲು ಸಾಧ್ಯವಿರಲಿಲ್ಲ. ನಂತರದ ದಶಕಗಳಲ್ಲಾದ ಅನೇಕ ಬೆಳವಣಿಗೆಗಳು ಇಂತಹ ದೈತ್ಯಾಣುಗಳ ರಚನೆ ಬಿಡಿಸಲು ಅಗತ್ಯ. ೧೯೮೦ರ ದಶಕದಲ್ಲಿ ಕ್ಷ-ಕಿರಣಗಳನ್ನು ಹೊರಸೂಸುವ ಹೊಸ ತಂತ್ರ ಬಳಕೆಗೆ ಬಂದಿತು. ಈ ತಂತ್ರಕ್ಕೆ ಸಿಂಕ್ರೋಟ್ರಾನ್ ಎನ್ನುತ್ತಾರೆ. ಸಿಂಕ್ರೋಟ್ರಾನ್ ಕಿಲೋಮೀಟರ್ ಗಾತ್ರದ ಯಂತ್ರ. ಇದರಲ್ಲಿ ಕಿಲೋಮೀಟರ್ ಉದ್ದವಿರುವ ನಿರ್ವಾತ ಕೊಳವೆಯಿರುತ್ತದೆ. ವರ್ತುಲಾಕಾರದ ಈ ಕೊಳವೆಯಲ್ಲಿ ಸೆಕೆಂಡಿಗೆ ಸುಮಾರು ೩ ಲಕ್ಷ ಕಿಲೋಮೀಟರ್ ವೇಗದಲ್ಲಿ (ಬೆಳಕಿನ ವೇಗದ ೯೯%) ಎಲೆಕ್ಟ್ರಾನ್ ಕಣಗಳು ಚಲಿಸುತ್ತಿರುತ್ತವೆ. ವರ್ತುಲಾಕಾರದಲ್ಲಿ ಚಲಿಸುವ ಎಲೆಕ್ಟ್ರಾನುಗಳು ಪ್ರಯೋಗಾಲಯಗಳಲ್ಲಿ ಉತ್ಪತ್ತಿ ಮಾಡಬಹುದಾದ ಕ್ಷ-ಕಿರಣಗಳಿಗಿಂತ ಸಹಸ್ರಪಟ್ಟು ಹೆಚ್ಚು ತೀವ್ರತೆ ಹೊಂದಿರುವ ಕ್ಷ-ಕಿರಣಗಳನ್ನು ಹೊರಸೂಸುತ್ತವೆ. ಈ ತೀವ್ರ ಕಿರಣಗಳು ರೈಬೊಸೋಮ್ ಗಾತ್ರದ ಅಣುರಚನೆ ಬಿಡಿಸಲು ಅಗತ್ಯ. ಆದ್ದರಿಂದಲೇ, ೨೦ ವರ್ಷಗಳ ಹಿಂದೆ ಇಂತಹ ಸಾಧನೆ ಸಾಧ್ಯವಿರಲಿಲ್ಲ. ಕ್ಷ-ಕಿರಣ ಸ್ಪಟಿಕ ತಂತ್ರಜ್ಞಾನ ಬಳಸಿ ಅಣುರಚನೆ ನಿರ್ಧರಿಸಲು ರೈಬೊಸೋಮ್ ಕಣಗಳನ್ನು ಜೀವಕೋಶಗಳಿಂದ ಹೇರಳ ಪ್ರಮಾಣದಲ್ಲಿ ಬೇರ್ಪಡಿಸಿ ಅವುಗಳನ್ನು ಸ್ಪಟಿಕೀಕರಿಸಬೇಕಾಗುತ್ತದೆ (ಕ್ರಿಸ್ಟಲೈಸೇಶನ್). ಜೀವಕೋಶಗಳಲ್ಲಿರುವ ಅನೇಕ ದೈತ್ಯಾಣುಗಳಿಗೆ ತಮ್ಮದೇ ಆದ ನಿರ್ದಿಷ್ಟ ರಚನೆ ಇರುವುದರಿಂದ ಅವುಗಳನ್ನು ಸ್ಪಟಿಕೀಕರಿಸಲು ಸಾಧ್ಯವಾಗುತ್ತದೆ. ಅನೇಕ ವರ್ಷಗಳ ಸತತ ಪ್ರಯತ್ನದ ನಂತರವೇ ರೈಬೊಸೋಮ್ ಕಣಗಳ ಸ್ಪಟಿಕಗಳನ್ನು ಪಡೆಯಲು ಸಾಧ್ಯವಾಯಿತು. ಈ ದೈತ್ಯಾಣುಗಳ ಸ್ಪಟಿಕಗಳು ಅವುಗಳ ಮೇಲೆ ಚಿಮ್ಮಿಸಿದ ಕ್ಷ-ಕಿರಣಗಳನ್ನು ಮಿಲಿಯಗಟ್ಟಲೆ ದಿಕ್ಕುಗಳಲ್ಲಿ ಚದುರಿಸುತ್ತವೆ. ರಚನೆ ನಿರ್ಧರಿಸಲು ಈ ಎಲ್ಲ ಪ್ರತಿಫಲನಗೊಂಡ ಕಿರಣಗಳ ತೀವ್ರತೆಯನ್ನು ನಿಖರವಾಗಿ ಅಳತೆ ಮಾಡಬೇಕಾಗುತ್ತದೆ. ಇದಕ್ಕೆಲ್ಲಾ ಬೇಕಾಗುವ ತಂತ್ರಜ್ಞಾನವನ್ನು ಇಪ್ಪತ್ತು ವರ್ಷಗಳಿಂದ ಅನೇಕ ಪ್ರತಿಭಾವಂತ ವಿಜ್ಞಾನಿಗಳು ಬೆಳೆಸಿದ್ದಾರೆ. ಚದುರಿದ ಕಿರಣಗಳ ತೀವ್ರತೆ ಬಳಸಿ ರಚನೆ ಕಂಡುಕೊಳ್ಳಲು ಊಹೆಗೂ ನಿಲುಕದಷ್ಟು ಗಣಿತ ಮಾಡಬೇಕಾಗುತ್ತದೆ. ಆದ್ದರಿಂದ ಆಧುನಿಕ ಕಂಪ್ಯೂಟರ್ ತಂತ್ರಜ್ಞಾನದ ಸಹಾಯ ಇಲ್ಲದಿದ್ದರೆ, ರೈಬೊಸೋಮುಗಳ ರಚನೆಯನ್ನು ಬಿಡಿಸಲಾಗುತ್ತಿರಲಿಲ್ಲ. ಸಿಂಕ್ರೋಟ್ರಾನ್ ಕಿರಣಗಳು ಸ್ಪಟಿಕಗಳಿಗೆ ಹಾನಿಕರ. ಅವುಗಳಿಗೆ ಒಡ್ಡಿದಾಗಲೂ ಸ್ಪಟಿಕಗಳು ತಮ್ಮ ರಚನೆ ಕಳೆದುಕೊಳ್ಳದಿರಲು ಪ್ರಯೋಗಗಳನ್ನು - ೧೫೦ ಡಿಗ್ರಿ ಸೆಂಟಿಗ್ರೇಡ್ (ಕ್ರಯೋಜೆನಿಕ್ ತಾಪಮಾನ) ಉಷ್ಣತೆಯಲ್ಲಿ ನಡೆಸಬೇಕಾಗುತ್ತದೆ. ಈ ತಂತ್ರವೂ ಕಳೆದ ಇಪ್ಪತ್ತು ವರ್ಷಗಳಿಂದ ಮಾತ್ರ ಲಭ್ಯವಾಗಿದೆ. ಕ್ಷ-ಕಿರಣ ತಂತ್ರಜ್ಞಾನದ ಬೆಳವಣಿಗೆಗೆ ಭಾರತದಲ್ಲೇ ಕೆಲಸಮಾಡಿದ ರಾಮಚಂದ್ರನ್, ರಾಮಶೇಷನ್, ಶ್ರೀನಿವಾಸನ್, ಪಾರ್ಥಸಾರಥಿ ಮುಂತಾದವರ ಕೊಡುಗೆಯೂ ಗಮನಾರ್ಹವಾಗಿದೆ.

ರೈಬೊಸೋಮ್ ಅಣುಗಳಂತಹ ದೈತ್ಯಾಣುಗಳನ್ನು ಸ್ಪಟಿಕೀಕರಿಸುವುದು ಸುಲಭದ ಕೆಲಸವಲ್ಲ. ಈ ಸ್ಪಟಿಕೀಕರಿಸಿದ ಕೀರ್ತಿ ನಿಜವಾಗಿ ಇಸ್ರೇಲಿನ ಆಡಾ ಯೋನಾತ್ ಅವರಿಗೆ ಸಲ್ಲಬೇಕು. ಆಡಾ ಯೋನಾತರು ೧೯೮೦ರ ದಶಕದಲ್ಲೇ ರೈಬೊಸೋಂ ಅಣುಗಳನ್ನು ಸ್ಪಟಿಕೀಕರಿಸುವ ಮಹತ್ವಾಕಾಂಕ್ಷೆಯ ಸಂಶೋಧನೆಯನ್ನು ಪ್ರಾರಂಭಿಸಿದರು. ಮೊದಲ ಹತ್ತು ವರ್ಷಗಳು ಅವರಿಗೆ ಬರೀ ನಿರಾಸೆ, ಅಪಜಯಗಳೇ ಕಾದಿದ್ದವು. ನಂತರ ೧೯೯೦ರ ದಶಕದಲ್ಲಿ ಅವರು ತಮ್ಮ ಪ್ರಯತ್ನದಲ್ಲಿ ಜಯಶೀಲರಾದರು. ಕ್ಷಿಪ್ರದಲ್ಲೇ ಟಾಂ ಸ್ಟೈಟ್ಸ್ ಮತ್ತು ವೆಂಕಿ ರಾಮಕೃಷ್ಣನ್ನರು ರೈಬೊಸೋಮ್ ರಚನೆ ನಿರ್ಧರಿಸುವ ಓಟದಲ್ಲಿ ಆಡಾ ಯೋನಾತರ ಜೊತೆ ಸ್ಪರ್ಧಿಸತೊಡಗಿದರು. ಮೂರು ಗುಂಪುಗಳಿಗೂ ಯಶ ಸುಮಾರು ಒಂದೇ ಕಾಲದಲ್ಲಿ ದೊರೆತರೂ, ಆಡಾ ಯೋನಾತರಿಗಿಂತ ವೆಂಕಿ ರಾಮಕೃಷ್ಣನ್, ಟಾಂ ಸ್ಟೈಟ್ಸ್ ಮುಂದಿದ್ದರು ಎಂದೇ ಹೇಳಬಹುದು. ಈ ಮೂವರೂ ನಿರ್ಧರಿಸಿದ ರೈಬೊಸೋಮ್ ಸಣ್ಣ ಮತ್ತು ದೊಡ್ಡ ಕಣಗಳ ಸರಳೀಕೃತ ರಚನೆಯನ್ನು ಮುಂದಿನ ಚಿತ್ರದಲ್ಲಿ ತೋರಿಸಿದೆ. ರೈಬೊಸೋಮ್ ಕಣ ಪರಮಾಣುಗಳ ಗೊಂಡಾರಣ್ಯ. ಎಲ್ಲ ಪರಮಾಣುಗಳನ್ನೂ ತೋರಿಸಿದರೆ, ಅದರ ರಚನೆಯ ಬಗ್ಗೆ ಏನೂ ಸ್ಪಷ್ಟವಾಗಲಾರದು. ಆದ್ದರಿಂದ, ಈ ಚಿತ್ರಗಳಲ್ಲಿ ರೈಬೊಸೋಮ್ ಅಣುವಿನಲ್ಲಿರುವ ಪ್ರೋಟೀನ್ ಮತ್ತು ಆರ್.ಎನ್.ಎ. ಸರಪಳಿಗಳ ಆಕಾರ ಮಾತ್ರ ತೋರಿಸಿದೆ.

ಕಳೆದ ವರ್ಷ ವೆಂಕಿ ರಾಮಕೃಷ್ಣನ್ನರನ್ನು ನಮ್ಮ ದೇಶದ ವಿಜ್ಞಾನ ಪರಿಷತ್ತಿಗೆ







(ಇಂಡಿಯನ್ ನ್ಯಾಶನಲ್ ಸೈನ್ಸ್ ಅಕಾಡೆಮಿ) ಹೊರದೇಶದ ಫೆಲೋ ಆಗಿ ಆಯ್ಕೆ ಮಾಡಲಾಯಿತು. (ವೆಂಕಿ ರಾಮಕೃಷ್ಣನ್ನರು ಭಾರತೀಯ ಮೂಲದವರೇ ಆದರೂ ಅಮೆರಿಕಾದ ಪ್ರಜೆಯಾಗಿದ್ದಾರೆ). ಆದ್ದರಿಂದ ವಿದೇಶಿಯರು ಮಣೆ ಹಾಕಿದರೆ ಮಾತ್ರ ನಾವು ಗೌರವ ತೋರುತ್ತೇವೆ ಎಂಬ ಅಪಮಾನ ನಮ್ಮ ಮೇಲಿಲ್ಲ. ಪ್ರಸಿದ್ಧ ವಿಜ್ಞಾನಿ ಜಿ. ಎನ್. ರಾಮಚಂದ್ರನ್ ಅವರ ಹೆಸರಿನಲ್ಲಿ ಪ್ರಪಂಚದ ಮೇಧಾವಿ ಪ್ರೊಫೆಸರರನ್ನು ನಮ್ಮ ಸಂಸ್ಥೆಗೆ ಆಹ್ವಾನಿಸಲು ಅವಕಾಶವಿದೆ. ಈ ಆಹ್ವಾನಕ್ಕೆ ಅಮೆರಿಕಾದಲ್ಲಿ ವಿಜ್ಞಾನಿಯಾಗಿರುವ ಜಾನ್ ಕುರಿಯನ್ ಮತ್ತು ವೆಂಕಿ ರಾಮಕೃಷ್ಣನ್ನರ ಹೆಸರುಗಳನ್ನು ಕಳೆದ ವರ್ಷ ಸೂಚಿಸಲಾಗಿತ್ತು. ಕಡೆಗೆ ಆಹ್ವಾನ ಕೊಟ್ಟದ್ದು ವೆಂಕಿ ರಾಮಕೃಷ್ಣನ್ನರಿಗೆ. ಇದಕ್ಕೆ ಕಾರಣ ಅವರ ಉತ್ತಮ ಸಂಶೋಧನೆ ಮಾತ್ರ ಅಲ್ಲ, ಅವರ ಸರಳತೆ, ಸಜ್ಜನಿಕೆಯೂ ಕಾರಣವಾಗಿತ್ತು.

ನಮ್ಮ ದೇಶದ ಜಿ. ಎನ್. ರಾಮಚಂದ್ರನ್ನರು ಈ ವರ್ಷ ನೊಬೆಲ್ ಪಾರಿತೋಷಕ ಪಡೆದ ವಿಜ್ಞಾನಿಗಳಿಗಿಂತ ಹೆಚ್ಚಿನ ಮೇಧಾವಿಗಳು. ಅವರ ಸಾಧನೆಯೂ ಹೆಚ್ಚಿನ ಸ್ವಂತಿಕೆ ಹೊಂದಿತ್ತು. ಆದರೂ ಅವರಿಗೆ ನೊಬೆಲ್ ಪ್ರಶಸ್ತಿ ಲಭಿಸಲಿಲ್ಲ. ರಾಮಚಂದ್ರನ್ನರ ಸಂಶೋಧನೆಯ ವಿಷಯಗಳು ರೈಬೋಸೋಮ್ ರಚನೆಯಷ್ಟು ಪ್ರಮುಖವಾಗಿರಲಿಲ್ಲ. ಆದ್ದರಿಂದ ಇಂತಹ ಗೌರವ ದೊರಕಲು ಪ್ರತಿಭಾಶಕ್ತಿಯ ಜೊತೆಗೇ, ಸೂಕ್ತ ಕಾಲದಲ್ಲಿ, ಸೂಕ್ತ ವಿಷಯದ ಬಗ್ಗೆ ಸಂಶೋಧನೆ ಕೈಗೊಳ್ಳುವ ಅದೃಷ್ಟವೂ ಇರಬೇಕು.

ವೆಂಕಿ ರಾಮಕೃಷ್ಣನ್ನರಿಗೆ ನೊಬೆಲ್ ಪಾರಿತೋಷಕ ದೊರೆತಿರುವುದು ನಮಗೆಲ್ಲ ಬಹು ಹೆಮ್ಮೆಯ, ಸಂತೋಷದ ವಿಷಯ. ಜೊತೆಗೇ ಈ ವರ್ಷ ಪಾರಿತೋಷಕ ಪಡೆದವರಲ್ಲಿ ಮಹಿಳೆಯೂ ಸೇರಿರುವುದು ಇನ್ನೂ ಹೆಚ್ಚಿನ ಸಂತೋಷಕ್ಕೆ ಕಾರಣವಾಗಿದೆ. ಇದರಿಂದ ನಮ್ಮ ದೇಶದ ಯುವ ವಿಜ್ಞಾನಿಗಳಿಗೆಲ್ಲ ಸ್ಫೂರ್ತಿ ದೊರೆಯಲೆಂದು ಆಶಿಸೋಣ.

ಪ್ರೊ॥ ಎಮ್. ಆರ್. ಎನ್. ಮೂರ್ತಿ
ಮಾಲಿಕ್ಯುಲರ್ ಬಯೋಫಿಸಿಕ್ಸ್ ಯೂನಿಟ್, ಟಾಟಾ ವಿಜ್ಞಾನ ಸಂಸ್ಥೆ
ಬೆಂಗಳೂರು - ೫೬೦ ೦೧೨

## ಸಾದರ ಸ್ವೀಕಾರ

**ಇದು ದಿಲ್ಲೀ ! ಇದು ದೆಹಲಿ !** ಆಗುಂಬೆ ಎಸ್. ನಟರಾಜ್
ಪುಟ : ೧೯೨ ಬೆಲೆ : ರೂ. ೧೨೫

**ದಿಲ್ಲಿಯಿಂದ ತಾಮ್ಡೀ ಸುರ್ಲಾಗೆ** ಆಗುಂಬೆ ಎಸ್. ನಟರಾಜ್
ಪುಟ : ೧೨೦ ಬೆಲೆ : ರೂ. ೭೦

**ಜೀವನ ಚರಿತ್ರಾವಳಿ** (ಭಾಗ - ೩) ಆಗುಂಬೆ ಎಸ್. ನಟರಾಜ್
ಪುಟ : ೧೯೨ ಬೆಲೆ : ರೂ. ೬೦

ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು
**ಹಂಸ ಪ್ರಕಾಶನ**, ನಂ. ೯೪೭, ಮೂರನೇ ಮುಖ್ಯರಸ್ತೆ, ವಿಜಯನಗರ, ಬೆಂಗಳೂರು - ೫೬೦ ೦೪೦

**ಮುಬ್ಬಿನ ಹಾಗೆ ಕಣಿವೆಯಾಸಿ** (ಕವನ ಸಂಕಲನ)
ಎಚ್. ಎಸ್. ಶಿವಪ್ರಕಾಶ
ಪುಟ : ೯೬ ಬೆಲೆ : ರೂ. ೫೦

**ಇಂದಿನ ಕನ್ನಡ : ರಚನೆ ಮತ್ತು ಬಳಕೆ** ಎಸ್. ಎನ್. ಶ್ರೀಧರ್
ಪುಟ : ೧೭೬ ಬೆಲೆ : ರೂ. ೧೦೦

**ಕನ್ನಡ ಕಾದಂಬರಿ ಲೋಕದಲ್ಲಿ... ಹೀಗೆ ಹಲವು ...**
ಪ್ರ. ಸಂ. : ಮೈ. ಶ್ರೀ. ನಟರಾಜ
ಪುಟ : ೪೨೮ ಬೆಲೆ : ರೂ. ೨೫೦

ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು
**ಅಭಿನವ**, ೧೭/೧೮-೨, ಮೊದಲನೆಯ ಮುಖ್ಯರಸ್ತೆ, ಮಾರೇನಹಳ್ಳಿ, ವಿಜಯನಗರ, ಬೆಂಗಳೂರು - ೪೦

**ನೆಲದ ಪಿಸುಮಾತು** (ಲೇಖನ ಸಂಕಲನ) ನೀಲಾ ಕೆ.
ಪುಟ : ೧೦೨ ಬೆಲೆ : ರೂ. ೬೦
**ಚಿಂತನ ಪುಸ್ತಕ ಮಳಿಗೆ**, ಪಂಡಿತ್ ಸಾರ್ವಜನಿಕ ಲೈಬ್ರರಿ, ಶಿರಸಿ, ಉತ್ತರ ಕನ್ನಡ ಜಿಲ್ಲೆ - ೫೮೧ ೪೦೧

**ನಾವು ಮತ್ತು ನಮ್ಮ ಮನಸ್ಸು** ಶಾಂತಾರಾಮ ಸೋಮಯಾಜಿ
ಪುಟ : ೧೬೪ ಬೆಲೆ : ರೂ. ೧೦೦

**ಇಂಗ್ಲಂಡಿನಲ್ಲಿ ಒಂದೇ ಏಸೊಂದು** (ಏಕಪದಿ ಸಂಕಲನ)
ದೇಶಪಾಂಡೆ ಸುಬ್ಬರಾಯ
ಪುಟ : ೭೨ ಬೆಲೆ : ರೂ. ೪೫

**ಮೋರೆಯಾಚೆಯ ಮುಖ** (ಕವನ ಸಂಗ್ರಹ)
ದೇಶಪಾಂಡೆ ಸುಬ್ಬರಾಯ
ಪುಟ : ೧೨೯ ಬೆಲೆ : ರೂ. ೮೦

ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು
**ಸುಮುಖ ಪ್ರಕಾಶನ**, ೧೭೪ಇ/೨೮, ೧ನೇ ಮಹಡಿ, ೧ನೇ ಮುಖ್ಯರಸ್ತೆ, ವಿದ್ಯಾರಣ್ಯನಗರ, ಮಾಗಡಿ ರಸ್ತೆ, ಟೋಲ್‌ಗೇಟ್, ಬೆಂಗಳೂರು - ೫೬೦ ೦೨೩

**ಪ್ಯಾರಿಸ್‌ನಲ್ಲಿ ಅನ್ನಾವತಾರ** (ಕವನ ಸಂಕಲನ)
ದೇಶಪಾಂಡೆ ಸುಬ್ಬರಾಯ
ಪುಟ : ೧೩೨ ಬೆಲೆ : ರೂ. ೮೦

**ಅಮೆರಿಕೆಯಲ್ಲಿ ಸಾಧನಕೇರಿ** (ಕವನ ಸಂಕಲನ)
ದೇಶಪಾಂಡೆ ಸುಬ್ಬರಾಯ
ಪುಟ : ೮೮ ಬೆಲೆ : ರೂ. ೬೦

ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ತನು ಮನು ಪ್ರಕಾಶನ**, 'ಕಾವ್ಯಲೋಕ' ೧೨೬೭, ಹೆಚ್.ಐ.ಜಿ., ೧ನೇ ಕ್ರಾಸ್, ೨೫ನೇ ಹಂತ, ಶ್ರೀರಾಂಪುರ ಬಡಾವಣೆ, ಮೈಸೂರು - ೫೭೦ ೦೨೩

**ಸಖಿ-ಸಖ** (ಹನಿಗವನಗಳು) ಎ. ಎಸ್. ಮಕಾನದಾರ
ಪುಟ : ೯೬ ಬೆಲೆ : ರೂ. ೭೫

**ಬೆಳಕಿನ ಹಾಡು** (ಕವನ ಸಂಕಲನ)
ಸಂ. : ಎ. ಎಸ್. ಮಕಾನದಾರ
ಪುಟ : ೬೪ ಬೆಲೆ : ರೂ. ೪೦

ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ನಿರಂತರ ಪ್ರಕಾಶನ**, ಮಾಸೂಮ್-ಮಂಜಿಲ್ ಟಕ್ಕೇದ ಓಣಿ, ಗಜೇಂದ್ರಗಡ - ೫೮೨ ೧೧೪ (ಗದಗ ಜಿಲ್ಲೆ)

**'ಮಹಾದೇವ ಬಾಬಾ' ಮೆಡೋಸ್ ಟೇಲರ್**
ಸಂ. : ದೇವು ಪತ್ತಾರ
ಪುಟ : ೧೨೦ ಬೆಲೆ : ರೂ. ನಮೂದಿಸಿಲ್ಲ
**ನಿರ್ದೇಶಕರು**, ವಾರ್ತಾ ಇಲಾಖೆ, ಇನ್‌ಫೆಂಟ್ರಿ ರಸ್ತೆ, ಕರ್ನಾಟಕ ಸರ್ಕಾರ

**ಮೂಗಿಯ ಮನಸ್ಸು ಮತ್ತು ಇತರ ಕಥೆಗಳು**
ಎಂ. ನವೀನ್‌ಕುಮಾರ್ ತೀರ್ಥಹಳ್ಳಿ
ಪುಟ : ೮೯ ಬೆಲೆ : ರೂ. ೩೨
**ಕನ್ನಡ ಸಾಹಿತ್ಯ ಪರಿಷತ್ತು**, ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು - ೫೬೦ ೦೧೮

**ಬಯಕೆ ತೋಟದ ಬೇಲಿ** (ಲೇಖನ ಸಂಕಲನ)
ಡಾ॥ ಶ್ರೀಪಾದ ಶೆಟ್ಟಿ
ಪುಟ : ೨೭೬ ಬೆಲೆ : ರೂ. ೧೬೦
**ಗೌತಮಿ ಪ್ರಕಾಶನ**, ಸುನಾದ, ಪ್ರಭಾತ ನಗರ, ಹೊನ್ನಾವರ - ೫೮೧ ೩೩೪

**ಕಾಲಿಗೆ ಚಕ್ರ, ಕನಸಿಗೆ ಕಣ್ಣು ಟೂರ್ ಟೈಮ್**
ಶ್ರೀನಿವಾಸ ಜೋಕಟ್ಟೆ
ಪುಟ : ೧೮೩ ಬೆಲೆ : ರೂ. ೧೫೦
**ಅಭಿಜಿತ್ ಪ್ರಕಾಶನ**, ಎ/೪೦೪, ವಿನಾಯಕ ಆಶೀಷ್, ಎಂ.ಎಂ.ಎಂ. ರೋಡ್, ಪಿ ಅಂಡ್ ಟಿ ಕಾಲೋನಿ ಸಮೀಪ, ಮುಲಂಡ್ (ಪ), ಮುಂಬಯಿ - ೪೦೦ ೦೮೦

**ಡಾ॥ ಕ್ರಿಶ್ಚಿಯಾನ್ ಬರ್ನಾರ್ಡ್** (ಜೀವನ ಚರಿತ್ರೆ)
ಡಾ॥ ಎಚ್. ಡಿ. ಚಂದ್ರಪ್ಪ ಗೌಡ
ಪುಟ : ೧೫೬ ಬೆಲೆ : ರೂ. ೧೨೦
**ಡಾ॥ ಪಿ. ಎಸ್. ಶಂಕರ್ ಪ್ರತಿಷ್ಠಾನ**, ಗುಲಬರ್ಗಾ

**ಗೆಲುವೆನೆಂಬ ಭಾಷೆ...** (ಕವನ ಸಂಕಲನ) ಶ್ರೀ ನಿರುಪಾಧೀಶ
ಪುಟ : ೯೬ ಬೆಲೆ : ರೂ. ೫೦

**ಬಯಲಾಳ** (ಕವನಗಳು) ಶ್ರೀ ನಿರುಪಾಧೀಶ
ಪುಟ : ೨೧೬ ಬೆಲೆ : ರೂ. ೧೨೫

**ತ್ರಿವೇಣಿ** (ಕವನಗಳು) ಶ್ರೀ ನಿರುಪಾಧೀಶ
ಪುಟ : ೧೧೬ ಬೆಲೆ : ರೂ. ೬೦

**ಆತ್ಮದ ಅಂಚೆ** (ಆತ್ಮಚಿತ್ರ) ಶ್ರೀ ನಿರುಪಾಧೀಶ
ಪುಟ : ೨೨೨ ಬೆಲೆ : ರೂ. ೧೨೫

ಮೇಲಿನ ನಾಲ್ಕು ಪುಸ್ತಕಗಳ ಪ್ರಕಾಶಕರು
**ಅಡವೀಶ ಪ್ರಕಾಶನ**, ಮರೆಗುದ್ದಿ - ೫೮೭ ೧೨೧, ಜಿ. ಬಾಗಲಕೋಟೆ



## ನಭಾವಲೋಕನ

# ಉಲ್ಕಾವೃಷ್ಟಿಯ ದೀಪಾವಳಿ

ನವೆಂಬರ್ ಎಂದರೆ ಲಿಯೋನಿಡ್ ಉಲ್ಕಾವೃಷ್ಟಿ ನೆನಪಾಗುವುದು. ಪ್ರತಿ ನವೆಂಬರ್‌ನಲ್ಲಿ ೩೦ರಿಂದ ನೂರು ಉಲ್ಕೆಗಳನ್ನು ಸುರಿಸುವ ಈ ವೃಷ್ಟಿಗಾಗಿ ಕಾತುರದಿಂದ ಕಾಯುವ ಹವ್ಯಾಸಿ ವೀಕ್ಷಕರಿಗೆ ಈ ಬಾರಿ ನಿರಾಶೆಯಾಗುವುದಿಲ್ಲ; ಏಕೆಂದರೆ ಚಂದ್ರನ ಕಾಟ ಇಲ್ಲ. ಶುಭ್ರ ಆಕಾಶದ ಸಾಧ್ಯತೆಯೂ ಇದೆ. ಕುಂಭ ದ್ರೋಣ ಮಳೆ ಸುರಿಸಿದ ಮೋಡಗಳು ಆಗ್ಗೆ ಸುಮ್ಮನಾಗಬಹುದು. ೧೬, ೧೭ ಮತ್ತು ೧೮ ಈ ಅವಧಿಯಲ್ಲಿ ಬೆಳಗಿನ ಜಾವ ಗಮನಿಸಿದಿರಾದರೆ ೩೦-೪೦ ಉಲ್ಕೆಗಳು ಕಾಣುವ ಸಾಧ್ಯತೆ ಇದೆ. ವೃಷ್ಟಿಯನ್ನು ಅಧ್ಯಯನ ಮಾಡಿರುವ ವಿಜ್ಞಾನಿಗಳು ಈ ಮೂರು ದಿನಗಳಲ್ಲಿ ಉಲ್ಕಾವೃಷ್ಟಿ ಗರಿಷ್ಠ ಮುಟ್ಟುವ ಸಾಧ್ಯತೆ ಎರಡು ಬಾರಿ ಇದೆ ಎಂದೂ ಲೆಕ್ಕ ಮಾಡಿದ್ದಾರೆ.

ಡಿಸೆಂಬರ್ ೧ರ ಸಂಜೆ ಚಂದ್ರನನ್ನು ಮರೆಯದೇ ಗಮನಿಸಿ.

ಶುಭ್ರ ಆಕಾಶದಿಂದ ಉತ್ತೇಜಿತರಾದವರು ಮುಸುಕಿಟ್ಟ ದೂರದರ್ಶಕಗಳನ್ನು ತೆರೆದು ಕೃಷ್ಣವೇಣಿ (ಕೋಮಾ ಬೆರೆನ್ಸೀಸ್) ಪುಂಜದ ಗೆಲಾಕ್ಸಿಗಳನ್ನು ಮರೆಯದೆ ಹುಡುಕಿ. ಹೊಸದೊಂದು ಗೆಲಾಕ್ಸಿ ಕಾಣಬಹುದು - ಅದು ಗೆಲಾಕ್ಸಿಯಲ್ಲ; ಧೂಮಕೇತು - ಸಿ ೨೦೦೭ ಕ್ಯೂ ೩ ಎಂಬ ಸಂಖ್ಯೆಯದು.

ಸಂಜೆಯ ಆಕಾಶದಲ್ಲಿ ಕಾಣುವ ಗುರುಗ್ರಹವನ್ನು ಹುಡುಕಲು ನಕ್ಷೆ ಬೇಕಿಲ್ಲ; ಆದರೆ ಅದರ ಅಕ್ಕಪಕ್ಕದ ನಕ್ಷತ್ರಪುಂಜಗಳನ್ನು ಹುಡುಕಲು ಬೇಕು. ಆಕಾಶದ ಈ ಭಾಗದಲ್ಲಿ ಹೆಚ್ಚು ಪ್ರಕಾಶಮಾನ ನಕ್ಷತ್ರಗಳೇನೂ ಇಲ್ಲ. ದಕ್ಷಿಣದಲ್ಲಿ ಎದ್ದು ಕಾಣುವ ಎರಡು ನಕ್ಷತ್ರಗಳು ಬಕ (ಗ್ರುಸ್) ಎಂಬ ಪುಂಜಕ್ಕೆ ಸೇರಿವೆ. ಆಕಾಶಗಂಗೆಯ ಜಾಡನ್ನು ಹುಡುಕಲು ಈಗ ಒಳ್ಳೆಯ ಅವಕಾಶ. ವೃಶ್ಚಿಕದ ಸೊಬಗು ಸಂಧ್ಯಾಪ್ರಕಾಶದಲ್ಲಿ ಕಳೆದುಹೋಗುತ್ತಿದೆ. ಆದರೆ ರಾಜಹಂಸ, ಗರುಡ ಮತ್ತು ವೀಣಾ ನಡುವೆ ಹಾದು ಕುಂತಿಯತ್ತ ಸಾಗುವ ಭಾಗ ಈಗ ಸ್ಪಷ್ಟವಾಗಿ ಕಾಣುತ್ತಿದೆ. ನೆತ್ತಿಯ ಮೇಲೆ ಗುರುಗ್ರಹದ ಹೊರತಾಗಿ ಬೇರೇನೂ ಪ್ರಕಾಶಮಾನವಾದ ಕಾಯವೇ ಇಲ್ಲವೇನೋ ಎನ್ನಿಸುತ್ತದೆ. ಸ್ವಲ್ಪ ಪಕ್ಕಕ್ಕೆ ಚೌಕಾಕಾರದ ನಕುಲ ಕಾಣುತ್ತದೆ. ಪೂರ್ವದ ಅಂಚಿನಲ್ಲಿ ವೃಷಭದ ನಕ್ಷತ್ರಗುಚ್ಛ ಕೃತ್ತಿಕಾ ಕಾಣುತ್ತದೆ. ಒಂದೆರಡು ಗಂಟೆಗಳ ನಂತರ ಮೇಲೇರಿದಾಗ ಇದರ ಪೂರ್ಣ ನೋಟ ಸಿಗುತ್ತದೆ. ಈ ತಿಂಗಳ ೪ರಂದು ಚಂದ್ರ ಇದರ ಪಕ್ಕದಲ್ಲಿಯೇ ಕಾಣುತ್ತದೆ. ಹೀಗೆ ಕೃತ್ತಿಕೆಯನ್ನು ಗುರುತು ಮಾಡಿಕೊಂಡು ಡಿಸೆಂಬರ್ ೧ರ ಸಂಜೆ ಮರೆಯದೇ ನೋಡಿ. ಚಂದ್ರನ ಹಿಂದೆ ಈ ನಕ್ಷತ್ರಗಳು ಮರೆಯಾಗಿರುತ್ತವೆ. ಸುಮಾರು ೬:೩೦ರಿಂದ ೮:೩೦ರವರೆಗೆ ಒಂದೊಂದಾಗಿ ನಕ್ಷತ್ರಗಳು ಮಾಯವಾಗಿ ಪುನಃ ಕಾಣುತ್ತವೆ.

ಬೆಳಗಿನ ಜಾವ ಮಂಗಳ, ಶುಕ್ರ ಮತ್ತು ಶನಿ ಈ ಮೂರೂ ಗ್ರಹಗಳು ಕಾಣುವುವು. ತಿಂಗಳ ಮೊದಲ ವಾರದಲ್ಲಿ ಮಂಗಳವನ್ನು ಗಮನಿಸಿ ನೋಡಿದಾಗ ಅದರ ಹಿನ್ನೆಲೆಯಲ್ಲಿ ಪ್ರೆಸಿಪಿ ಎಂಬ ನಕ್ಷತ್ರಗುಚ್ಛ ಕಾಣುವುದು. ದುರ್ಬೀನಿನಿಂದ ನೋಡಲು, ಛಾಯಾಗ್ರಹಣ ಮಾಡಲು ಇದು ಒಳ್ಳೆಯ ಅವಕಾಶ. ಕಳೆದ ತಿಂಗಳಲ್ಲಿ ಶನಿಯ ಜೊತೆಗೂಡಿದ್ದ ಶುಕ್ರ ಈಗ ಮುಂದೆ ಮುಂದೆ ಓಡಿ ತಿಂಗಳ ಕೊನೆಗೆ ಸಂಧ್ಯಾಪ್ರಕಾಶದಲ್ಲಿ ಬೆರೆತು ಹೋಗುವುದು. ಬುಧ ಕಾಣುವ ಸಾಧ್ಯತೆ ಇಲ್ಲ. ಸೂರ್ಯನ ಆಸುಪಾಸಿನಲ್ಲೇ ಇರುವುದು.

ಉ
ಪೂ
ಪ
ದ
ಕುಂತಿ
ಯುಧಿಷ್ಠಿರ
ಪಾರ್ಥ
ವೀಣಾ
ದ್ರೌಪದಿ
ಭೀಮ
ರಾಜಹಂಸ
ಮೇಷ
ನಕುಲ
ಮೀನ
ಗರುಡ
ತಿಮಿಂಗಿಲ
ಕುಂಭ
ಗುರು
ಮಕರ
ಧನು
ಬಕ
ಸಿಂಧೂ

### ಖಗೋಳ ದಿನಚರಿ

೨ ಚಿತ್ರಾ ನಕ್ಷತ್ರದ ಪಕ್ಕ ಶುಕ್ರ*
೩ ಹುಣ್ಣಿಮೆ ೦೦:೪೪ಕ್ಕೆ
೪ ಚಂದ್ರ ಕೃತ್ತಿಕಾ ಜೋಡಿ* (ಆಚ್ಛಾದನೆ ಸುಮಾರು ೦೬:೩೦ರಿಂದ ೦೮:೩೦ರವರೆಗೆ)
೫ ಬುಧ ಗ್ರಹದ ಯುತಿ
೭ ಚಂದ್ರ - ಭೂಮಿ ನಡುವೆ ಕನಿಷ್ಠ ದೂರ
೯ ಮಂಗಳ ಚಂದ್ರ ಜೋಡಿ*; ಚಾಂದ್ರಮಾಸದ ಕೊನೆಯ ಪಾದ
೧೩ ಚಂದ್ರ - ಶನಿ ಜೋಡಿ*
೧೫ ಚಂದ್ರ - ಶುಕ್ರ ಜೋಡಿ*
೧೭ ಅಮಾವಾಸ್ಯೆ ೦೦:೪೪ಕ್ಕೆ; ಲಿಯೋನಿಡ್ ಉಲ್ಕಾವೃಷ್ಟಿ
೨೨ ಚಂದ್ರ - ಭೂಮಿ ನಡುವೆ ಗರಿಷ್ಠ ದೂರ
೨೩ ಚಂದ್ರ - ಗುರು ಜೋಡಿ*
೨೪ ಚಾಂದ್ರಮಾಸದ ಮೊದಲ ಪಾದ
ಡಿ. ೧ ಕೃತ್ತಿಕಾ ಆಚ್ಛಾದನೆ ಸಂಜೆ *
(* ಛಾಯಾಗ್ರಹಣಕ್ಕೆ ಸದವಕಾಶ)



ಡಿಸೆಂಬರ್ ೧ರ ಸಂಜೆ ಕೃತ್ತಿಕಾ ಆಚ್ಛಾದನೆ



೪ರ ಸಂಜೆ ಜೋಡಿನ ಕೃತ್ತಿಕಾಗಳ ನಡುವೆ ಚಂದ್ರ

ಡಾ॥ ಬಿ. ಎಸ್. ಶೈಲಜಾ
ಜವಹರಲಾಲ್ ನೆಹರೂ ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು - ೫೬೦ ೦೦೧




# ಒಬಾಮಾ ಆರೋಗ್ಯ ಸೇವಾ ಸುಧಾರಣೆ ಇಕ್ಕಟ್ಟಿನಲ್ಲಿ

**ಅ**ಮೆರಿಕಾದ ಅಧ್ಯಕ್ಷ ಬರಾಕ್ ಒಬಾಮಾ ಕಿರೀಟಕ್ಕೆ ಈಗ ನೊಬೆಲ್ ಪುರಸ್ಕಾರದ ಗರಿ. ಇದು ಅವರಿಗೆ ಎಷ್ಟು ಮಟ್ಟಿಗೆ ಒಪ್ಪುತ್ತದೆ ಎನ್ನುವುದು ಬೇರೆ ಮಾತು. ಮಾಡದಿರುವ ಸಾಧನೆಗಳಿಗಾಗಿ, ಸವಿನುಡಿಯ ಆಶ್ವಾಸನೆಗಳಿಗಾಗಿ, ಸದಾಶಯಗಳಿಗಾಗಿ ಈ ಪುರಸ್ಕಾರ ಒಬಾಮಾಗೆ ಲಭಿಸಿದೆ ಎಂಬುದರಲ್ಲಿ ಸಂದೇಹವಿಲ್ಲ. ನೊಬೆಲ್ ಸಮಿತಿ ಯಾವ ಮಾನದಂಡಗಳನ್ನು ಇರಿಸಿಕೊಂಡು ಶಾಂತಿ ಪುರಸ್ಕಾರ ನೀಡಿದೆಯೋ ಅದು ಅದರ ಸದಸ್ಯರಿಗೇ ತಿಳಿಯಬೇಕು. ಇದು ಕೇವಲ ರಾಜಕೀಯ ಪ್ರೇರಿತ, ಅಪಕ್ವ ತೀರ್ಮಾನ ಎನ್ನುವುದಂತೂ ನಿಜ. ನೊಬೆಲ್ ಶಾಂತಿ ಪುರಸ್ಕಾರ ಬಹುಮಟ್ಟಿಗೆ ರಾಜಕೀಯ ಲೇಪದಿಂದ ಕೂಡಿದ್ದಾಗಿದೆ, ವಿವಾದಾತ್ಮಕವಾಗಿದೆ, ಅನರ್ಹರಿಗೆ ದೊರೆತಿದೆ ಎಂಬ ಅಪವಾದಕ್ಕೆ ಇನ್ನೊಂದು ಪುರಾವೆ ಸೇರಿದಂತಾಗಿದೆ ಈಗ. ಎಂಟು ವರ್ಷಗಳ ಜಾರ್ಜ್ ಬುಷ್ ಆಡಳಿತದ ದುಸ್ಸಾಹಸ, ದುರಾಕ್ರಮಣಗಳ ಪರಿಣಾಮದ ಹಿನ್ನೆಲೆಯಲ್ಲಿ, ಆರ್ಥಿಕ ಕುಸಿತದ ಅವಾಂತರದಲ್ಲಿ ಅಧಿಕಾರಕ್ಕೇರಿದ ಒಬಾಮಾರ ಸದುದ್ದೇಶಗಳು ಏನೇ ಇದ್ದರೂ ಅವರ ಸಾಧನೆಯನ್ನು ಅಂದಾಜು ಮಾಡಲೂ ಸಹ ಎಂಟು-ಹತ್ತು ತಿಂಗಳು ಏನೂ ಸಾಲದು. ಅದರಲ್ಲೂ ಪಟ್ಟಭದ್ರ ಹಿತಾಸಕ್ತಿಗಳು, ಮಿಲಿಟರಿ ಕೈಗಾರಿಕಾ ಸಂಕೀರ್ಣ ಹಾಗೂ ಬಹುರಾಷ್ಟ್ರೀಯ ಕಂಪೆನಿಗಳು ಮತ್ತು ಕಾರ್ಪೊರೇಟ್‌ಗಳ ಹಿಡಿತದಿಂದ ಬಿಡಿಸಿಕೊಳ್ಳುವುದು ಅಮೆರಿಕಾದ ಅಧ್ಯಕ್ಷರುಗಳಿಗೆ ಸುಲಭವಲ್ಲ. ಒಬಾಮಾ ಅಧಿಕಾರಕ್ಕೆ ಬಂದಾಗಲೇ ಇದನ್ನು ಗುರ್ತಿಸಲಾಗಿದೆ.



ಅಮೆರಿಕಾದ ಆರೋಗ್ಯ ಸೇವೆಯ ಸುಧಾರಣೆ ಅಧ್ಯಕ್ಷ ಒಬಾಮಾಗೆ ಅತಿದೊಡ್ಡ ಸವಾಲಾಗಿ, ಪರೀಕ್ಷೆಯಾಗಿ ಎದುರಾಗಿದೆ. ಇನ್ಸೂರೆನ್ಸ್ ಕಂಪೆನಿಗಳು, ಡಾಕ್ಟರುಗಳು, ಆಸ್ಪತ್ರೆಗಳು ಮತ್ತು ಔಷಧ ತಯಾರಿಕಾ ಸಂಸ್ಥೆಗಳ ಕಪಿಮುಷ್ಟಿಯಲ್ಲಿರುವ ಆರೋಗ್ಯ ಸೇವೆಯನ್ನು ಅಲುಗಾಡಿಸಿ, ಸುಧಾರಣೆಗಳನ್ನು ತರುವುದು ಸುಲಭದ ವಿಷಯವಲ್ಲ. ಈ ಖಾಸಗಿ ವ್ಯವಸ್ಥೆ ಅಮೆರಿಕಾದ ನಾಗರಿಕರಿಗೆ ವಿಪರೀತ ದುಬಾರಿಯಾಗಿದ್ದು, ನುಂಗಲಾರದ ತುತ್ತಾಗಿದೆ. ಇನ್ಸೂರೆನ್ಸ್ ಇಲ್ಲದೇ ಹೋದಲ್ಲಿ ಅಮೆರಿಕಾದಲ್ಲಿ ಚಿಕಿತ್ಸೆ ಗಗನಕುಸುಮ. ಹಾಗೇನಾದರೂ ಚಿಕಿತ್ಸೆ ಪಡೆದರೆ ಬಿಲ್ ಹಣ ಪಾವತಿ ಮಾಡಲು ಮನೆ ಮಠ ಎಲ್ಲ ಕಳೆದುಕೊಂಡು ದಿವಾಳಿಯಾಗಿ ಬೀದಿಪಾಲಾಗಬೇಕಾಗುತ್ತದೆ. ಇದಕ್ಕೆ ಬೇಕಾದಷ್ಟು ನಿದರ್ಶನಗಳಿವೆ. ಈಗಿರುವ ವ್ಯವಸ್ಥೆಯಲ್ಲಿ, ನಾಗರಿಕರು ನೇರವಾಗಿ ಇನ್ಸೂರೆನ್ಸ್ ಕಂಪನಿಗಳಿಗೆ ಪ್ರೀಮಿಯಮ್ ತೆತ್ತು ಚಿಕಿತ್ಸೆ ಪಡೆಯಬಹುದು, ಇಲ್ಲವೆ ಅವರು ಉದ್ಯೋಗ ಮಾಡುತ್ತಿರುವ ಕಂಪೆನಿಗಳು ಒದಗಿಸುವ ಇನ್ಸೂರೆನ್ಸ್ ವ್ಯವಸ್ಥೆಗೆ ಒಳಪಟ್ಟಿರಬೇಕು. ಆಗ ಮಾತ್ರ ವೈದ್ಯರನ್ನು ಕಾಣಲು ಅವಕಾಶ, ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆಯಲು ಅವಕಾಶ. ಔಷಧ ಕೊಳ್ಳಲು ಕೂಡ ಇನ್ಸೂರೆನ್ಸ್ ಇರಬೇಕು. ಈ ಇನ್ಸೂರೆನ್ಸ್ ಕಂಪೆನಿಗಳು ವಿಧಿಸಿರುವ ಷರತ್ತುಗಳನ್ನು ಸೂಕ್ಷ್ಮವಾಗಿ ಗಮನಿಸಬೇಕು, ಇಲ್ಲದಿದ್ದರೆ ಮೋಸ ಹೋಗುವ ಪ್ರಮೇಯ ಬರುತ್ತದೆ. ಕೆಲವೊಂದು ಕಾಯಿಲೆಗಳಿಗೆ, ಚಿಕಿತ್ಸೆಗಳಿಗೆ ಇನ್ಸೂರೆನ್ಸ್ ಕಂಪೆನಿಗಳು ಹಣ ಪಾವತಿಸಲು ನಿರಾಕರಿಸಿರುವುದು ಹಲವು ಕುಟುಂಬಗಳು ತೊಂದರೆಗೆ ಒಳಗಾಗಿ ಎಲ್ಲ ಕಳೆದುಕೊಂಡಿವೆ, ನ್ಯಾಯಾಲಯದ ಮೆಟ್ಟಿಲೇರಿವೆ. ಈಚೆನ ದಿನಗಳಲ್ಲಿ ಇನ್ಸೂರೆನ್ಸ್ ಕಂಪೆನಿಗಳ ಹಾವಳಿ ಜಾಸ್ತಿಯಾಗಿದೆ. ಪ್ರೀಮಿಯಮ್ ದರ ಏರುತ್ತಲೇ ಇದೆ. ಅಮೆರಿಕಾದ ಜನಸಂಖ್ಯೆಯಲ್ಲಿ ಸುಮಾರು ೪೯ ಮಿಲಿಯ ಮಂದಿಗೆ ಇನ್ಸೂರೆನ್ಸ್ ಇಲ್ಲ. ಎಂದರೆ ಸುಮಾರಾಗಿ ಪ್ರತಿ ಐದು ಮಂದಿ ಅಮೆರಿಕನ್ನರಲ್ಲಿ ಒಬ್ಬನಿಗೆ ಇನ್ಸೂರೆನ್ಸ್ ಇಲ್ಲ. ಹಾಗಾಗಿ ಬಡಜನರಿಗೆ ವೈದ್ಯಕೀಯ ಸೌಲಭ್ಯ ದುರ್ಲಭ. ದುಬಾರಿಯಾಗಿರುವ ಚಿಕಿತ್ಸೆಗೆ ಹಣ ಪಾವತಿಸಲಾಗದೆ ಅನೇಕರು ಇತರ ದೇಶಗಳಿಗೆ, ಮುಖ್ಯವಾಗಿ ಯೂರೋಪು ಹಾಗೂ ಭಾರತದಂಥ ದೇಶಗಳಿಗೆ, ಅಮೆರಿಕನ್ನರು ಚಿಕಿತ್ಸೆಗಾಗಿ ಬರುವುದು ಹೆಚ್ಚಾಗುತ್ತಿದೆ. ವೈದ್ಯಕೀಯ ಸೇವಾ ಕ್ಷೇತ್ರದಲ್ಲಿ ನಡೆಯುತ್ತಿರುವ ಶೋಷಣೆಯನ್ನು ನಿವಾರಿಸಿ, ಎಲ್ಲರಿಗೂ ವೈದ್ಯಕೀಯ ಸೇವೆ ಲಭಿಸುವಂತೆ ಮಾಡುವುದೇ ಒಬಾಮಾ ಉದ್ದೇಶ.

ಅವರ ಯೋಜನೆಯಂತೆ ಇನ್ಸೂರೆನ್ಸ್ ಕಂಪೆನಿಗಳನ್ನು ನಿಯಂತ್ರಣಕ್ಕೆ ಒಳಪಡಿಸಿ, ಪ್ರೀಮಿಯಮ್ ದರ ಯದ್ವಾತದ್ವಾ ಏರಿಸುವುದನ್ನು ತಡೆದು, ಎಲ್ಲ ರೋಗಗಳಿಗೂ ಚಿಕಿತ್ಸೆ ದೊರಕಿಸುವುದು, ನಿರುದ್ಯೋಗಿಗಳಾಗಿದ್ದು ಬಡತನದಲ್ಲಿರುವವರಿಗೆ ಸರಕಾರ ನೆರವು ನೀಡಿ ಇನ್ಸೂರೆನ್ಸ್ ಒದಗಿಸುವುದು. ಉಳಿದ ವಿವರಗಳು ಇಲ್ಲಿ ಅನಗತ್ಯ. ಆದರೆ ಅವರ ಈ ಯೋಜನೆಗೆ ತೀವ್ರವಾದ ವಿರೋಧ ವ್ಯಕ್ತವಾಗಿದೆ. ಖಾಸಗಿ ವೈದ್ಯಕೀಯ ವ್ಯವಸ್ಥೆಯ ದೊಡ್ಡ ಲಾಬಿಯ ಜೊತೆಗೆ, ಅಮೆರಿಕಾದ ಕಾಂಗ್ರೆಸ್ ಮತ್ತು ಸೆನೆಟ್‌ಗಳಲ್ಲಿಯೂ ಪ್ರಬಲವಾದ ವಿರೋಧವಿದೆ. ಮಸೂದೆಗೆ ಒಟ್ಟು ೫೬೪ ಳ ತಿದ್ದುಪಡಿಗಳನ್ನು ಸದಸ್ಯರು ಸದನದಲ್ಲಿ ಮಂಡಿಸಿದ್ದಾರೆ. ಸಭೆ ಮತ್ತು ಪ್ರದರ್ಶನಗಳೂ ನಡೆಯುತ್ತಿವೆ. ವಿಶೇಷವೆಂದರೆ, ಒಬಾಮಾರ ಈ ಯೋಜನೆ ಅಮೆರಿಕಾದಲ್ಲಿ ಜನಾಂಗೀಯ ದ್ವೇಷದ ತಿರುವನ್ನು ಪಡೆದುಕೊಂಡಿರುವುದೀಗ ಖೇದದ ಸಂಗತಿ. ಮಾಜಿ ಅಧ್ಯಕ್ಷ ಜಿಮ್ಮಿ ಕಾರ್ಟರ್ ಈ ಬಗ್ಗೆ ಆತಂಕ ವ್ಯಕ್ತಪಡಿಸಿದ್ದಾರೆ. ಸದ್ಯದ ಪರಿಸ್ಥಿತಿಯಲ್ಲಿ ಒಬಾಮಾ ಯೋಜನೆ ಅನುಮೋದನೆಯಾಗುವುದು ಅನುಮಾನ.

ಅಮೆರಿಕಾದಲ್ಲಿ ವೈದ್ಯಕೀಯ ಸೇವೆಯಿಂದ ವಂಚಿತರಾಗಿರುವ ಬಡವರ ಪರಿಸ್ಥಿತಿ ನಿಜವಾಗಿಯೂ ಚಿಂತಾಜನಕ. ಇನ್ಸೂರೆನ್ಸ್ ಇಲ್ಲದವರು ಬೀದಿಪಾಲು ಅಷ್ಟೆ. ಈಚೆಗೆ, ಅಂದರೆ ಎರಡು ತಿಂಗಳ ಹಿಂದೆ, ಕ್ಯಾಲಿಫೋರ್ನಿಯಾದಲ್ಲಿ ಉಚಿತ ವೈದ್ಯಕೀಯ ಚಿಕಿತ್ಸಾ ಶಿಬಿರವನ್ನು ಏರ್ಪಡಿಸಲಾಗಿತ್ತು. ಇದರ ಲಾಭ ಪಡೆದುಕೊಳ್ಳಲು ದೂರದೂರದಿಂದ ಸಾವಿರಾರು ಮಂದಿ ಬಡಜನರು ದಿನಗಟ್ಟಲೆ ಸಾಲಿನಲ್ಲಿ ನಿಂತುಕೊಂಡಿದ್ದರು. ಅವರಲ್ಲಿ ಅನೇಕರು ತಮ್ಮ ಜೀವನದಲ್ಲಿ ಮೊದಲ ಸಲ ಡಾಕ್ಟರ ಮುಖ ನೋಡುತ್ತಿದ್ದರು. ಒಂದೆರಡು ಉದಾಹರಣೆ: ಸುಮಾರು ೨೫ ವಯಸ್ಸಿನ ಯುವತಿ. ಹಲ್ಲುನೋವಿನಿಂದ ಕೆಲ ವರ್ಷಗಳಿಂದ ನರಳುತ್ತಿದ್ದಳು. ಅಮೆರಿಕಾದಲ್ಲಿ ದಂತವೈದ್ಯರನ್ನು ಕಾಣುವುದು ವಿಪರೀತ ದುಬಾರಿ. ಆಕೆಗೆ ಸರಿಯಾದ ಉದ್ಯೋಗವಿಲ್ಲದೆ ಹೊಟ್ಟೆಪಾಡಿಗೆ ಕಷ್ಟವಿರುವಾಗ ಇನ್ನೆಲ್ಲಿ ದಂತವೈದ್ಯ! ಆಕೆ ಗಟ್ಟಿ ಪದಾರ್ಥ ತಿನ್ನುವುದನ್ನೇ ಬಿಟ್ಟು, ಮೆತ್ತಗಿನ ಆಹಾರ ಸೇವಿಸಿ ಜೀವನ ಸಾಗಿಸುತ್ತಿದ್ದಳು. ಒಂದು ವಾರ ಕಾದ ಆಕೆಗೆ ವೈದ್ಯರ ದರ್ಶನವಾಯಿತು. ಮತ್ತೊಂದು ಕುಟುಂಬದ ಸಂಕಟ ಹೀಗೆ: ಮನೆಬಾಡಿಗೆ ಕೊಡುವುದೋ ಇಲ್ಲ ಆರೋಗ್ಯ ರಕ್ಷಣೆಗೆ ಇನ್ಸೂರೆನ್ಸ್ ಕೊಡುವುದೋ! ಆತನಿಗೆ ಕಡಿಮೆ ವೇತನದ ಉದ್ಯೋಗ. ಸಂಸಾರ ಸಾಗಬೇಕು. ಮಧ್ಯೆ ಮಧ್ಯೆ ನಿರುದ್ಯೋಗದ ಕಾಟ ಬೇರೆ. ಇನ್ಸೂರೆನ್ಸ್‌ಗೆ ತಿಂಗಳಿಗೆ ೨೦೦ ಡಾಲರು ತೆರಬೇಕು. ಮನೆಬಾಡಿಗೆಯೂ ಅಷ್ಟೆ, ೨೦೦ ಡಾಲರ್ ತಿಂಗಳಿಗೆ. ಹಾಗಾಗಿ ಆತನ ಕುಟುಂಬ ಇನ್ಸೂರೆನ್ಸ್ ಇಲ್ಲದೆ, ವೈದ್ಯಕೀಯ ಸೌಲಭ್ಯ ಇಲ್ಲದೆ ಜೀವನ ಸಾಗಿಸುತ್ತಿದೆ. ಆತ ಉಚಿತ ವೈದ್ಯಕೀಯ ತಪಾಸಣೆಗಾಗಿ ಐದು ದಿನಗಳಿಂದ ಕಾಯುತ್ತಿದ್ದ. ಹೀಗೆ ಒಬ್ಬೊಬ್ಬರದು ಒಂದೊಂದು ಬವಣೆ. ಅಮೆರಿಕಾದ ವೈದ್ಯಕೀಯ ಸೇವೆ ಎಂದರೆ ದುಡ್ಡಿದ್ದವ ಬದುಕಿಯಾನು, ಇಲ್ಲದವನು ಸತ್ತರೂ ಚಿಂತೆ ಇಲ್ಲ ಎನ್ನುವಂತಿದೆ. ಈ ವ್ಯವಸ್ಥೆಯನ್ನು ಒಬಾಮಾ ಬದಲಿಸಹೊರಟಿದ್ದಾರೆ. ಹಾಗೆಯೇ ಅವರ ಇತರ ಸದಾಶಯಗಳೂ ಕೂಡ ಕಾಗದದ ಮೇಲೇ ಉಳಿಯುವ ಸಾಧ್ಯತೆಯೇ ಹೆಚ್ಚು.

ಸೀಯಾರ್ಕೆ

## ಮಹಾಪಾತಕಿ ಇಸ್ರೇಲ್

ಅರ್ಧ ಶತಮಾನಕ್ಕೂ ಹೆಚ್ಚಿನ ತನ್ನ ಅಸ್ತಿತ್ವ ಕಾಲದಲ್ಲಿ ಇಸ್ರೇಲ್ ಎಸಗಿರುವಷ್ಟು ಪಾತಕೃತ್ಯಗಳನ್ನು ಬೇರಾವ ದೇಶವೂ ಮಾಡಿಲ್ಲ. ಆಕ್ರಮಿತ ಪ್ರದೇಶಗಳಲ್ಲಿ, ಪ್ಯಾಲಸ್ತೈನ್ ಜನರ ಮೇಲೆ ಇದು ಎಸಗಿರುವ ದೌರ್ಜನ್ಯಗಳಿಗೆ ಎಣೆಯೇ ಇಲ್ಲ. ಅಮೆರಿಕಾದ ರಕ್ಷಣೆ ಇಲ್ಲದಿದ್ದರೆ ಇಸ್ರೇಲ್ ಎಂದೋ ಯುದ್ಧಾಪರಾಧಿ ಸ್ಥಾನದಲ್ಲಿ ನಿಲ್ಲಬೇಕಾಗಿತ್ತು.

ಈ ವರ್ಷದ ಪ್ರಾರಂಭದಲ್ಲಿ ಗಾಜಾಪಟ್ಟಿ ಪ್ರದೇಶದಲ್ಲಿ ಇಸ್ರೇಲ್ ನಡೆಸಿದ ಹತ್ಯಾಕಾಂಡ ಮಾನವ ಹಕ್ಕುಗಳ ತೀವ್ರವಾದ ಉಲ್ಲಂಘನೆಯಷ್ಟೇ ಅಲ್ಲ, ಯುದ್ಧಾಪರಾಧವೂ ಆಗಿದೆ. ೧,೪೦೦ ಮಂದಿ ಪ್ಯಾಲಸ್ತೈನ್ ನಾಗರಿಕರ ಕಗ್ಗೊಲೆ, ಅಮಾಯಕ ಜನರ ಮೇಲೆ ನಡೆಸಿದ ಹಲ್ಲೆ ಖಂಡನೀಯ. ಇದು ದಕ್ಷಿಣ ಆಫ್ರಿಕಾದ ನಿವೃತ್ತ ನ್ಯಾಯವಾದಿ ರಿಚರ್ಡ್ ಗೋಲ್ಡ್‌ಸ್ಟೋನ್ ನೇತೃತ್ವದಲ್ಲಿ ನೇಮಕಗೊಂಡಿದ್ದ ವಿಶ್ವಸಂಸ್ಥೆಯ ವಿಚಾರಣಾ ಸಮಿತಿಯ ಅಭಿಮತ. ವಿಶ್ವಸಂಸ್ಥೆಯ ಭದ್ರತಾ ಸಮಿತಿಗೆ ಸೆಪ್ಟೆಂಬರ್ ೧೫ರಂದು ಈ ಸಮಿತಿ ಸಲ್ಲಿಸಿರುವ ೫೭೫ ಪುಟಗಳ ವಿವರವಾದ ವರದಿಯು ಮೂರು ತಿಂಗಳಲ್ಲಿ ಸಂಬಂಧಪಟ್ಟ ಸರಕಾರಗಳು ವರದಿಯಲ್ಲಿನ ಅಂಶಗಳನ್ನು ಪರಿಶೀಲಿಸಿ ಅಪರಾಧ ಎಸಗಿದವರ ಮೇಲೆ ಕ್ರಮ ತೆಗೆದುಕೊಳ್ಳಬೇಕು. ಇಲ್ಲದೇ ಹೋದಲ್ಲಿ ವಿಶ್ವಸಂಸ್ಥೆಯ ಮಾನವ ಹಕ್ಕುಗಳ ಆಯೋಗವು ವಿಷಯವನ್ನು ಅಂತರರಾಷ್ಟ್ರೀಯ ಅಪರಾಧಗಳ ನ್ಯಾಯಾಲಯಕ್ಕೆ ಒಪ್ಪಿಸಬೇಕು ಎಂದು ಶಿಫಾರಸು ಮಾಡಿದೆ. ವರದಿಯಲ್ಲಿ ಇಸ್ರೇಲ್ ಗಾಜಾ ಪ್ರದೇಶದಲ್ಲಿ ನಡೆಸಿರುವ ದೌರ್ಜನ್ಯಗಳನ್ನು ಸಾಕ್ಷಿಸಮೇತ ವಿವರಿಸಲಾಗಿದೆ. ಅಷ್ಟೇ ಅಪರಾಧ ಎಸಗಿದ ಸೇನಾಧಿಕಾರಿಗಳ ಹೆಸರುಗಳನ್ನೂ ನಮೂದಿಸಲಾಗಿದೆ ಎಂದು ಹೇಳಲಾಗಿದೆ. ಇಸ್ರೇಲ್ ವಿಶ್ವಸಂಸ್ಥೆಯ ಈ ಸಮಿತಿಯ ತನಿಖೆಗೆ ಯಾವ ರೀತಿಯಲ್ಲಿಯೂ ಸಹಕಾರ ನೀಡಲಿಲ್ಲ ಎಂಬ ಅಂಶವನ್ನು ವರದಿಯು ಪ್ರಸ್ತಾಪ ಮಾಡಿದೆ. ವರದಿಯಲ್ಲಿ ಪ್ಯಾಲಸ್ತೈನ್‌ನ ಕೆಲ ತಂಡಗಳು ಇಸ್ರೇಲಿಗಳ ಮೇಲೆ ಹಲ್ಲೆಯನ್ನು ನಡೆಸಿದರೆಂದು ಮಾಡಿರುವ ಆಪಾದನೆ ಅಚ್ಚರಿಗೊಳಿಸಿದೆ. ಎರಡೂ ಕಡೆಯವರನ್ನು ಒಂದೇ ತಕ್ಕಡಿಯಲ್ಲಿ ಇರಿಸುವ ಪ್ರಯತ್ನ ಇದಾಗಿರಬಹುದು. ಆದರೆ ಅದು ಸರಿಯಲ್ಲ. ವರದಿಯ ಬಹುಪಾಲು ಭಾಗ ಇಸ್ರೇಲಿಗಳು ನಡೆಸಿರುವ ದೌರ್ಜನ್ಯಕ್ಕೇ ಮೀಸಲಾಗಿದೆ. ಇಸ್ರೇಲ್ ಉದ್ದೇಶಪೂರ್ವಕವಾಗಿಯೇ ಗಾಜಾಪಟ್ಟಿಯ ನಿವಾಸಿಗಳಾದ ಪ್ಯಾಲಸ್ತೀನಿಯನ್ನರ ಮೇಲೆ ಕ್ರೂರವಾದ ದಾಳಿ ನಡೆಸಿದೆ ಎಂಬುದನ್ನು ಸಮಿತಿಯ ವರದಿ ಸ್ಪಷ್ಟಪಡಿಸಿದೆ. ಆರು ತಿಂಗಳು ಸಮೀಕ್ಷೆ ನಡೆಸಿ, ಸಾಕ್ಷ್ಯ ಸಂಗ್ರಹಿಸಿ ನೀಡಿರುವ ವರದಿ ಇದು. ಈಗ ಅದರ ಮೇಲೆ ಸೂಕ್ತಕ್ರಮ ಕೈಗೊಳ್ಳುವುದು ಭದ್ರತಾ ಮಂಡಳಿಯ ಹೊಣೆ.

ಅಮೆರಿಕಾ ಈಗಾಗಲೇ ವರದಿಯು ಏಕಪಕ್ಷೀಯವಾಗಿದೆ ಎಂದು ರಾಗ ಎಳೆದಿದೆ. ಇಸ್ರೇಲ್



ವರದಿಯನ್ನು ಸಾರಾಸಗಟಾಗಿ ತಿರಸ್ಕರಿಸಿದೆ. ವಿಶ್ವಸಂಸ್ಥೆಯ ಸಮಿತಿ ಅಧ್ಯಕ್ಷ ನ್ಯಾಯಮೂರ್ತಿ ಗೋಲ್ಡ್‌ಸ್ಟೋನ್ ಇಪ್ಪತ್ತನಾಲ್ಕು ಗಂಟೆಯೊಳಗೇ ಇಸ್ರೇಲ್ ಕೊಟ್ಟ ೫೭೫ ಪುಟಗಳ ಬೃಹತ್ ವರದಿಯನ್ನು ಓದಿ ಸಂಪೂರ್ಣವಾಗಿ ತಿರಸ್ಕರಿಸಿರುವುದರ ಬಗ್ಗೆ ಅಚ್ಚರಿ ವ್ಯಕ್ತಪಡಿಸಿದ್ದಾರೆ. ಇಸ್ರೇಲ್ ವಿಶ್ವಸಂಸ್ಥೆಯ ಮಾನವ ಹಕ್ಕು ಆಯೋಗವು ಪಕ್ಷಪಾತ ಧೋರಣೆ ಅನುಸರಿಸುತ್ತಿದೆ ಎಂದು ಮೊದಲಿನಿಂದಲೂ ಆಪಾದಿಸುತ್ತ ಬಂದಿದೆ. ಈಗಲೂ ಅದೇ ಆಪಾದನೆ ಹೊರಿಸಿದೆ.

ಇಂಥ ಪಾತಕ ಕೃತ್ಯ ನಡೆಸಿ ಅಪರಾಧಿ ಸ್ಥಾನದಲ್ಲಿರುವ ಇಸ್ರೇಲಿನೊಂದಿಗೆ ಭಾರತ ಸರಕಾರ ದೊಡ್ಡ ಪ್ರಮಾಣದಲ್ಲಿ ಆಯುಧ ಸಾಮಗ್ರಿಗಳನ್ನು ಕೊಳ್ಳುವ ಒಪ್ಪಂದ ಮಾಡಿಕೊಳ್ಳ ಹೊರಟಿರುವುದು ಶೋಚನೀಯ. ಪ್ಯಾಲಸ್ತೀನಿಯನ್ ರಾಜ್ಯಸ್ಥಾಪನೆ ನ್ಯಾಯಸಮ್ಮತವಾದ್ದು, ಯಾವತ್ತೂ ಭಾರತ ಪ್ಯಾಲಸ್ತೀನ್ ಹೋರಾಟಕ್ಕೆ ಬೆಂಬಲ ನೀಡುತ್ತದೆ ಎಂದು ಹೇಳಿಕೊಳ್ಳುತ್ತಿರುವ ಭಾರತ ಸರಕಾರ ಇನ್ನೊಂದು ಕಡೆ ಇಸ್ರೇಲಿನೊಂದಿಗೆ ಸಹಕಾರ ಸಂಬಂಧ ಬೆಳೆಸುತ್ತಿರುವುದು ನಿಜಕ್ಕೂ ಖಂಡನೀಯ. ಈ ಬಗ್ಗೆ ದ್ವಿಮುಖ ಧೋರಣೆ ಮೂರ್ಖತನದ್ದು. ಅದನ್ನು ಬದಲಿಸುವಂತೆ ಒತ್ತಾಯಪಡಿಸಬೇಕಾಗಿದೆ.

ಶೀಯಾರ್ಕೆ
'ಚೌಬೀನ', ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು - ೮೫

## ದ್ವಂದ್ವ

ಆದರೆ
ನಾವು ದೇವರ ಮಕ್ಕಳು

ಹಿಮ್ಮೆಟ್ಟದ, ತಲ್ಲಣಿಸದ, ಅಕಳಂಕರು
ನೆಮ್ಮದಿಯ ಸಾಗರದಲ್ಲಿ
ಭ್ರಮೆಯ ಮುಖವಾಡಗಳ ಹಿಂದೆ
ದುಃಖಗಳ ನೆಲೆಯಾಚೆಯಿಂದ
ಸಂತಸದ ನೆಲೆ ಮೀರುವವರೆಗೆ –
ಇಲ್ಲದುದಕೆ ತಡಕಾಡುತ್ತ

ನಾವು ತಿಳಿಯದ್ದನ್ನು ತಿಳಿದಿದ್ದೇವೆ
ತಿಳಿದಿಲ್ಲ ತಿಳಿದಿರುವುದನ್ನು

ನಾವೆಲ್ಲ ಒಂದೆ
ನಾವೆಲ್ಲ ಒಂದಾಗಬಹುದು
ನಾವೆಂದೂ ಒಂದಾಗಲಾರೆವು

ಆದರೂ
ನಾವು ದೇವರ ಮಕ್ಕಳು

ಪ್ರತಿಮಾ ರಾಘವ
೮೮೩, ಡಿ-ಬ್ಲಾಕ್, ಸಹಕಾರನಗರ,
ಬೆಂಗಳೂರು - ೫೬೦ ೦೯೨



# ಹೈಕೋರ್ಟು ತೀರ್ಪು

# ಸಂವಿಧಾನವೇ ಸರ್ಕಾರವನ್ನು ಸೋಲಿಸಿತು!

ರಾಜ್ಯದ ಪ್ರಾಥಮಿಕ ಶಿಕ್ಷಣ ಮಾಧ್ಯಮದ ವಿಷಯ ವಿವಾದಕ್ಕೆ ಒಳಗಾಗಿರುವುದು ಎಲ್ಲರಿಗೂ ತಿಳಿದಿರುವ ಸಂಗತಿ. ರಾಜ್ಯ ಹೈಕೋರ್ಟ್ ೧೪ ವರ್ಷಗಳ ಕಾಲ ವಾದ ಪ್ರತಿವಾದಗಳನ್ನು ಆಲಿಸಿ, ೨೦೦೮ರ ಜುಲೈ ೨ರಂದು ತೀರ್ಪನ್ನು ನೀಡಿತ್ತು. ತೀರ್ಪು ಹೊರಬಿದ್ದು ೧೪ ತಿಂಗಳು ಮುಗಿದಿವೆ. ಸರ್ಕಾರ ಈ ತೀರ್ಪನ್ನು ಪಾಲಿಸಲು 'ಮೀನ ಮೇಷ' ಎಣಿಸಿದ ಕಾರಣ, ನ್ಯಾಯಾಲಯ ಹಲವು ಬಾರಿ ಸರ್ಕಾರಕ್ಕೆ ಛೀಮಾರಿ ಹಾಕಿದೆ. ತನ್ನ ಆದೇಶವನ್ನು ಪಾಲಿಸುವಂತೆ ಸೂಚಿಸಿದೆ; ಕೋರ್ಟಿನ ಆದೇಶವನ್ನು, ಜನರ ಆಶಯಗಳನ್ನು ಈಡೇರಿಸದ ಸರ್ಕಾರ ಎಂತಹ ಸರ್ಕಾರ ಎಂದೂ ಪ್ರಶ್ನಿಸಿದೆ. ಇಂಗ್ಲಿಷ್ ಮಾಧ್ಯಮದ ಖಾಸಗಿ ಶಾಲೆಗಳನ್ನು ತೆರೆಯಲು ಅನುಮತಿ ನೀಡುವಂತೆ ಆದೇಶಿಸಿದೆ. ಈ ತೀರ್ಪು ಹೊರಬಿದ್ದನಂತರ ರಾಜ್ಯ ಸರ್ಕಾರ, ೧೦೦ ದಿನಗಳ ಒಳಗಾಗಿ ಸುಪ್ರೀಂ ಕೋರ್ಟಿನಲ್ಲಿ ಮೇಲ್ಮನವಿ ಸಲ್ಲಿಸುವುದಾಗಿ ಹೇಳಿತ್ತು. ಆದರೆ ೧ ವರ್ಷ ಕಳೆದರೂ ಮೇಲ್ಮನವಿ ಸಲ್ಲಿಸಿರಲಿಲ್ಲ. ಹೈಕೋರ್ಟಿನ ತೀರ್ಪನ್ನು ಆಚರಣೆಗೆ ತಂದಿರಲಿಲ್ಲ. ಇದನ್ನು ಗಮನಿಸಿದ ನ್ಯಾಯಾಲಯ ಸರ್ಕಾರದ ನಿಧಾನ-ನಿಷ್ಕ್ರಿಯ ಧೋರಣೆಯನ್ನು ಟೀಕಿಸಿತು. ನ್ಯಾಯಾಲಯದ ಆದೇಶವನ್ನು ಪಾಲಿಸಲೇಬೇಕಾದ ಅನಿವಾರ್ಯತೆ ಸೃಷ್ಟಿಯಾದ್ದರಿಂದ, ರಾಜ್ಯ ಸರ್ಕಾರ ಸುಪ್ರೀಂ ಕೋರ್ಟಿನಲ್ಲಿ ಮೇಲ್ಮನವಿಯನ್ನು ಸಲ್ಲಿಸಲೇಬೇಕಾಯಿತು. ಮೇಲ್ಮನವಿಯನ್ನು ಸಲ್ಲಿಸಿ ರಾಜ್ಯ ಹೈಕೋರ್ಟು ನೀಡಿರುವ ತೀರ್ಪನ್ನು ರದ್ದುಪಡಿಸುವಂತೆ ಕೋರಿತು. ಆದರೆ ಹೈಕೋರ್ಟಿನ ತೀರ್ಪಿಗೆ ತಡೆಯಾಜ್ಞೆ ನೀಡಲು ನಿರಾಕರಿಸಿದ ಸುಪ್ರೀಂ ಕೋರ್ಟ್ ರಾಜ್ಯ ಹೈಕೋರ್ಟಿನ ಆದೇಶವನ್ನು ಪಾಲಿಸುವಂತೆ ಸೂಚಿಸಿ ರಾಜ್ಯ ಸರ್ಕಾರಕ್ಕೆ ಬಿಸಿಮುಟ್ಟಿಸಿದೆ.

ಈ ಮಧ್ಯೆ ನಾಡಿನ ಖ್ಯಾತ ಸಾಹಿತಿಗಳಾದ ಯು. ಆರ್. ಅನಂತಮೂರ್ತಿ, ನಿಸಾರ್ ಅಹಮದ್ ಮುಂತಾದವರು ಸುಪ್ರೀಂ ಕೋರ್ಟಿನಲ್ಲಿ ಸಾರ್ವಜನಿಕ ಹಿತಾಸಕ್ತಿಯ ಮೊಕದ್ದಮೆಯನ್ನು ದಾಖಲಿಸಿದ್ದಾರೆ. ಈ ಮೊಕದ್ದಮೆಯಲ್ಲಿ ಮೊದಲ ಬಾರಿಗೆ ಕೇಂದ್ರ ಸರ್ಕಾರವನ್ನು ಹೊಣೆಯಾಗಿಸಲಾಗಿದೆ. ಮೇಲ್ಮನವಿಯನ್ನು ಪರಿಶೀಲಿಸಿದ ಸುಪ್ರೀಂ ಕೋರ್ಟ್ ಮಾತೃಭಾಷಾ ಮಾಧ್ಯಮಕ್ಕೆ ಸಂಬಂಧಿಸಿದಂತೆ ಕೇಂದ್ರ ಸರ್ಕಾರದ ನಿಲುವೇನು ಎಂಬುದನ್ನು ಸ್ಪಷ್ಟಪಡಿಸುವಂತೆ ಸೂಚಿಸಿದೆ. ಈ ಬಗೆಗ ಕೇಂದ್ರ ಸರ್ಕಾರ ತನ್ನ ನಿಲುವನ್ನು ಇನ್ನೂ ಸ್ಪಷ್ಟಪಡಿಸಿಲ್ಲ. ಅಲ್ಲದೆ ರಾಜ್ಯ ಹೈಕೋರ್ಟಿನ ತೀರ್ಪು ಇತರ ರಾಜ್ಯಗಳ ಭಾಷಾ ನೀತಿಗಳ ಮೇಲೆ ತೀವ್ರ ಪರಿಣಾಮ ಬೀರುವ ಸಾಧ್ಯತೆಗಳಿವೆ. ಇದರಿಂದ ಎಚ್ಚೆತ್ತಿರುವ ಗುಜರಾತ್, ಮಹಾರಾಷ್ಟ್ರ, ಪಂಜಾಬ್, ಆಂಧ್ರ ಪ್ರದೇಶ ಮತ್ತು ಒರಿಸ್ಸಾ ರಾಜ್ಯಗಳು ಸುಪ್ರೀಂ ಕೋರ್ಟಿನಲ್ಲಿರುವ ಭಾಷಾ ಮಾಧ್ಯಮ ಪ್ರಕರಣದಲ್ಲಿ ಮಧ್ಯೆಪ್ರವೇಶಿಸುವ ಮಾತನಾಡಿವೆ. ಹಾಗಾಗಿ ರಾಜ್ಯದ ಭಾಷಾಮಾಧ್ಯಮ ವಿವಾದ ಈಗ ದೇಶಾದ್ಯಂತ ಪ್ರಚಾರವನ್ನು ಪಡೆದುಕೊಂಡಿದೆ. ಆದರೆ ಈ ಬೆಳವಣಿಗೆಗಳ ನಡುವೆ ರಾಜ್ಯ ಹೈಕೋರ್ಟಿನ ತೀರ್ಪು ಭವಿಷ್ಯದಲ್ಲಿ ಕನ್ನಡ ಮತ್ತು ಇತರೆ ಜನ ಭಾಷೆಗಳ ಮೇಲೆ

ಈಗಿನ ವಿದ್ಯಮಾನಗಳನ್ನು ಗಮನಿಸಿದರೆ ಕೋರ್ಟುಗಳಿಂದ ಜನಭಾಷೆಗಳಿಗೆ ನ್ಯಾಯ ದೊರೆಯುವ ಸಾಧ್ಯತೆಗಳು ಕಡಿಮೆ. ಏನಿದ್ದರೂ ಸೂಕ್ತ ಜನಾಭಿಪ್ರಾಯವನ್ನು ರೂಪಿಸುವ ಮೂಲಕ ಸರ್ಕಾರಗಳ ಮೇಲೆ ಒತ್ತಡ ತರಬೇಕು. ಆ ಮೂಲಕ ಸೂಕ್ತ ಭಾಷಾ ನೀತಿಯನ್ನು ರೂಪಿಸುವಂತೆ ಒತ್ತಾಯಿಸಬೇಕು. ಈ ಮಧ್ಯೆ ಇಂಗ್ಲಿಷ್ ಬಗೆಗೆ ರೂಪುಗೊಂಡಿರುವ ಭ್ರಮೆಯನ್ನು ಹೋಗಲಾಡಿಸುವ ಕಾರ್ಯವು ಮುಖ್ಯ. ಕನ್ನಡ ಶಾಲೆಗಳ ಗುಣಮಟ್ಟ ಸುಧಾರಣೆ, ಸಮಾನ ಭಾಷಾ ಮತ್ತು ಶಿಕ್ಷಣ ನೀತಿಯನ್ನು ರೂಪಿಸುವ ಕೆಲಸವಾಗಬೇಕಿದೆ. ನ್ಯಾಯ ನೀಡುವ ಕೋರ್ಟಿನ ಭಾಷೆಯನ್ನು ಮೊದಲು ಕನ್ನಡವಾಗಿಸಬೇಕಿದೆ. ಸರ್ಕಾರಿ ಮತ್ತು ಖಾಸಗಿ ಕ್ಷೇತ್ರಗಳೆರಡರಲ್ಲೂ ಕನ್ನಡ ಆಡಳಿತ ಭಾಷೆಯಾಗುವಂತೆ ಮಾಡಬೇಕು. ಇದನ್ನು ಸಾಧಿಸಲು ಸರ್ಕಾರಗಳ ಮೇಲೆ ಜನರು ಒತ್ತಡ ತರಬೇಕು. ಹೊಸ ಕಾನೂನನ್ನು ರೂಪಿಸುವಂತೆ ಮಾಡಬೇಕು. ಸಂವಿಧಾನಕ್ಕೆ ತಿದ್ದುಪಡಿ ತರುವ ಮೂಲಕ ನಿಖರವಾದ ಜನರ ಭಾಷಿಕ ನೀತಿಯನ್ನು ರೂಪಿಸುವಂತೆ ಮಾಡಬೇಕು.

ಡಾ|| ರಂಗನಾಥ ಕಂಟನಕುಂಟೆ



# ವಸಂತನ ಉಯಿಲು

**ಮೊನ್ನೆ**
ಸುಮ್ಮನಿರದೇ ಹತ್ತಾರು ಸಸಿ ನೆಟ್ಟೆ
ಗೆಳೆಯ
ಈ ನೆಲ ಬರಡು ಏನೂ ಬಾರದೆಂದ
ಬಳಸಿದ ನೀರು ಮರುಬಳಕೆಗೆ
ನೆಲಕೆ ಹರಿಬಿಟ್ಟೆ
ಇಂದು
ಹತ್ತಾರು ಟಿಸಿಲು ಟೊಂಗೆಯ ಹಲಸು
ಫಲ ಬಿಟ್ಟಿದೆ
ಹೂವಿನೊಂದಿಗೆ ಮಾವು ಮಿಡಿಯಾಗಿದೆ
ತೆಂಗಿನ ಹೊಂಬಾಳೆ ಬುಡದಲ್ಲೇ ಜೇನ್ಗೂಡಿದೆ

ಜೀವಜಲವ ಮರುಬಳಸಿದ
ಮರಗಿಡಬಳ್ಳಿ
ಬಣ್ಣಬಣ್ಣದ ಮೊಗ್ಗು ಹೂಗಳಲಿ
ಸೂಸಿ ತಂಗಾಳಿ
ವಸಂತನೊಂದಿಗೆ ಮಾತಿಗಿಳಿಯುತಿವೆ

ರಾತ್ರಿರಾಣಿ ಸಂಜೆ ಸಭೆ ಕರೆದಿರುವಳಂತೆ
ಸೂಜಿಮಲ್ಲಿಗೆಯ ಅಧ್ಯಕ್ಷತೆಯಂತೆ
ಕ್ರಿಕೆಟ್ ಬಾಲ್ ನಾಚಿಸುವ
ನೆಲಬಣ್ಣದ ಚಿಕ್ಕು
ರಸ ತುಂಬಿದ ಹಾಲ್ಜೇನಿನ ಸಕ್ಕರೆಯ ಗುಟುಕು
ಅಣಿಗೊಳಿಸಿ ಆಹ್ವಾನಿಸಿದ್ದಾಳೆ ರಾತ್ರಿ ಬೈಠಕ್ಕು
ಮೇಲೆ ತಾಕೀತಿನ ಒಕ್ಕಣಿಕೆಯ ಕೊಕ್ಕು
"ನೀನು ಮಾತ್ರ ತಪ್ಪದೇ ಬರಬೇಕು"

ನಾನು
ಕಾಂಕ್ರೀಟ್ ನಾಡು ಬೆಂಗ್ಳೂರಿಗೆ ಹೋದಾಗ
ವಾಕಿಂಗಿಗೆ ದಾರಿ ನೋಡಿದ ಪೇರಳೆ
ನಾ ಬರಲಿಲ್ಲವೆಂದು ಮುನಿಸಿ
ಮಾತು ಬಿಟ್ಟಿರುವಳಂತೆ
ಗೆಳೆಯಾ,
ದಮ್ಮಯ್ಯ ಬಾರೋ
ನನ್ನಯ್ಯ ಬಾರೋ
ಮಹಾರಾಯ ನೀನೆನ್ನ
ರಾಯಭಾರಿಯಾಗಿ ಬಾರೋ
ನಿನ್ನ ಮಧ್ಯಸ್ಥಿಕೆಯಲ್ಲಿ
ನಮ್ಮ ಜಗಳ ಬಗೆಹರಿಯಬೇಕು
ಪೇರಳೆಯು ನನ್ನನ್ನು ಲವ್ ಮಾಡುವುದ ನೋಡಿ
ನಿನ್ಹೊಟ್ಟೆ ಉರಿಯಬೇಕು

ನಾನು ಈ ಮಾತು ನಿಮಗೆ ಹೇಳಲೇ ಬೇಕು
ನೆಲ ಬರಿದಲ್ಲ, ನಮ್ಮ ಮನ ಬರಿದೆಂದು
ನಮಗೆ ತಿಳಿದರೆ ಸಾಕು

**ಶಂಕರಯ್ಯ ಆರ್. ಘಂಟಿ**
ಡಿ೧೨, ಸ್ಟ್ಯಾಫ್ ಕ್ವಾರ್ಟರ್ಸ್, ಗುಲ್ಬರ್ಗಾ ಯೂನಿವರ್ಸಿಟಿ, ಗುಲ್ಬರ್ಗಾ - ೫೮೫ ೧೦೬

ಬೀರಬಹುದಾದ ಪರಿಣಾಮಗಳನ್ನು ಕುರಿತು ಸಾರ್ವಜನಿಕವಾಗಿ ನಡೆಯಬೇಕಾಗಿದ್ದಷ್ಟು ಚರ್ಚೆ ನಡೆದಂತಿಲ್ಲ. ಕೆಲವು ಚರ್ಚೆಗಳು, ಬರೆವಣಿಗೆಗಳು ಬಂದಿರುವುದನ್ನು ಹೊರತು ಪಡಿಸಿದರೆ ನಡೆದಿರುವ ಚರ್ಚೆ ಸೀಮಿತವಾದುದು. ಕೆಲವು ಸಮಸ್ಯೆಗಳ ಬಗೆಗೆ ತೋರುವ ಕಡು ಮೌನ ಒಳ್ಳೆಯದಲ್ಲ. ಇದು ಪ್ರಜಾತಂತ್ರ ವ್ಯವಸ್ಥೆಯ ಆರೋಗ್ಯದ ದೃಷ್ಟಿಯಿಂದಲೂ ಒಳ್ಳೆಯದಲ್ಲ. ಈ ತೀರ್ಪು, ಸಂವಿಧಾನದ ಮೂಲಭೂತ ವಿಷಯಗಳಿಗೆ ಸಂಬಂಧಿಸಿದಂತೆಯೇ ಹಲವು ವಿಚಾರಗಳನ್ನು ಚರ್ಚಿಸಲು ಅವಕಾಶ ಸೃಷ್ಟಿಸಿದೆ. ಪ್ರಜಾತಂತ್ರ ವ್ಯವಸ್ಥೆಯ ದೌರ್ಬಲ್ಯಗಳು, ಸಮಸ್ಯೆಗಳು, ವೈರುಧ್ಯಗಳನ್ನು ಅರ್ಥಮಾಡಿಕೊಳ್ಳುವ ಅಗತ್ಯ ಇಂದಿದೆ. ಇದು ನಮ್ಮ ಸಮಾಜವನ್ನು ಮತ್ತಷ್ಟು ಪ್ರಜಾತಾಂತ್ರಿಕಗೊಳಿಸುವ ದೃಷ್ಟಿಯಿಂದ ತುರ್ತಾಗಿ ನಡೆಯಬೇಕಾದ ಕೆಲಸ. ಈ ದೃಷ್ಟಿಯಿಂದ ಹೈಕೋರ್ಟಿನ ತೀರ್ಪನ್ನು ಕುರಿತು ಕೆಲವು ವಿಚಾರಗಳನ್ನು, ಪ್ರಶ್ನೆಗಳನ್ನು ಪ್ರಸ್ತಾಪಿಸುವ ಪ್ರಯತ್ನ ಇಲ್ಲಿ ಮಾಡಲಾಗಿದೆ.

ಒಂದು, ಹೈಕೋರ್ಟಿನಲ್ಲಿ ರಾಜ್ಯ ಸರ್ಕಾರ ಮಾತೃಭಾಷೆ ಅಥವಾ ಕನ್ನಡ ಮಾಧ್ಯಮ ಕುರಿತಂತೆ ಮಂಡಿಸಿದ ವಾದಗಳಿಗೆ ಸಂವಿಧಾನದ ತಳಹದಿಯೇ ಇರಲಿಲ್ಲ. ಭಾರತ ಒಕ್ಕೂಟದ ಭಾಷಿಕ ಸಮಸ್ಯೆಗಳ ನಿವಾರಣೆಗೆ ಸಂಬಂಧಿಸಿದಂತೆ ಸಂವಿಧಾನದಲ್ಲಿರುವ ೩೪೩ರಿಂದ ೩೫೦ರವರೆಗಿನ ಕಲಮುಗಳು ಪ್ರಾದೇಶಿಕ ಭಾಷೆಗಳ ಶಿಕ್ಷಣ ಮಾಧ್ಯಮಕ್ಕೆ ಸಂಬಂಧಿಸಿದಂತೆ ಸ್ಪಷ್ಟವಾದ ವಿಚಾರವನ್ನು ಸೂಚಿಸುವುದಿಲ್ಲ. ಅವೆಲ್ಲವೂ ಹಿಂದಿ ಇಂಗ್ಲಿಷುಗಳ ಬಳಕೆ, ಅಭಿವೃದ್ಧಿಯ ಬಗೆಗಷ್ಟೇ ತಿಳಿಸಿವೆ. ಮಾತೃಭಾಷೆ ಕುರಿತಂತೆ ೩೫೦-ಎ ಕಲಮು ಇದ್ದರೂ, ಇತರೆ ಕಲಮುಗಳ ಜೊತೆಗೆ ಸೃಷ್ಟಿಯಾಗುವ ವೈರುಧ್ಯಗಳ ಪರಿಣಾಮವಾಗಿ ಅದು ನಿಷ್ಕ್ರಿಯವಾಗುತ್ತದೆ. ಅಲ್ಲದೆ ಇದು ಕನ್ನಡವನ್ನು ಕುರಿತಾಗಿರದೆ ಭಾಷಿಕ ಅಲ್ಪಸಂಖ್ಯಾತರ ಮಾತೃಭಾಷಿಕ ಹಕ್ಕುಗಳಿಗೆ ಸಂಬಂಧಿಸಿದ್ದು.

ಅದೇ ವೇಳೆ ಖಾಸಗಿ ಆಡಳಿತ ಸಂಸ್ಥೆಗಳು, ಅಲ್ಪಸಂಖ್ಯಾತರು, ಪೋಷಕರು ಮಂಡಿಸಿದ ವಾದಗಳಿಗೆ ಸಂವಿಧಾನದ ಬುನಾದಿ ಇತ್ತು; ಇದೆ. ೧೯/೧(ಎ) (ಜಿ), ೨೧, ೨೬, ೨೯/೧, ೩೦/ಎ ಕಲಮುಗಳು ಖಾಸಗಿ, ಅಲ್ಪಸಂಖ್ಯಾತರ, ಪೋಷಕರ ವಾದಕ್ಕೆ ಪೂರಕವಾಗಿವೆ. ಇವುಗಳನ್ನು ಖಾಸಗಿ ಸಂಸ್ಥೆಗಳು ಚೆನ್ನಾಗಿ ಬಳಸಿಕೊಂಡಿವೆ. ಅಥವಾ ೩೫೦/ಎ ಕಲಮನ್ನು ಸೋಲಿಸುವಷ್ಟು ಆ ಕಲಮುಗಳು ಪ್ರಬಲವಾಗಿವೆ. ಇದು ದೇಶ ಸ್ವಾತಂತ್ರ್ಯ ಪಡೆದು ೬೨ ವರ್ಷಗಳನ್ನು ಪೂರೈಸುತ್ತಿದ್ದರೂ, ದೇಶದ ವಿವಿಧ ಜನಭಾಷೆಗಳಲ್ಲಿ ಶಿಕ್ಷಣವನ್ನು ನೀಡುವ ಕುರಿತಾದ ಸೂಕ್ತ ಭಾಷಾ ನೀತಿ, ಶಿಕ್ಷಣ ಕಾಯ್ದೆ ಇಲ್ಲದಿರುವುದನ್ನು ಎತ್ತಿತೋರಿಸುತ್ತದೆ. ನ್ಯಾಯಾಲಯದ ತೀರ್ಪು ಮತ್ತು ಸಂವಿಧಾನ ಎರಡನ್ನೂ ಗಮನವಿಟ್ಟು ಓದಿದರೆ ಇದು ಸ್ಪಷ್ಟವಾಗುತ್ತದೆ. ಸರ್ಕಾರಕ್ಕೆ ಇಂತಹ ಯಾವ ಕಲಮುಗಳ ಬೆಂಬಲವಿಲ್ಲ. ಅದು ಮಂಡಿಸಿರುವ ಎಲ್ಲ ವಿಚಾರಗಳು ಸಂವಿಧಾನೇತರ ವಾದುವು. ಈ ಅರ್ಥದಲ್ಲಿ ಕೋರ್ಟಿನ ತೀರ್ಪು 'ನ್ಯಾಯಬದ್ಧ'ವಾಗಿದೆ. ಸರ್ಕಾರದ ವಾದ ಮತ್ತು ಸಾಂವಿಧಾನಿಕ ನೆಲೆ ದುರ್ಬಲವಾಗಿದೆ. ಹಾಗಾಗಿ ರಾಜ್ಯ ಸರ್ಕಾರದ ವಾದಕ್ಕೆ ಸಂವಿಧಾನದ ಬೆಂಬಲವಿಲ್ಲದಿರುವುದರಿಂದಾಗಿ ಸುಪ್ರೀಂ ಕೋರ್ಟಿನಲ್ಲಿಯೂ ಅದಕ್ಕೆ ಗೆಲುವಾಗುವ ಸಾಧ್ಯತೆಗಳು ಕಡಿಮೆ. ಇದು ಗಮನಾರ್ಹ ಮತ್ತು ಗಂಭೀರವಾದ ಸಂಗತಿ.

ಎರಡು, ಕೋರ್ಟಿನ ತೀರ್ಪಿನ ಮೇಲೆ ಸಮಾಜದಲ್ಲಿ ಈಗಾಗಲೇ ಸ್ಥಾಪಿತವಾಗಿರುವ ಸಮಾಜದ ವೈಚಾರಿಕತೆಯ ಮೌಲ್ಯಗಳು ವ್ಯಾಪಕವಾಗಿ ಪ್ರಭಾವಿಸಿವೆ. ಇದಕ್ಕೆ ಅಭಿವೃದ್ಧಿಯ ಕಲ್ಪನೆ, ಇಂಗ್ಲಿಷಿನ ಅಗತ್ಯ, ಪೋಷಕರ ಜವಾಬ್ದಾರಿ, ಪ್ರಜಾತಾಂತ್ರಿಕ-ಮೂಲಭೂತ ಹಕ್ಕುಗಳನ್ನು ವಿವರಿಸುತ್ತ ನೀಡುವ ವಿವರಣೆ ಮತ್ತು ತಳೆಯುವ ನಿರ್ಧಾರಗಳೇ ಸಾಕ್ಷಿ. ಆಳುವ ವರ್ಗಗಳು, ಪ್ರಭುತ್ವಗಳ ಅಭಿವೃದ್ಧಿಯ ಕಲ್ಪನೆಯೇ ಅದರ ನಿಜವಾದ ಅಭಿವೃದ್ಧಿಯ ಗ್ರಹಿಕೆ. ಕೇಂದ್ರ-ರಾಜ್ಯ ಸರ್ಕಾರಗಳು, ಮಾಧ್ಯಮಗಳು, ಉದ್ಯಮಿಗಳು, ಜಾಗತೀಕರಣದ

ಸೂತ್ರಧಾರಿಗಳು ಹೇಳುವ ಅಭಿವೃದ್ಧಿಯ ಮಂತ್ರವೇ ಅದರ ವೈಚಾರಿಕತೆಯ ಮುಖ್ಯ ನೆಲೆ. ಇಂತಹ ಅಭಿವೃದ್ಧಿಯ ಕ್ಷೇತ್ರಗಳಲ್ಲಿನ ಉದ್ಯೋಗಾವಕಾಶಗಳನ್ನು ಪಡೆದುಕೊಳ್ಳಲು ಇಂಗ್ಲಿಷ್ ಅನಿವಾರ್ಯವೆಂದು ಕೋರ್ಟು ಭಾವಿಸುತ್ತದೆ. ಇಲ್ಲಿನ ಅಭಿವೃದ್ಧಿಯ ಕಲ್ಪನೆ ಮತ್ತು ಇಂಗ್ಲಿಷಿನ ಬೇಡಿಕೆ ವಂಚನೆಯಿಂದ ಕೂಡಿರಲು ಸಾಧ್ಯವಿರಬಹುದೆಂಬ ಸಂದೇಹವೂ ಮೂಡುವುದಿಲ್ಲ. ಇಂತಹ ವೈಚಾರಿಕ ಚಿಂತನೆ ಜನಸಾಮಾನ್ಯರ ಅಭಿವೃದ್ಧಿಯ ಪರವಾದ ಚಿಂತನೆಯಾಗಿರದೆ ಶ್ರೀಮಂತರ ಮತ್ತು ಬಂಡವಾಳಶಾಹಿ ಪರವಾದ ಚಿಂತನೆಯಾಗಿದೆ ಎಂಬುದನ್ನು ಸೂಚಿಸುತ್ತದೆ. ನ್ಯಾಯಾಲಯವು ಸಂವಿಧಾನವೇ ತನ್ನ ಕಾರ್ಯವ್ಯಾಪ್ತಿಯ ಚೌಕಟ್ಟೆಂದು ಭಾವಿಸಿದರೂ ಅದರ ತೀರ್ಪು ಸಂವಿಧಾನದಲ್ಲಿರುವ ಸಮಾನತೆಯ ಆಶಯಕ್ಕೆ ವಿರುದ್ಧವಾಗಿದೆ, ಉಳ್ಳವರ ಹಿತಾಸಕ್ತಿಯನ್ನು ಕಾಪಾಡುತ್ತಿರುತ್ತದೆ ಎಂಬುದು ಗಮನಾರ್ಹ ಸಂಗತಿ.

ಮೂರು, ಜಾಗತೀಕರಣ ಜನಭಾಷೆಗಳ ಸಾರ್ವಭೌಮತ್ವವನ್ನು ಹೇಗೆ ನಾಶ ಮಾಡಬಲ್ಲದು ಎಂಬುದನ್ನು ಅರ್ಥಮಾಡಿಕೊಳ್ಳುವುದಕ್ಕೆ ಇದು ಉತ್ತಮ ಉದಾಹರಣೆ. ಸಮಾಜದ ಹಲವು ಕ್ಷೇತ್ರಗಳ ಮೇಲೆ ಪರಿಣಾಮ ಬೀರಿದಂತೆ ಜನಭಾಷೆಗಳ ಮೇಲೂ ಪ್ರಭಾವ ಬೀರಿದೆ. ವಿವಿಧ ವರ್ಗಗಳ ವೈಚಾರಿಕತೆಯನ್ನು ಪಲ್ಲಟಿಸಿ ಜಾಗತೀಕರಣದ ಪರವಾದ ನಿಲುವು ತಳೆಯಲು ಒತ್ತಾಯಿಸಿದಂತೆ ಕೋರ್ಟನ್ನೂ, ಅದರ ವೈಚಾರಿಕತೆಯನ್ನೂ ಪ್ರಭಾವಿಸಿದೆ. ತೀರ್ಪಿನ ಮೊದಲ ಸಾಲುಗಳಲ್ಲೇ ರಾಷ್ಟ್ರೀಯ ಅಭಿವೃದ್ಧಿ ಮತ್ತು ಶಿಕ್ಷಣದ ಅಂತರ್‌ಸಂಬಂಧಗಳನ್ನು ಜಾಗತೀಕರಣಗಳ ಹಿನ್ನೆಲೆಯಲ್ಲಿ ಪ್ರಸ್ತಾಪಿಸಲಾಗಿದೆ. ಇಂಗ್ಲಿಷಿನ ಅನಿವಾರ್ಯತೆಯನ್ನು ಗುರುತಿಸಲು ಪ್ರಯತ್ನಿಸಲಾಗಿದೆ. ರಾಷ್ಟ್ರೀಯ ಅಭಿವೃದ್ಧಿಗೆ ಸೂಕ್ತ ಶಿಕ್ಷಣ ನೀತಿಯ ಬಗೆಗೆ ಸೂಚಿಸಲಾಗಿದೆ. ಪ್ರಜಾತಂತ್ರ ವ್ಯವಸ್ಥೆಯಲ್ಲಿ ಶಿಕ್ಷಣವು ವ್ಯಕ್ತಿಯ ವೈಯಕ್ತಿಕ ಬೆಳವಣಿಗೆಗೆ ನೀಡಬೇಕಿರುವ ಒತ್ತನ್ನು ಕುರಿತು ಹೇಳಲಾಗಿದೆ. ಇಲ್ಲಿ ಜಾಗತೀಕರಣವಾದಿಗಳು ಬೋಧಿಸುವ ವ್ಯಕ್ತಿಸ್ವಾತಂತ್ರ್ಯ, ಶಿಕ್ಷಣದ ಗಳಿಕೆ ಮತ್ತು ಆ ಮೂಲಕ ಗಳಿಸಿಕೊಳ್ಳಬಹುದಾದ 'ವಿಪುಲ' ಜಾಗತಿಕ ಅವಕಾಶಗಳ ಆಸೆಗಳ ವಾದವನ್ನು ನ್ಯಾಯಾಲಯವು ಸಮರ್ಥಿಸಿದೆ. ಜಾಗತೀಕರಣ ಬೆಳೆಸುತ್ತಿರುವ ಸಾಮಾಜಿಕ ಮತ್ತು ಅಭಿವೃದ್ಧಿಯ ಮೌಲ್ಯಗಳೇ 'ಪ್ರಧಾನ ಮೌಲ್ಯ'ಗಳಾಗಿ ಕಾಣಿಸಿಕೊಂಡಿವೆ. ಇಲ್ಲಿ ಕಾನೂನನ್ನು ಬಳಸಿಯೇ ಹೇಗೆ ಅಲ್ಪಸಂಖ್ಯಾತ 'ವರ್ಗದ' ಹಿತಕ್ಕಾಗಿ ಬಹುಸಂಖ್ಯಾತರ ಹಿತಾಸಕ್ತಿಯನ್ನು ಬಲಿಗೊಡಲಾಗುತ್ತಿದೆ ಎನ್ನುವುದು ಸ್ಪಷ್ಟವಾಗುತ್ತದೆ. ಜಾಗತೀಕರಣ ಸಂವಿಧಾನ ಮತ್ತು ಕಾನೂನುಗಳ ಮೇಲೆ ಹೇಗೆ ದಾಳಿ ಮಾಡುತ್ತಿದೆ, ಅದರ ನೆರಳಿನಲ್ಲಿ ಕಾನೂನುಗಳು ಹೇಗೆ ಮರುವ್ಯಾಖ್ಯಾನಕ್ಕೆ ಒಳಗಾಗುತ್ತವೆ ಎಂಬುದಕ್ಕೆ ಈ ತೀರ್ಪು ಉದಾಹರಣೆ. ಸ್ಥಳೀಯ ಹಿತಾಸಕ್ತಿಗಳು ಮತ್ತು ಜಾಗತಿಕ ಹಿತಾಸಕ್ತಿಗಳ ಸಂಘರ್ಷಕ್ಕೂ ಇದು ಉದಾಹರಣೆ.

ನಾಲ್ಕು, ಸರ್ಕಾರದ ಭಾಷಾ ನೀತಿಯನ್ನು ಅನುದಾನರಹಿತ ಖಾಸಗಿ ಶಾಲೆಗಳು ಕಡ್ಡಾಯವಾಗಿ ಪಾಲಿಸುವಂತೆ ಒತ್ತಾಯ ಹೇರಲು ಸರ್ಕಾರಕ್ಕೆ ಯಾವ ಅಧಿಕಾರವೂ ಇಲ್ಲ ಎಂದಿದೆ. ಹಾಗೆ ಮಾಡುವುದು ಸಂಧಾನದ ೧೯/೧(ಜಿ), ೨೬ ಮತ್ತು ೩೦/೧ನೆಯ ಕಲಮುಗಳ ಉಲ್ಲಂಘನೆಯಾಗುತ್ತದೆ ಎಂದಿದೆ. ಸರ್ಕಾರವು ಸರ್ಕಾರೀ ಶಾಲೆಗಳಲ್ಲಿ ಮಾತ್ರ ತನ್ನ ಭಾಷಾ ನೀತಿಯನ್ನು ಜಾರಿಗೊಳಿಸಬಹುದು. ಸರ್ಕಾರಕ್ಕೆ ಮೂಲಭೂತ ಸೌಲಭ್ಯಗಳನ್ನು ಸೃಷ್ಟಿಸುವ ಹಕ್ಕಿದೆಯೇ ಹೊರತು ಭಾಷಾ ನೀತಿಯನ್ನು ಹೇರುವ ಹಕ್ಕಿಲ್ಲವೆಂದಿದೆ. ಹೀಗೆ ಹೇಳುತ್ತ ಖಾಸಗಿಯವರಿಗೆ ಶಾಲೆಗಳನ್ನು ನಡೆಸಲು ಮುಕ್ತ ಅವಕಾಶ ನೀಡಬೇಕು; ಅದು ಸಂವಿಧಾನಬದ್ಧ ಹಕ್ಕು ಎಂದಿದೆ. ಹಾಗೆ ಮಾಡುವುದು ಅವರ ಮೂಲಭೂತ ಹಕ್ಕುಗಳ ರಕ್ಷಣೆಯ ಭಾಗ ಎಂದಿದೆ. ಅದು ಅವರ ಅಭಿವ್ಯಕ್ತಿ ಸ್ವಾತಂತ್ರ್ಯದ ವಿಚಾರವಾಗಿದ್ದು ಅದನ್ನು ಗೌರವಿಸಬೇಕೆಂದಿದೆ. ವಿದ್ಯಾರ್ಥಿಗಳು ಯಾವ ಮಾಧ್ಯಮದಲ್ಲಿಯಾದರೂ ಕಲಿಯಬಹುದು, ಕಲಿಸಬಹುದು. ಇಂತಹದ್ದೇ ಮಾಧ್ಯಮವನ್ನು ಆಯ್ಕೆ ಮಾಡಿಕೊಳ್ಳಬೇಕೆಂದು ಮಕ್ಕಳ ಮೇಲೂ, ಇಂತಹದ್ದೇ ಮಾಧ್ಯಮಕ್ಕೆ ಸೇರಿಸಬೇಕೆಂದು ಪೋಷಕರ ಮೇಲೂ, ಮಾತೃಭಾಷೆ ಅಥವಾ ಕನ್ನಡದಲ್ಲಿಯೇ ಬೋಧಿಸಬೇಕೆಂದು ಆಡಳಿತ ಮಂಡಳಿಗಳ ಮೇಲೂ ಒತ್ತಾಯ ಹೇರಕೂಡದೆಂದು ಸೂಚಿಸಿದೆ. ಇದು ಹೊರನೋಟಕ್ಕೆ ಬಹಳ ಪ್ರಜಾತಾಂತ್ರಿಕವಾಗಿ ಕಾಣಿಸುತ್ತದೆ. ಆದರೆ ಇದರಲ್ಲಿ ಸಾಮಾಜಿಕ ಅಸಮಾನತೆಯನ್ನು



ವಿಪರೀತ ಆಶ್ವಾಸನೆಗಳನ್ನು ಆಸ್ವಾದಿಸಿದ್ರೆ ಕಿವಿ ಸೋರದೆ ಇರುತ್ತದೆಯೆ?

ಕಾಪಾಡುವ ಹುನ್ನಾರಗಳಿವೆ. ಸರ್ಕಾರಿ ಶಾಲೆಗಳಿಗೆ ಒಂದು ನೀತಿ, ಖಾಸಗಿ ಶಾಲೆಗಳಿಗೆ ಒಂದು ನೀತಿಯನ್ನು ಸ್ಥಾಪಿಸುವುದು ಅನ್ಯಾಯದ ಮಾರ್ಗವೆಂಬುದು ಕೋರ್ಟಿನ ಗಮನಕ್ಕೆ ಬಾರದಿರುವುದು ದುರಂತ. ಇಂತಹ ಹುನ್ನಾರಗಳನ್ನು ಬಳಸಿಯೇ ಕನ್ನಡ ಮತ್ತು ಇಂಗ್ಲಿಷ್ ಮಾಧ್ಯಮದ ವಿದ್ಯಾರ್ಥಿಗಳ ನಡುವೆ, ಮತ್ತು ಹಳ್ಳಿ ಮತ್ತು ನಗರಗಳ ನಡುವೆ ವ್ಯಾಪಕ ಅಸಮಾನತೆಯನ್ನು ಈವರೆಗೆ ಸೃಷ್ಟಿಸಲಾಗಿದೆ.

ಸರ್ಕಾರದ ವಾದವನ್ನು ಆಲಿಸಿರುವ ನ್ಯಾಯಾಲಯ, ಅನುದಾನ ನೀಡದ ಶಾಲೆಗಳ ಮೇಲೆ ತನ್ನ ನೀತಿಗಳನ್ನು ಜಾರಿಗೊಳಿಸಲು ಸರ್ಕಾರಕ್ಕೆ ಯಾವ ಹಕ್ಕಿದೆ ಎಂದು ಪ್ರಶ್ನಿಸಿದೆ. ಆದರೆ ಖಾಸಗಿ ಸಂಸ್ಥೆ ಎನ್ನುವುದು ಸಂಪೂರ್ಣ ಸ್ವಾಯತ್ತ ವ್ಯವಸ್ಥೆಯೇ? ಸರ್ಕಾರಿ ಶಾಲೆಗಳಿಗೊಂದು ಭಾಷಾನೀತಿ ಮತ್ತು ಖಾಸಗಿ ಶಾಲೆಗಳಿಗೊಂದು ಭಾಷಾನೀತಿ ಇರುವುದು ನ್ಯಾಯವೇ? ಇತರೆ ವ್ಯಾಪಾರದ ಅಂಗಡಿಗಳಂತೆ ಶಿಕ್ಷಣ ಸಂಸ್ಥೆಗಳೂ 'ವ್ಯಾಪಾರಿ ಮಳಿಗೆಗಳು' ಎಂಬುದು ನ್ಯಾಯವೇ? ಅನುದಾನ ನೀಡದ ಯಾವ ಚಟುವಟಿಕೆಯ ಮೇಲೂ ಸರ್ಕಾರಕ್ಕೆ ನಿಯಂತ್ರಣ ಇರುವುದಿಲ್ಲವೇ? 'ಖಾಸಗಿ ಅಸ್ಮಿತೆ' ಎನ್ನುವುದು ಸಂವಿಧಾನದ ತಳಹದಿಯನ್ನು ಮತ್ತು ಇತರರ ಮೂಲಭೂತ ಹಕ್ಕುಗಳನ್ನು ಬುಡಮೇಲು ಮಾಡುತ್ತಿದ್ದರೂ ಅದನ್ನು ನಿಯಂತ್ರಿಸುವ ಹಕ್ಕು ಸರ್ಕಾರಕ್ಕಿಲ್ಲವೇ? ಅನುದಾನ ಇಲ್ಲವೆಂದಕೂಡಲೇ ಬೇಕಾದ ಶಿಕ್ಷಣ ಮಾಧ್ಯಮವನ್ನು ಅಳವಡಿಸಲು ಸ್ವಾತಂತ್ರ್ಯವಿದೆಯೇ? ನಾಡಿನ ಒಟ್ಟಾರೆ ಹಿತಾಸಕ್ತಿಯಲ್ಲಿ ಖಾಸಗಿಯವರ ಜವಾಬ್ದಾರಿ ಏನು? – ಇಂತಹ ಹಲವು ಪ್ರಶ್ನೆಗಳು ಇಲ್ಲಿ ಹುಟ್ಟುತ್ತವೆ.

ಐದು, ಖಾಸಗಿಯವರ ಹಕ್ಕುಗಳನ್ನು ಈ ತೀರ್ಪಿನಲ್ಲಿ ಎತ್ತಿಹಿಡಿದಿರುವಂತೆ ಭಾಷಾ ಅಲ್ಪಸಂಖ್ಯಾತರ ಮತ್ತು ಧಾರ್ಮಿಕ ಅಲ್ಪಸಂಖ್ಯಾತರ ಹಕ್ಕುಗಳ ರಕ್ಷಣೆಯನ್ನು ಎತ್ತಿಹಿಡಿಯಲಾಗಿದೆ. ಭಾಷಿಕ, ಧಾರ್ಮಿಕ ಅಲ್ಪಸಂಖ್ಯಾತರ ಹಕ್ಕುಗಳನ್ನು ರಕ್ಷಿಸಬೇಕಿರುವುದು ಪ್ರತಿಯೊಬ್ಬ ಪ್ರಜಾತಂತ್ರವಾದಿಯ ಕರ್ತವ್ಯ. ಆದರೆ 'ಅಲ್ಪಸಂಖ್ಯಾತ' ಎಂದುಕೊಳ್ಳುತ್ತಿರುವ ಸಂಸ್ಥೆಗಳು ನಿಜವಾಗಿಯೂ ಅಲ್ಪಸಂಖ್ಯಾತರ ಹಕ್ಕುಗಳನ್ನು ರಕ್ಷಿಸುತ್ತಿವೆಯೇ? ಅಲ್ಪಸಂಖ್ಯಾತರ ಹೆಸರಿನಲ್ಲಿ ಅಲ್ಪಸಂಖ್ಯಾತರನ್ನು ವಂಚಿಸುತ್ತಿವೆ. ಇಂಗ್ಲಿಷ್ ಶಿಕ್ಷಣವನ್ನು ಮಾರುವ ಮೂಲಕ ಹಣದಾಹಿಗಳಾಗಿವೆ. ನಮ್ಮ ರಾಜ್ಯದಲ್ಲಿ ಇಂಗ್ಲಿಷ್‌ಅನ್ನು ಮಾತೃಭಾಷೆಯನ್ನಾಗಿ ಉಳ್ಳ ಎಷ್ಟು ಸಾವಿರ ಅಲ್ಪಸಂಖ್ಯಾತರಿದ್ದಾರೆ? ಇದ್ದರೆ, ಅವರು ಆಂಗ್ಲೊ-ಇಂಡಿಯನ್ನರು ಮಾತ್ರ. ಉಳಿದಂತೆ ಇನ್ನಾವ ಧಾರ್ಮಿಕ, ಭಾಷಿಕ ಅಲ್ಪಸಂಖ್ಯಾತರು ಇಂಗ್ಲಿಷನ್ನು ಮಾತೃಭಾಷೆಯಾಗಿ ಹೊಂದಿದ್ದಾರೆ? ತಮ್ಮ ಭಾಷೆಗಳ ಮೂಲಕ ಶಿಕ್ಷಣವನ್ನು ನೀಡುತ್ತ ನಿಜವಾದ ಅಲ್ಪಸಂಖ್ಯಾತ ವರ್ಗದ ಧಾರ್ಮಿಕ, ಭಾಷಿಕ ಮತ್ತು ಸಾಂಸ್ಕೃತಿಕ ಅನನ್ಯತೆಯನ್ನು ಕಾಪಾಡಿಕೊಳ್ಳುತ್ತಿವೆ?

ಬಹುತೇಕ ಸಂಸ್ಥೆಗಳು ಅಲ್ಪಸಂಖ್ಯಾತ ಎಂಬ ಹೆಸರನ್ನು ಹಣದ ಲೂಟಿಗೆ ಬಳಸಿಕೊಳ್ಳುತ್ತಿವೆ. ಚಾರಿಟಿ ಅಥವಾ ಸಮಾಜ ಸೇವೆಯ ಹೆಸರಿನಲ್ಲಿ ಆರಂಭಗೊಂಡ ಸಂಸ್ಥೆಗಳು ವ್ಯಾಪಾರಿ ಕೇಂದ್ರಗಳಾಗಿ ಬೆಳೆದುನಿಂತಿವೆ. ಕೆಲವು ಉರ್ದು ಮಾಧ್ಯಮದ ಪ್ರಾಥಮಿಕ ಶಾಲೆಗಳನ್ನು ಬಿಟ್ಟರೆ ಉಳಿದಂತೆ ಎಲ್ಲ ಧಾರ್ಮಿಕ ಅಲ್ಪಸಂಖ್ಯಾತರ ಸಂಸ್ಥೆಗಳು ಇಂಗ್ಲಿಷಿನಲ್ಲಿ ನಡೆಯುತ್ತಿವೆ. ಇಲ್ಲಿ ಧಾರ್ಮಿಕ ಅಲ್ಪಸಂಖ್ಯಾತರಿಗಿಂತ, ಶ್ರೀಮಂತ ಅಥವಾ ಮಧ್ಯಮ ವರ್ಗದ ಅಲ್ಪಸಂಖ್ಯಾತ ವರ್ಗದ ಹಿತಾಸಕ್ತಿಗೆ ಸೇವೆ ಸಲ್ಲಿಸುತ್ತಿವೆ. ಇದಲ್ಲದೆ ಧಾರ್ಮಿಕ ಅಲ್ಪ ಸಂಖ್ಯಾತರಿಗೆ ನೀಡಿರುವ ಅವಕಾಶವನ್ನು ಕೆಲವು ಖಾಸಗಿ ಸಂಸ್ಥೆಗಳು ಇಂಗ್ಲಿಷಿನ ಪ್ರಾಬಲ್ಯವನ್ನು ಉಳಿಸಿಕೊಳ್ಳಲು ದುರ್ಬಳಕೆ ಮಾಡಿಕೊಳ್ಳುತ್ತಿವೆ. ಹಾಗಾಗಿ ಇಲ್ಲಿನ ಅಲ್ಪಸಂಖ್ಯಾತ ಎನ್ನುವುದು ಒಂದು ಮಿಥ್, ಅಷ್ಟೆ. ಅದನ್ನು ಮುಂದಿಟ್ಟು ವಂಚಿಸುತ್ತಿರುವುದು ಕಾನೂನುಬಾಹಿರ, ಸಂವಿಧಾನ ವಿರೋಧಿ ಅಥವಾ ನೀತಿರಾಹಿತ್ಯವಾದುದು ಎಂದು ಅನ್ನಿಸುವುದೇ ಇಲ್ಲ. ಹಾಗಾಗಿ ಪ್ರಸ್ತುತ ತೀರ್ಪಿನ ಸಂದರ್ಭದಲ್ಲಿ ಅಲ್ಪಸಂಖ್ಯಾತರ ಸಮಸ್ಯೆ ಒಂದು ಸಮಸ್ಯೆಯಲ್ಲ. ಅವರ ಭಾಷಿಕ ಉಳಿವಿನ ಪ್ರಶ್ನೆಯಾಗಿಯೂ ಅದು ಉಳಿದಿಲ್ಲ. ಮಾತೃಭಾಷೆಯ ಶಿಕ್ಷಣ ಅಥವಾ ಕನ್ನಡ ಮಾಧ್ಯಮದ ಶಿಕ್ಷಣ ಅವರ ಹಕ್ಕುಗಳನ್ನು ನಾಶಮಾಡುವ ಹಂತದಲ್ಲಿಯೂ ಇಲ್ಲ. ಇಲ್ಲಿ ನಿಜವಾದ ಮತ್ತು ಗಂಭೀರವಾದ ಸಮಸ್ಯೆ ಇರುವುದು ಬಹುಸಂಖ್ಯಾತರಾದ ಕನ್ನಡಿಗರ ಉಳಿವಿನ ಪ್ರಶ್ನೆ. ಕನ್ನಡಿಗರ ಒಳಗಿನ ಒಂದು ವರ್ಗ ಸೃಷ್ಟಿಸುತ್ತಿರುವ ಬಿಕ್ಕಟ್ಟುಗಳು ಇಡೀ ಸಮುದಾಯವನ್ನು ಇಕ್ಕಟ್ಟಿಗೆ ಸಿಕ್ಕಿಸುತ್ತಿರುವ ಸಮಸ್ಯೆ. ಇದು ಕನ್ನಡಿಗರೊಳಗಿನ ವರ್ಗ ಸಂಘರ್ಷ ಸಮಸ್ಯೆ. ಕನ್ನಡ ಹಾಗೂ ಜಾಗತಿಕ ಭಾಷೆಯೊಂದರ ಯಾಜಮಾನ್ಯದ ಜತೆಗಿನ ಸಂಘರ್ಷದ ಪ್ರಶ್ನೆ ಇಲ್ಲಿ ಮುಖ್ಯವಾಗಿದೆ

ಆರು, ಕನ್ನಡ ಸಾಹಿತ್ಯದ ಅಭಿವೃದ್ಧಿಗೆ ಇಂಗ್ಲಿಷ್ ಕಾರಣ ಎಂಬ ನಿಲುವನ್ನು ಕೋರ್ಟು ತಾಳಿರುವುದು ಆಶ್ಚರ್ಯ ಹುಟ್ಟಿಸುತ್ತದೆ. ಇದನ್ನು ಸಮರ್ಥಿಸಲು ಸಂಕ್ಷಿಪ್ತವಾದ ಕನ್ನಡ ಸಾಹಿತ್ಯ ಚರಿತ್ರೆಯ ಒಂದು ಪುಟ್ಟ ಅಧ್ಯಾಯವನ್ನೇ ತೀರ್ಪಿನಲ್ಲಿ ಸೇರಿಸಲಾಗಿದೆ. ಇಡೀ ಕನ್ನಡ ಸಾಹಿತ್ಯ ಚರಿತ್ರೆಯನ್ನು ಉಲ್ಲೇಖಿಸುತ್ತ ಇದೆಲ್ಲವೂ ಸಾಧ್ಯವಾಗಿರುವುದು ಇಂಗ್ಲಿಷ್ ಶಿಕ್ಷಣದ ಪರಿಣಾಮವಾಗಿ ಎಂದು ಹೇಳಿದೆ. ಇಂಗ್ಲಿಷಿನ ಭೀತಿಯಿಲ್ಲದ ೧೭, ೧೮ ಮತ್ತು ೧೯ನೇ ಶತಮಾನದಲ್ಲಿ ಕನ್ನಡ ಸಾಹಿತ್ಯ ದುರ್ಬಲವಾಗಿರುವುದನ್ನು ಸೂಚಿಸಿ ೨೦ನೇ ಶತಮಾನದಲ್ಲಿ ಇಂಗ್ಲಿಷ್ ಶಿಕ್ಷಣದ ಪ್ರಭಾವದಿಂದ ಕನ್ನಡ ಸಾಹಿತ್ಯ ಬೆಳೆದು ಕನ್ನಡಕ್ಕೆ ಏಳು ಜ್ಞಾನಪೀಠ ಪ್ರಶಸ್ತಿಗಳು ಬರಲು ಕಾರಣವಾಯಿತು ಎಂದಿದೆ. ಇದನ್ನು ತೀರ್ಪಿನ ಮೂಲರೂಪವನ್ನು ಓದಿಯೇ ಆಶ್ಚರ್ಯಪಡಬೇಕು, ವಿಷಾದಿಸಬೇಕು. ಇದನ್ನು ಹೇಳುವ ಸಂದರ್ಭದಲ್ಲಿ ಇಂಗ್ಲಿಷಿನಿಂದ ಆಗಿರಬಹುದಾದ ಹಾನಿಯ ಬಗೆಗೆ ಒಂದು ಮಾತನ್ನೂ ಉಲ್ಲೇಖಿಸದಿರುವುದು ಆಶ್ಚರ್ಯದ ಸಂಗತಿ. ಅಲ್ಲದೆ, ಇಂಗ್ಲಿಷ್ಅನ್ನು ಕಲಿಯಬಾರದು, ಆಧುನಿಕ ಜಗತ್ತಿನ ಅಗತ್ಯಗಳಿಗೆ ಪೂರೈಸಿಕೊಳ್ಳಬಾರದೆಂದು ಯಾರೂ ವಾದಿಸುತ್ತಿಲ್ಲ. ಅದನ್ನು ಒಂದು ಭಾಷೆಯಾಗಿ ಚೆನ್ನಾಗಿ ಕಲಿಸಿ, ಇಂಗ್ಲಿಷ್ ಮಾಧ್ಯಮದ ಕಲಿಕೆಯಿಂದ ಸಂಭವಿಸುತ್ತಿರುವ ಹಾನಿಯನ್ನು ತಪ್ಪಿಸಬೇಕೆಂಬುದೇ ಎಲ್ಲರ ಕಾಳಜಿ. ಇದನ್ನು ಅರ್ಥೈಸಿಕೊಳ್ಳದೇ ಪ್ರಾಥಮಿಕ ಶಿಕ್ಷಣದಲ್ಲಿ ಇಂಗ್ಲಿಷ್ ಮಾಧ್ಯಮದ ಬದಲಿಗೆ ಮಾತೃಭಾಷೆ ಅಥವಾ ಕನ್ನಡವನ್ನು ಮಾಧ್ಯಮದ ಭಾಷೆಯಾಗಿ ಮಾಡುವಂತೆ ಒತ್ತಾಯಿಸುವುದನ್ನೇ ಇಂಗ್ಲಿಷ್ ವಿರೋಧಿ ಧೋರಣೆಯೆಂದು ವ್ಯಾಖ್ಯಾನಿಸುವುದು ಎಂತಹ ತರ್ಕಕ್ರಮ ?

ಏಳು, ಸ್ವಾತಂತ್ರ್ಯಾನಂತರ ರಾಜ್ಯ-ರಾಷ್ಟ್ರಮಟ್ಟದಲ್ಲಿ ಭಾಷೆಗಳ ಬಗೆಗೆ ಕೈಗೊಂಡಿರುವ ಯೋಜನೆಗಳಲ್ಲಿರುವ ದೋಷಗಳು, ರಾಜ್ಯ-ಕೇಂದ್ರ ಸರ್ಕಾರಗಳ ಭಾಷೆಯ ಬಗೆಗಿನ ನಿರ್ಲಕ್ಷ್ಯ, ಇಂಗ್ಲಿಷ್-ಹಿಂದಿ ಭಾಷೆಗಳ ಬಗೆಗಿನ ವ್ಯಾಮೋಹ, ಕನ್ನಡ, ತಮಿಳು, ತೆಲುಗು, ಬಂಗಾಳಿ ಮುಂತಾದ ಜನ ಭಾಷೆಗಳ ಬಗೆಗೆ ಕೇಂದ್ರ ಸರ್ಕಾರಕ್ಕೆ ಕಾಳಜಿ ಮತ್ತು ಜವಾಬ್ದಾರಿ ಇಲ್ಲದಿರುವುದು ಸಮಸ್ಯೆ ಸಂಕೀರ್ಣವಾಗಿ ಬೆಳೆಯಲು ಕಾರಣ. ಮೇಲೆ ಹೇಳಿದಂತೆ ಜನಭಾಷೆಗಳನ್ನು ಅಭಿವೃದ್ಧಿಪಡಿಸುವ ದೃಷ್ಟಿಯಿಂದ ಈವರೆಗೂ ಸೂಕ್ತವಾದ ಭಾಷಾ ನೀತಿ-ಶಿಕ್ಷಣ ನೀತಿಯನ್ನು ರೂಪಿಸಿಲ್ಲ. ಇದಕ್ಕೆ ಈ ಕ್ಷೇತ್ರದ ಪರಿಣತರ, ಚಳವಳಿಕಾರರ ಅಸಹಾಯಕತೆ ಮತ್ತು ಜನರಲ್ಲಿರುವ ಅಜ್ಞಾನವೂ ಕಾರಣ. ಸಮಸ್ಯೆಯನ್ನು ಅರ್ಥ ಮಾಡಿಕೊಂಡವರು ತಮ್ಮ ಅಸಹಾಯಕತೆಯನ್ನು ಮೀರಿ ಸಮಸ್ಯೆಯ ನಿವಾರಣೆಗೆ ಮುಂದಾಗದಿರುವುದೂ ಇದೆ. ಭಾಷಾ ನೀತಿ ಮತ್ತು ಶಿಕ್ಷಣ ನೀತಿಗಳನ್ನು ರೂಪಿಸಲು ಸರ್ಕಾರವನ್ನು ಒತ್ತಾಯಿಸುವುದರಲ್ಲಿ ಸೋತಿರುವುದೂ ಕಾರಣ. ಮಾತೃಭಾಷೆ ಅಥವಾ ಕನ್ನಡ ಮಾಧ್ಯಮದ ಶಿಕ್ಷಣವನ್ನು ವೈಜ್ಞಾನಿಕ ನೆಲೆಯಲ್ಲಿ ರೂಪಿಸುವುದರ ಜೊತೆಗೆ ಸಾರ್ವಜನಿಕರಿಗೆ ತಿಳಿಯಪಡಿಸಿ, ಸಮಸ್ಯೆಯನ್ನು ಪ್ರಜಾತಾಂತ್ರಿಕವಾಗಿ ಬಗೆಹರಿಸಬೇಕಿತ್ತು. ಸರ್ಕಾರಗಳ ಅಪ್ರಾಮಾಣಿಕತೆ ಇದಕ್ಕೆ ಅವಕಾಶ ನೀಡಿಲ್ಲ. ಕನ್ನಡವನ್ನು ಕರ್ನಾಟಕದ ಸಂಪೂರ್ಣ ಆಡಳಿತ ಭಾಷೆಯಾಗಿ ಮಾಡಲಿಲ್ಲ. ಎಲ್ಲ ವಲಯದಲ್ಲಿಯೂ ಕನ್ನಡವನ್ನು ಜಾರಿಗೊಳಿಸಿ ನಿತ್ಯ ವ್ಯವಹಾರದಲ್ಲಿ ಅನಿವಾರ್ಯವಾಗಿಸಿದ್ದರೆ ಈ ಸಮಸ್ಯೆ ಬಗೆಹರಿದಿರುತ್ತಿತ್ತು.

ಒಟ್ಟು, ಈಗಿನ ವಿದ್ಯಮಾನಗಳನ್ನು ಗಮನಿಸಿದರೆ ಕೋರ್ಟುಗಳಿಂದ ಜನಭಾಷೆಗಳಿಗೆ ನ್ಯಾಯ ದೊರೆಯುವ ಸಾಧ್ಯತೆಗಳು ಕಡಿಮೆ. ಏನಿದ್ದರೂ ಸೂಕ್ತ ಜನಾಭಿಪ್ರಾಯವನ್ನು ರೂಪಿಸುವ ಮೂಲಕ ಸರ್ಕಾರಗಳ ಮೇಲೆ ಒತ್ತಡ ತರಬೇಕು. ಆ ಮೂಲಕ ಸೂಕ್ತ ಭಾಷಾ ನೀತಿಯನ್ನು ರೂಪಿಸುವಂತೆ ಒತ್ತಾಯಿಸಬೇಕು. ಈ ಮಧ್ಯೆ ಇಂಗ್ಲಿಷ್ ಬಗೆಗೆ ರೂಪುಗೊಂಡಿರುವ ಭ್ರಮೆಯನ್ನು ಹೋಗಲಾಡಿಸುವ ಕಾರ್ಯವು ಮುಖ್ಯ. ಕನ್ನಡ ಶಾಲೆಗಳ ಗುಣಮಟ್ಟ ಸುಧಾರಣೆ, ಸಮಾನ ಭಾಷಾ ಮತ್ತು ಶಿಕ್ಷಣ ನೀತಿಯನ್ನು ರೂಪಿಸುವ ಕೆಲಸವಾಗಬೇಕಿದೆ. ನ್ಯಾಯ ನೀಡುವ ಕೋರ್ಟಿನ ಭಾಷೆಯನ್ನು ಮೊದಲು ಕನ್ನಡವಾಗಿಸಬೇಕಿದೆ. ಸರ್ಕಾರಿ ಮತ್ತು ಖಾಸಗಿ ಕ್ಷೇತ್ರಗಳೆರಡರಲ್ಲೂ ಕನ್ನಡ ಆಡಳಿತ ಭಾಷೆಯಾಗುವಂತೆ ಮಾಡಬೇಕು. ಇದನ್ನು ಸಾಧಿಸಲು ಸರ್ಕಾರಗಳ ಮೇಲೆ ಜನರು ಒತ್ತಡ ತರಬೇಕು. ಹೊಸ ಕಾನೂನನ್ನು ರೂಪಿಸುವಂತೆ ಮಾಡಬೇಕು. ಸಂವಿಧಾನಕ್ಕೆ ತಿದ್ದುಪಡಿ ತರುವ ಮೂಲಕ ನಿಖರವಾದ ಜನರ ಭಾಷಿಕ ನೀತಿಯನ್ನು ರೂಪಿಸುವಂತೆ ಮಾಡಬೇಕು. ಇವೆಲ್ಲವನ್ನು ಯೋಚಿಸಿದರೆ ಇಂದಿನ ಭಾಷಾ ಬಿಕ್ಕಟ್ಟು ಸುಲಭದರಲ್ಲಿ ಬಗೆಹರಿಯುವ ಯಾವ ಲಕ್ಷಣಗಳೂ ಕಾಣುತ್ತಿಲ್ಲ. ಪ್ರಬಲವಾದ ಜನ ಚಳವಳಿಗಳು ಕಾಣುತ್ತಿಲ್ಲ. ಎಲ್ಲವೂ ಗೊಂದಲದಲ್ಲಿದ್ದು, ಒಂದು ಅಸಹಾಯಕ ವಾತಾವರಣ ಎಲ್ಲೆಡೆ ಆವರಿಸಿದೆ. ಇದು ಹತಾಶೆಗೆ ಕಾರಣವಾಗಬಾರದು. ಹತಾಶೆ ಮತ್ತು ರಾಜಕೀಯ ಅಜ್ಞಾನದಿಂದ ಭಾಷಾಂಧತೆ ಬೆಳೆಯುವ ಸಾಧ್ಯತೆ ಇದೆ. ಆದ್ದರಿಂದ ಭಾಷಾ ಸಮಸ್ಯೆಯ ಮೂಲವನ್ನು, ಅದರ ಆಳವನ್ನು ಸರಿಯಾಗಿ ಅರ್ಥಮಾಡಿಕೊಂಡು ಕ್ರಿಯಾಶೀಲ ಹೋರಾಟ ನಡೆಸದ ಹೊರತು ಪ್ರಸ್ತುತದಲ್ಲಿ ದೇಶದಲ್ಲಿ ಉದ್ಭವಿಸಿರುವ ಭಾಷಾ ಸಮಸ್ಯೆಗೆ ಪರಿಹಾರ ಕಂಡುಕೊಳ್ಳುವುದು ಗಗನಕುಸುಮವಾಗುತ್ತದೆ.

**ಡಾ॥ ರಂಗನಾಥ ಕಂಟನಕುಂಟೆ**
ನಂ. ೪೪, ೫ನೇ ಮುಖ್ಯರಸ್ತೆ, ಎಚ್.ವಿ.ಆರ್. ಲೇಔಟ್, ಮಾಗಡಿ ಮುಖ್ಯರಸ್ತೆ, ಬೆಂಗಳೂರು - ೫೬೦ ೦೭೯




"ಜೇಡಿಮಣ್ಣಿನ ಮುರುಕು ಬೊಂಬೆಯ ಹಿಡಿದು ಮಗು ನಲಿಯುವುದ ಕಂಡೆ. ಒಣಗಿದ್ದ ರೊಟ್ಟಿ ಚೂರನೆ ಕಡಿದು ಕುಡಿಕೆಯಲ್ಲಿನ ಕಪ್ಪು ನೀರನೆ ಕುಡಿದು ತೃಪ್ತಿಯನು ಅಪ್ಪಿಕೊಂಡ ರೈತನ್ನ ಕಂಡೆ. ಮಲಿನ ಜಾಗದ ಧೂಳಿನಲಿ ಚಿಣ್ಣಿಕ್ಕಾತ ಚಕ್ಕಂದವಾಡುವ ತಿರುಪೆ ಬಾಲಕರ ಕಂಡೆ. ಸೌಖ್ಯವದು ಸುಲಭ. ಅದಕ್ಕಾಗಿ ಜನ್ಮವನು ತೇಯುವವ್ವ ಏತಕೋ! ನಾನರಿಯೆನಯ್ಯ ಓ! ಸೌಖ್ಯದಾಯಕ ರಂಗಯ್ಯ."

ಇದು ಮಾನ್ಯ ಶ್ರೀ ಎಸ್. ವಿ. ರಂಗಣ್ಣನವರ 'ರಂಗಬಿನ್ನಪ'ದಲ್ಲಿ ನನ್ನ ಮನಸೆಳೆದ ವಚನ. ೨೦ನೆಯ ಶತಮಾನದ ಆದಿಭಾಗದಲ್ಲಿ ಇಂಗ್ಲಿಷ್ ಭಾಷೆಗೆ ಅತ್ಯಂತ ಮಹತ್ವವಿತ್ತು. ಇಂಗ್ಲಿಷ್ ಕಲಿತವರಿಗೆ ಹೆಚ್ಚು ಗೌರವವಿದ್ದ ಕಾಲ. ಆಚಾರ್ಯ ಬಿ. ಎಂ. ಶ್ರೀಕಂಠಯ್ಯನವರು ಇಂಗ್ಲಿಷ್ ಭಾಷೆಯಲ್ಲಿ ಪ್ರಭುತ್ವವನ್ನು ಪಡೆದು ಯಾವ ಸುಮುಹೂರ್ತದಲ್ಲಿ "ಇವಳ ಸೊಬಗನಿವಳ ತೊಟ್ಟು ನೋಡಬಯಸಿದೆ, ಅವಳ ತೊಡಿಗೆ ಇವಳಿಗಿಟ್ಟು ಹಾಡಬಯಸಿದೆ" ಎಂದು ಚಿಂತಿಸಿದರೋ ಆ ಚಿಂತನೆ ಕನ್ನಡ ವಾಙ್ಮಯವನ್ನು ವ್ಯಾಪಿಸಿ ನವೋದಯವನ್ನೇ ಉಂಟುಮಾಡಿತು. ಭಾವಗೀತೆ, ಪ್ರಬಂಧ, ಕಥನಕಾವ್ಯ, ಕಾದಂಬರಿ ಮೊದಲಾದ ಕನ್ನಡದ ವೈವಿಧ್ಯಮಯ ರಚನೆಗಳು ಕನ್ನಡ ಸಾಹಿತ್ಯ ಭಂಡಾರವನ್ನು ತುಂಬಿದುವು. ಸ್ವಚ್ಛಂದ ಛಂದಸ್ಸಿನ ನವ್ಯಕವಿತೆಗಳು ಗೀತ ನಾಟಕಗಳು ರಚಿತವಾದುವು. ಬಿ.ಎಂ.ಶ್ರೀ. ಅವರು ಹೊಸಗನ್ನಡ ಕಾವ್ಯ ಪ್ರಪಂಚಕ್ಕೇ ಆದಿಪುರುಷರಾಗಿ 'ಕನ್ನಡದ ಕಣ್ವ'ರೆನಿಸಿಕೊಂಡರು. ಇಂಗ್ಲಿಷ್ ಪ್ರೊಫೆಸರುಗಳನ್ನು ಕನ್ನಡ ಭಾಷೆ ತನ್ನಕಡೆಗೆ ಸೆಳೆದುಕೊಂಡ ಕಾಲವದು. ಬೆಂಗಳೂರಿನಲ್ಲಿ ಮಾನ್ಯ ಶ್ರೀ ಎ. ಆರ್. ಕೃಷ್ಣಶಾಸ್ತ್ರಿಗಳು, ಮೈಸೂರಿನಲ್ಲಿ ಮಾನ್ಯ ಶ್ರೀ ಬಿ.ಎಂ.ಶ್ರೀ. ಅವರು ನವೋದಯ ಬೀಜವನ್ನು ಬಿತ್ತಿ ಬೆಳೆಸಿದ ಕಾಲ. ಆ ಕಾಲದಲ್ಲಿ ಮುಖ್ಯವಾಗಿ ಇಂಗ್ಲಿಷ್ ಭಾಷೆಯ ಮೇಲೆ ಪ್ರಭುತ್ವವನ್ನು ಪಡೆದು ಕನ್ನಡ ಭಾಷೆಗೆ

# ಎಸ್. ವಿ. ರಂಗಣ್ಣನವರ 'ರಂಗಬಿನ್ನಪ' – ಸುಖದ ಚಿಂತನೆ

■ ಎಚ್. ವಿ. ಸಾವಿತ್ರಮ್ಮ

ಆಕರ್ಷಿತರಾದವರಲ್ಲಿ ಮಾನ್ಯ ಎಸ್. ವಿ. ರಂಗಣ್ಣನವರೂ ಒಬ್ಬರು. ಇದಕ್ಕೆ ಕಾರಣರಾದವರು ಮಾನ್ಯ ಕೃಷ್ಣಶಾಸ್ತ್ರಿಗಳು, ಮಾನ್ಯ ಬಿ.ಎಂ.ಶ್ರೀ. ಮತ್ತು ಮಾನ್ಯ ಟಿ. ಎಸ್. ವೆಂಕಣ್ಣಯ್ಯನವರು. ಎಸ್. ವಿ. ರಂಗಣ್ಣನವರು ಇಂಗ್ಲಿಷ್ ಎಂ.ಎ. ಮಾಡಿ ಪರಿಣತರೆನ್ನಿಸಿಕೊಂಡರೆ ಸಾಲದು, ತಾಯ್ನುಡಿಯ ಸಾರಸರ್ವಸ್ವವನ್ನೂ ತಿಳಿದುಕೊಳ್ಳಬೇಕೆಂದು ಕೃಷ್ಣಶಾಸ್ತ್ರಿಗಳು ಬಿತ್ತಿದ ಬೀಜ ವಿದ್ವನ್ಮಣಿಗಳಾದ ಗುರುಗಳ ಪ್ರಭಾವದಿಂದ ಮೊಳೆತು ಚಿಗುರೊಡೆಯಿತು. ಹಳೆಗನ್ನಡದ ಚಂಪೂ ಗ್ರಂಥಗಳು, ನಡುಗನ್ನಡದ ಪದ್ಯ ಕಾವ್ಯಗಳು, ಶಿವಶರಣರ ವಚನಗಳೆಲ್ಲವನ್ನೂ ಆಮೂಲಾಗ್ರವಾಗಿ ಅಭ್ಯಾಸ ಮಾಡಿದರು. ಪಂಪ, ಹರಿಹರ, ರಾಘವಾಂಕರ ರಚನಾಶೈಲಿಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿ 'ಶೈಲಿಯ ರಂಗಣ್ಣನವರು' ಎನ್ನಿಸಿಕೊಂಡರು. ಮುದ್ದಣನ 'ರಾಮಾಶ್ವಮೇಧ' ಕಾವ್ಯವನ್ನು ಪರಿಶೀಲಿಸಿ ಬರೆದ ಲೇಖನಕ್ಕೆ 'ಸಾಮಾನ್ಯದ ಚಿತ್ರಕ್ಕೆ ಸುವರ್ಣದ ಚೌಕಟ್ಟು' ಎಂದು ನಿರ್ಭಯವಾಗಿ ಟೀಕಿಸಿದರು.

ಕನ್ನಡ ಸಾಹಿತ್ಯ ಪ್ರಕಾರಗಳಲ್ಲಿ ಅವರನ್ನು ಆಕರ್ಷಿಸಿದ್ದು ಶಿವಶರಣರ ವಚನ ಸಾಹಿತ್ಯ. ಜನರೊಡನೆ ಸೇರಿ ನೀತಿಯನ್ನು ಹೇಳಿ, ಶಿವತತ್ವವನ್ನು ತಿಳಿಸಿ ಜನರ ನಡತೆಯ ಅಂಕುಡೊಂಕುಗಳನ್ನು ವಚನಗಳ ಮೂಲಕ ತಿದ್ದಿದವರು ಶಿವಶರಣರು. ವೇದಾಗಮಾದಿಗಳು ದೇವಭಾಷೆಯಲ್ಲಿ ರಚಿತವಾಗಿ ಪೂಜ್ಯವಾದುವುಗಳೆಂದು ನಿಗೂಢವಾಗಿಡಲ್ಪಟ್ಟ ತತ್ತ್ವಗಳನ್ನು ಅಚ್ಚಕನ್ನಡದಲ್ಲಿ ಬಿಚ್ಚಿ ಬಯಲುಮಾಡಿ ವಚನಗಳ ಮೂಲಕ ಜ್ಞಾನಮಾರ್ಗ, ಭಕ್ತಿಮಾರ್ಗಗಳನ್ನು ಬೋಧಿಸಿದವರು ಶಿವಶರಣರು. ಕಾಯಕದ ಮೂಲಕವೇ ಏನನ್ನಾದರೂ ಸಾಧಿಸಬಹುದೆಂದು ನಿರೂಪಿಸಲು ಬೋಧಿಸಿದ್ದು ವಚನಗಳ ಮೂಲಕವೇ. ಆ ವಚನಗಳು ಉದ್ದೇಶಪೂರ್ವಕವಾಗಿ ರಚಿಸಬೇಕೆಂದು ಕುಳಿತು ಬರೆದ ಸಾಹಿತ್ಯಪ್ರಕಾರವಲ್ಲ. ಅವು ಅನುಭಾವಿಗಳ ಸಮಯಸ್ಫೂರ್ತಿಯಿಂದ ಮನತುಂಬಿ ಹೊರಹೊಮ್ಮಿದ ವಾಕ್ಯ ಸಮೂಹ ವಚನಗಳೆನ್ನಿಸಿಕೊಂಡವು. ಅಂತಹ ವಚನಗಳ ಪ್ರಾಮುಖ್ಯತೆಯನ್ನೂ ಮಹತ್ವವನ್ನೂ ಕುರಿತು ಮಾನ್ಯ

ಎಸ್. ವಿ. ರಂಗಣ್ಣನವರು ಇಂಗ್ಲಿಷ್ ಎಂ.ಎ. ಮಾಡಿ ಪರಿಣತರೆನ್ನಿಸಿಕೊಂಡರೆ ಸಾಲದು, ತಾಯ್ನುಡಿಯ ಸಾರಸರ್ವಸ್ವವನ್ನೂ ತಿಳಿದುಕೊಳ್ಳಬೇಕೆಂದು ಕೃಷ್ಣಶಾಸ್ತ್ರಿಗಳು ಬಿತ್ತಿದ ಬೀಜ ವಿದ್ವನ್ಮಣಿಗಳಾದ ಗುರುಗಳ ಪ್ರಭಾವದಿಂದ ಮೊಳೆತು ಚಿಗುರೊಡೆಯಿತು. ಹಳೆಗನ್ನಡದ ಚಂಪೂ ಗ್ರಂಥಗಳು, ನಡುಗನ್ನಡದ ಪದ್ಯ ಕಾವ್ಯಗಳು, ಶಿವಶರಣರ ವಚನಗಳೆಲ್ಲವನ್ನೂ ಆಮೂಲಾಗ್ರವಾಗಿ ಅಭ್ಯಾಸ ಮಾಡಿದರು. ಪಂಪ, ಹರಿಹರ, ರಾಘವಾಂಕರ ರಚನಾಶೈಲಿಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿ 'ಶೈಲಿಯ ರಂಗಣ್ಣನವರು' ಎನ್ನಿಸಿಕೊಂಡರು. ಮುದ್ದಣನ 'ರಾಮಾಶ್ವಮೇಧ' ಕಾವ್ಯವನ್ನು ಪರಿಶೀಲಿಸಿ ಬರೆದ ಲೇಖನಕ್ಕೆ 'ಸಾಮಾನ್ಯದ ಚಿತ್ರಕ್ಕೆ ಸುವರ್ಣದ ಚೌಕಟ್ಟು' ಎಂದು ನಿರ್ಭಯವಾಗಿ ಟೀಕಿಸಿದರು.



## ಸಂಕೋಚಗೊಂಡರೊ ವ್ಯಾಸರು !

ಬಿಗಿ ಸಡಿಲಿಸಿ ಮೈ
ವಟ್ಟ ಕ್ಷಣ ಅದಕೆ; ರಟ್ಟೆ ಯಾರದು
ಆಗಿರಬಹುದು; ನಿಮ್ಮ ಪ್ರಯತ್ನಕ್ಕೆ
ಆ ಧಾತು ಸ್ಖಲನ ನಿಮ್ಮದೆ ಅದು
ನಮಗೆ ಸಿಕ್ಕಿದ್ದು ಸುಖವೊ ನೋವೊ
ನಿಮ್ಮದಲ್ಲದ ನಮ್ಮದು
ಸ್ಖಲನದ ಮರುಕ್ಷಣ ನೀವು ಎಂಥವರು
ನಿರ್ವೀರ್ಯ !

ಪ್ರೀತಿ ಪ್ರೇಮ ನೀ
ವಿದ್ದರು ಇಲ್ಲದಿದ್ದರೂ
ಹುಟ್ಟಿಗೆ ಕೇವಲ ಸಂಬಂಧ ಬೇಕು
ಮಂತ್ರಕ್ಕೆ ಬರುತ್ತಾರೆ ಸೂರ್ಯ, ಕಾಲಪುರುಷ, ಮಾರುತ, ಇಂದ್ರ;
ಪ್ರತಿಜ್ಞಾ ಪಾಲಕರ ಹುಚ್ಚು ದಂಡು;
ತ್ಯಾಗಮಯಿಗಳ ಅವಿವೇಕಿ ವೈಭವದಲ್ಲಿ ಯಾರು ಮಹಾರಾಜ;
ಮಹಾ ಭಾರತ, ಯಾವ ಕ್ಷಣಕ್ಕೂ ತನು ಮನ ರಾಗಾಸಕ್ತ ವ್ಯಾಸ
ನಿಮಗೆ !



ಸುರಿದುದು ಅಂತರ್ಜಲಕೆಷ್ಟು
ಅಷ್ಟೆ; ಹರಿದುದು ಹೊಳೆ; ಮೀರಿದ್ದು ಪ್ರವಾಹ
ಮತ್ತೆ ಮೋಡಗಟ್ಟುವುದೆ
ಹೂ ಅರಳು; ಗಿಡ ಹಸಿರು; ಹಕ್ಕಿ ಕಿಲ
ಕಿಲ ನಗೆ; ಭೂಮಿಗೆ ದೇವ ಕನ್ಯೆಯರಾಗ
ಮುಗಿಲ ತುಂಬಿತೋ ಮೇಘಮಾಲೆಯಾಗಿ
ಚಂದದ ಮೇರೆಗೆ ಎಣೆಯೆಲ್ಲಿ ಆಹಾ
ನಿರ್ಲಿಪ್ತತೆ !

ತಪಸ್ಸು ಮಾಡಿ ಪಡೆಯಬೇಕು ಇಂತಹ ಸಹಯೋಗ
ಹುಟ್ಟಲು ಹುಟ್ಟಾವಿರಾಗಿ
ಶುಕ ಮುನಿ; ನಾಚಿಕೆಯೆಂಬುದಿದೆಯೆ ಸಹಜ ಸೌಂದರ್ಯಕೆ
ಮನದುಂಬಿಕೊಂಡರು ಕನ್ನೆಯರು ತಾವೆ ಪ್ರಕೃತಿ ಮಾತೆಯಂತೆ
ಕಂಡು ಆ ಕೊಳದ ದಡದಲಿ;
ಸಂಕೋಚಗೊಂಡರೊ ವ್ಯಾಸರು
ತಮ್ಮಿರುವಿಕೆಗೆ ಇವರುಗಳು
ನಾಚುವಂತೆ !

**ಕೆ. ರಮೇಶ ಗೋಟ**
ನಂ. ೯, ಅಪ್ಪಣ್ಣ ಬ್ಲಾಕ್
೭ನೇ 'ಸಿ' ಮುಖ್ಯರಸ್ತೆ, ಎಚ್. ಎಂ. ಟಿ. ಲೇಔಟ್
ಆರ್. ಟಿ. ನಗರ, ಬೆಂಗಳೂರು - ೫೬೦ ೦೩೨

ಎಂ. ಆರ್. ಶ್ರೀನಿವಾಸಮೂರ್ತಿಗಳು 'ವಚನ ಧರ್ಮಸಾರ'ವೆಂಬ ಪುಸ್ತಕವನ್ನು ಜನತೆಯ ಮುಂದೆ ಪ್ರಸಿದ್ಧಪಡಿಸಿದರು. ಈ ಕಾಲಕ್ಕೆ ಆ ವಚನವಾಹಿನಿ ಕನ್ನಡ ಸಾಹಿತ್ಯಕ್ಕಲ್ಲದೆ ಸಂಗೀತ ಸೌರಭಕ್ಕೂ ವಿಶೇಷ ಗೌರವವನ್ನು ತಂದುಕೊಟ್ಟಿದೆ ಎಂದು ಹೇಳಿದರೆ ತಪ್ಪಾಗಲಾರದು.

ಇಂಥ ವಚನ ಪ್ರಕಾರವು ಎಸ್. ವಿ. ರಂಗಣ್ಣನವರಿಗೆ ವಚನ ರಚನೆಗೆ ಸ್ಫೂರ್ತಿ ಕೊಟ್ಟಿತು. ಅನುಭವವೇದ್ಯವಾಗಿ ಭಾವನೆಗಳು ಅಂತಃಕರಣದಲ್ಲುಂಟಾಗಿ ಮನತುಂಬಿ ಹೊರಹೊಮ್ಮಿದರಾಯಿತು. ಭಕ್ತಿಯ ಆವೇದನೆ ಬೇಕಿಲ್ಲ, ವರ್ಣನೆಯ ಹೊಗಳಿಕೆಯ ಆವಶ್ಯಕತೆಯಿಲ್ಲ. ವಚನಗಳು ಒಂದಕ್ಕೊಂದು ಸಂಬಂಧಪಡಬೇಕಾಗಿಲ್ಲ. ಮನದಲ್ಲಿ ಉಂಟಾಗುವ ಭಾವನೆಗಳಿಗೊಂದು ನಿಯಮವಿಲ್ಲ. ಇಷ್ಟೇ ಸಾಲು, ಹೀಗೇ ಇರಬೇಕೆಂಬ ಛಂದಸ್ಸಿನ ಜಂಜಾಟವಿಲ್ಲ. ಬರೆಯುವವರಿಗೆ ರಚನಾ ಸ್ವಾತಂತ್ರ್ಯ ಉಂಟು. ಲೋಕನೀತಿಯೊಂದೇ ನಿಯಮ. ಓದುಗರಿಗೆ ಹಿರಿಯರಿಗೆ ಕಿರಿಯರಿಗೆ ಲೋಕಾನುಭವಿಗಳಿಗೆ ಒಂದು ನೀತಿ ಸಂಹಿತೆಯಿಲ್ಲ. ಇದು ಮಕ್ಕಳ ಮುಂದೆ ಆಟಿಕೆಗಳನ್ನು ಹರಡಿ ಅವರಿಗೆ ಸ್ವಾತಂತ್ರ್ಯ ಕೊಟ್ಟಂತೆ. ಓದುಗರಿಗೆ ಸ್ವಾತಂತ್ರ್ಯ ಉಂಟು. ವಚನ ಗುಂಫನಗಳಲ್ಲಿ ತಮ್ಮ ತಮ್ಮ ಅಭಿಲಾಷೆಗೆ ತಕ್ಕಂತೆ ಆರಿಸಿಕೊಳ್ಳಬಹುದು. ಈ ದೃಷ್ಟಿಯಿಂದ ರಂಗಣ್ಣನವರ ಸೃಜನಶೀಲತೆ ವಚನಗಳ ರೀತಿಯನ್ನು ಆರಿಸಿಕೊಂಡಿತು. ಶಿವಶರಣರ ಮಾರ್ಗದರ್ಶನದಂತೆ 'ಮಾನವ ಕಿಂಕರ ರಂಗಯ್ಯ'ನೆಂಬ ಅಂಕಿತವು ಲಭ್ಯವಾಯಿತು. ಆ ಕಾಲದಲ್ಲಿ ಪೂರ್ಣತೆಯುಳ್ಳದೆ ಯಾವ ರಚನೆಯನ್ನೂ ಪ್ರಕಟಣೆಗೆ ಕೊಡುತ್ತಿರಲಿಲ್ಲ. ಹಳೆಯ ಮೈಸೂರು ರಾಜ್ಯದಲ್ಲಿ ವಿದ್ವತ್ತಿಗೆ ಪ್ರಸಿದ್ಧವಾಗಿದ್ದ 'ಪ್ರಬುದ್ಧ ಕರ್ನಾಟಕ' ಮತ್ತು ಸಾಹಿತ್ಯ ಪರಿಷತ್ಪತ್ರಿಕೆಗಳಲ್ಲಿ ಲೇಖನಗಳು ವಿಮರ್ಶೆಗಳು ಪ್ರಕಟವಾಗಬೇಕಾದರೆ ದಿಗ್ಗಜಗಳಂತಿದ್ದ ವಿದ್ವನ್ಮಣಿಗಳ ಮೆಚ್ಚುಗೆಯನ್ನು ಪಡೆಯಬೇಕಾಗುತ್ತಿತ್ತು. ಎಸ್. ವಿ. ರಂಗಣ್ಣನವರು ಪೂರ್ಣತೆಗೆ ಪ್ರಾಮುಖ್ಯವನ್ನು ಕೊಡುವ ಸ್ವಭಾವದವರು. ರಚನಕಾರರಾದ ತಮ್ಮ ಹೆಸರನ್ನು ರಹಸ್ಯವಾಗಿಡಬೇಕೆಂದು ಕೇಳಿಕೊಂಡು ತಾವು ರಚಿಸಿದ ಕೆಲವು ವಚನಗಳನ್ನು 'ಪ್ರಬುದ್ಧ ಕರ್ನಾಟಕ'ದಲ್ಲಿ ಪ್ರಕಟಿಸಲು ಕೊಟ್ಟರಂತೆ. ಮಾನ್ಯ ಕೃಷ್ಣಶಾಸ್ತ್ರಿಗಳು, ಮಾನ್ಯ ವೆಂಕಣ್ಣಯ್ಯನವರು ಆ ವಚನಗಳನ್ನು ನೋಡಿ ಮೆಚ್ಚಿದರು. ಅವುಗಳು 'ಪ್ರಬುದ್ಧ ಕರ್ನಾಟಕ'ದಲ್ಲಿ ಪ್ರಕಟವಾದುವು. ಅಂದಿನಿಂದ ರಂಗಣ್ಣನವರು ತಾವು ಕಂಡಿದ್ದು, ತಮ್ಮ ಅನುಭವಕ್ಕೆ ಬಂದ ಯಾವ ವಿಚಾರವೇ ಆಗಲಿ, ಅವುಗಳನ್ನು ವಚನಿಸುತ್ತಾ ಬಂದರಂತೆ. ತಮ್ಮ ಸ್ವಂತ ಭಾವೋದ್ರೇಕದಿಂದ ವಚನಗಳು ಮೂಡಬೇಕೇ ಹೊರತು ಮತ್ತೊಬ್ಬರ ಹೊಗಳಿಕೆಯಿಂದಲ್ಲ. ಹೊಗಳಿಕೆಯೆಂಬುದು ಹೊನ್ನಶೂಲವಂತೆ (ಶಿವಶರಣರ ಪ್ರಭಾವ). ಅವರು ಗುರುತುಹಾಕಿದ ವಚನಗಳ ವಿಷಯಗಳು ನೂರಾರು. ರಚನೆಗಳು ಸಾವಿರಾರು. ಅವುಗಳನ್ನು ತಮ್ಮ ಕುಲದೇವರ ಹೆಸರಿಗೆ ನಿವೇದಿಸಿ ಬಿನ್ನವಿಸಿಕೊಂಡಿದ್ದಾರೆ. ಅದೇ 'ರಂಗಬಿನ್ನಪ'. ಆ ವಚನ ಸಂಕಲನದಲ್ಲಿ ತೃಪ್ತಿ, ಸುಖ, ಹಾಸ್ಯ, ದೃಷ್ಟಾಂತ, ವಿಡಂಬನೆ, ಶಬ್ದ ಚಮತ್ಕಾರ ಎಲ್ಲವೂ ಅಡಗಿವೆ.

ವಚನ-೫ (ಜೇಡಿಮಣ್ಣನ... ಏತಕೋ ರಂಗಯ್ಯ) : ಈ ವಚನದ ''ಸೌಖ್ಯವದು ಸುಲಭ ಅದಕಾಗಿ ಜನ್ಮವನು ತೇಯುವೆವು ಏತಕೋ ನಾನರಿಯೆ'' ಎಂಬ ಮಾತುಗಳು ಮಾನವನ ಮನೋತಟಾಕವನ್ನು ಕದಡಿ ಹಗರಣಮಾಡಿ ಸ್ತಬ್ಧತೆಗೆ ತರುವುವು. ಸೌಖ್ಯವು ಸುಲಭವಾದರೆ ಮನುಷ್ಯ ಕಷ್ಟಪಡಲೇಕೆ ? ಮಾನವನು ''ಮೂಳೆ ಮಾಂಸದ ತಡಿಕೆ''

ಎಂದರು. ''ಮನುಜ ಶರೀರವಿದೇನು ಸುಖ'' ಎಂದರು ಮತ್ತೊಬ್ಬರು. ಹೊಟ್ಟೆತುಂಬ ಅನ್ನ, ಮಾನಮುಚ್ಚಿಕೊಳ್ಳಲು ತುಂಡು ಬಟ್ಟೆಯಾದರೆ ಸಾಕೇ ? ''ಎಲ್ಲರೂ ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ'' ಎಂದು ಅಷ್ಟರಲ್ಲೇ ಮನುಜ ಸಂತೃಪ್ತನಾದರೆ ಜಗತ್ತಿನ ವಹಿವಾಟುಗಳ ಅವಶ್ಯಕತೆ ಏನಿತ್ತು? ಅಥವಾ ಅಷ್ಟು ದೊರಕಿದರೂ ಮತ್ತಷ್ಟಕ್ಕಾಸೆ ಪಡುವುದು ತಪ್ಪೇ ? ಅವರವರ ಮಾನದಂಡಗಳಿಗೆ ತಕ್ಕಂತಹ ಸುಖವನ್ನರಸುವ ಮನುಷ್ಯನ ಪ್ರಯತ್ನವಿರಲೇಬೇಕು. ಸ್ವರ್ಗಸುಖವೆನ್ನುತ್ತಾರೆ. ಆದರೆ ಸ್ವರ್ಗದಲ್ಲಿರುವ ದೇವತೆಗಳಿಗೂ ಒಂದಲ್ಲ ಒಂದು ಚಿಂತೆ ತಪ್ಪಿದ್ದಲ್ಲ. ಸ್ವರ್ಗದಲ್ಲಿ ಸುಖವಿದ್ದರೆ ದೇವೇಂದ್ರ ಅಹಲ್ಯೆಯನ್ನು ಬಯಸಿ ಬಂದು ಗೌತಮ ಮಹರ್ಷಿಗಳಿಂದ ಶಾಪಗ್ರಸ್ತನಾಗುತ್ತಿದ್ದನೇ! ಸ್ವರ್ಗಸುಖದ ಚಿಂತೆ ಬೇಕಾಗಿಲ್ಲ. ಆದ್ದರಿಂದ ಈ ಜಗತ್ತಿನಲ್ಲಿ ಹುಟ್ಟಿದ ಸಾಮಾನ್ಯ ಮನುಷ್ಯ ಇದ್ದಲ್ಲಿಯೆ, ಇರುವುದರಲ್ಲಿಯೇ, ಸುಖವನ್ನು ಕಾಣಬೇಕು, ಅನುಭವಿಸಬೇಕು. ಅದು ಸಾಮಾನ್ಯವಾದುದಲ್ಲ. ಅದಕ್ಕೆ ರಂಗಣ್ಣನವರು 'ರಂಗ ಬಿನ್ನಪ'ದ ಒಂದು ವಚನ (೧೬೦) ಗದ್ಯ ರೂಪದಲ್ಲಿ ಒಬ್ಬರಾಜನ ಕಥೆಯ ಮೂಲಕ ದೃಷ್ಟಾಂತವೊಂದನ್ನು ಕೊಡುತ್ತಾರೆ. ಬಡವ ಸನ್ನಿಪಾತದಲ್ಲಿ ಸಾಯುತ್ತಿದ್ದರೂ ಮಗ್ಗುಲ ಮನೆಯವರಿಗೆ ತಿಳಿಯದು. ಶ್ರೀಮಂತ ಸೀನಿದರೆ ಕೇರಿಕೇರಿಗಳಲ್ಲಿ ಪ್ರತಿಧ್ವನಿಯಂತೆ. ರಾಜನಿಗೆ ರೋಗ ಬಂದಿತು. ರಾಜ್ಯದಲ್ಲೆಲ್ಲ ಕೋಲಾಹಲ. ವೈದ್ಯ ಸಮೂಹವೇ ಬಂದು ಪರೀಕ್ಷಿಸಿತು. ಲೇಹ್ಯ, ಚೋಹ್ಯ, ಮಾತ್ರೆ, ಔಷಧಿ ಯಾವುದರಿಂದಲೂ ಗುಣ ಕಂಡುಬರಲಿಲ್ಲ. ಸಂಬಂಧಪಟ್ಟವರೆಲ್ಲ ದಿಕ್ಕು ತೋಚದೆ ಚಿಂತಾಮಗ್ನರಾದರು. ಮುಂದೇನು ಮಾಡಬೇಕೆಂದು ತಿಳಿಯದೆ ಕಂಗಾಲಾದರು. ಎಲ್ಲರ ಮುಖಗಳೂ ಬಸವಳಿದು ಬಾಡಿಹೋದವು. ಅಷ್ಟರಲ್ಲಿ ''ಧನ್ವಂತರಿಯ ಕರಕಮಲ ಸಂಜಾತನೋ'' ಎಂಬಂತೆ ಒಬ್ಬನು ಪ್ರತ್ಯಕ್ಷನಾಗಿ ಬಂದು ವಿವಿಧ ಭಂಗಿಯಲ್ಲಿ, ನಾನಾ ರೀತಿಯಲ್ಲಿ ರಾಜನನ್ನು ಪರೀಕ್ಷಿಸಿದನಂತೆ. ಕಡೆಗೆ ''ಇದೊಂದು ಗಹನ ಮಾನಸಿಕ ಕುತ್ತು ಬಾಹುಗೆ ರಕ್ಷೆಯನು ಕಟ್ಟಬೇಕು. ಅದಕಾಗಿ ಬೇರೊಂದು ಸುಖಪುರುಷನ ಅಂಗವಸ್ತ್ರದ ಚೂರು'' ಎಂದನಂತೆ. ಕೂಡಲೆ ಎಲ್ಲರಿಗೂ ಸಂತೋಷವಾಗಿ ಒಂದು ಜನಸಮೂಹವೇ ಸುಖಪುರುಷನನ್ನು ಹುಡುಕುತ್ತಾ ಹೋದರೂ, ಎಲ್ಲೆಲ್ಲಿ ಹುಡುಕಿದರೂ ನಕಲಿ ಸುಖಪುರುಷ ಕಂಡನೇ ಹೊರತು ಅಸಲಿ ಸುಖಪುರುಷ ಯಾರೂ ಕಂಡುಬರಲಿಲ್ಲ. ದಟ್ಟವಾದ ಅರಣ್ಯದಲ್ಲಿ ಒಬ್ಬ ಪುರುಷ ಕಷ್ಟಸುಖಗಳೆಂಬುದನ್ನು ತಿಳಿಯ. ಬಂಧು-ಬಳಗವನ್ನು ಕಂಡಿಲ್ಲ. ಬೇಕು ಬೇಡವೆಂಬ ಸುಳಿವೇ ಇಲ್ಲ. ಮಾನಮರ್ಯಾದೆಗಳ ಕೋಟಲೆಯಿಲ್ಲ. ಭಯ-ಭೀತಿಗಳ ಅರಿವೇ ಇಲ್ಲದೆ ತಿರುಗುತ್ತಿದ್ದ ಒಬ್ಬ ಮಾನವನನ್ನು ಕಂಡು ಇವನೇ ಸುಖಿ ಎಂದು ನಿಶ್ಚಯಿಸಿ ಅವನನ್ನು ಚೂರು ಬಟ್ಟೆಯನ್ನು ಕೇಳಿದರೆ ಆತ ದಿಗಂಬರನಾಗಿದ್ದನಂತೆ. ಅಂತೂ ಸುಖಪುರುಷನ ಅರಿವೆಯ ಚೂರು ಸಿಕ್ಕಲೇ ಇಲ್ಲವಂತೆ. ಸುಖವೆಂಬುದನ್ನು ಹೊರಗಿನಿಂದ ತರಲಾದೀತೆ ?

''ಅನುಭವಿಸುವ ಭೋಗ ಭಾಗ್ಯಗಳಿದ್ದು ಆತ್ಮೀಯ ಬಾಂಧವರಿದ್ದು ದ್ರವ್ಯಾನುಕೂಲ, ಆರೋಗ್ಯಭಾಗ್ಯ ಇವುಗಳೆಲ್ಲವಿದ್ದೂ ಸ್ವಾತಂತ್ರ್ಯವಿಲ್ಲದಿದ್ದರೆ ಸುಖವೆಲ್ಲಿಹುದಯ್ಯ. ಸುಖವೆಂಬುದನ್ನು ಹುಡುಕಲು ಹೊರಡಬಹುದೇ ಅದು ತನ್ನ ಹೃದಯದಲ್ಲೇ ಅಡಗಿಹುದು'' ಎನ್ನುತ್ತಾರೆ ರಂಗಣ್ಣನವರು.

'ಸುಖವೆಂಬುದು ಒಂದು ಪುಟ್ಟಹಕ್ಕಿ –ಸೌಖ್ಯ ಶಕುಂತ'. ಅದು ಮಾನವನ ಅಂಗೈಗೆ ಸುಲಭವಾಗಿ ದಕ್ಕುವುದೇ? ಅದು ಭೂಗೋಲವನ್ನು ಬಿಟ್ಟು ಮತ್ತೆಲ್ಲಿಗೋ ಹಾರಿ ಹೋಯಿತಂತೆ. ಆ ಸೌಖ್ಯವನ್ನು ಹುಡುಕಿಕೊಂಡು ಮಾನವ ಹೊರಟ. ಕಾಲು ನಡಿಗೆ, ಪ್ರಾಣಿವಾಹನ, ಮರಮುಟ್ಟುಗಳ ವಾಹಕವು ಸಿದ್ಧವಾದುವು. ಭೂಮಿಯನ್ನು ಅಗೆದು ಅದಿರು ತೆಗೆದು ಯಂತ್ರೋಪಕರಣಗಳನ್ನು ತಯಾರಿಸಿ ವಾಯು ವಿಮಾನದವರೆಗೂ ಹೊರಟಿದ್ದಾನೆ. ಸೌಖ್ಯ ಸಿಕ್ಕೀತೇ ? ನೂಲು ತೆಗೆದ, ಯಂತ್ರೋಪಕರಣಗಳಿಂದ ವಿಧವಿಧ ಬಟ್ಟೆಯನ್ನು ತಯಾರಿಸಿದ. ಬಣ್ಣ ಬಣ್ಣದ ಚಿತ್ರವಿಚಿತ್ರದ, ಕಂಗೊಳಿಸುವ ವಸ್ತ್ರವನ್ನು ತಯಾರಿಸಿ ಗಡಂಗಿನಲ್ಲಿ ಶೇಖರಿಸಿ ಬಲೆಯನ್ನು ಬೀಸಿದ. ಆ ಸೌಖ್ಯ ಶಕುಂತ ದೊರಕೀತೇ ? ಹಣ ಸಂಪಾದನೆಯ ಝಣಕಾರಕ್ಕೆ ಆ ಪಕ್ಷಿ ಒಲಿದುಬರಬಹುದೆಂದು ನೋಡಿದ. ಆ ಸೌಖ್ಯ ಪಕ್ಷಿ ದಕ್ಕೀತೇ ? ಸೌಖ್ಯ ಶಕುಂತವನ್ನು ಆಕರ್ಷಿಸಬಹುದೆಂದು ಗುಡಿಸಿಲಿನಲ್ಲಿರುತ್ತಿದ್ದ ಮಾನವ ಬಹು ಎತ್ತರದ ಸೌಧಗಳನ್ನು ಕಟ್ಟಿ ಸೌಖ್ಯ ಶಕುಂತವನ್ನು ಸೆಳೆಯಬಹುದೆಂದು ಕೊಂಡು ದೂರವಾಣಿ ದೂರ ಶ್ರವಣಗಳನ್ನು ಕಂಡುಹಿಡಿದ. ತತ್ತ್ವಶಾಸ್ತ್ರಗಳ ಮಂಥನಮಾಡಿ ಹುಡುಕಾಡಿದರೂ ಆ ಪುಟ್ಟ ಸೌಖ್ಯ ಶಕುಂತ ಮಾನವನ ಕೈವಶವಾಗಲಿಲ್ಲ. ಹಾಗೆಂದು ಅನ್ವೇಷಣೆಯ ಬಿಡಲಾದೀತೇ? ಬಿಟ್ಟರೆ ಪ್ರಾಣಿಗಳಿಗೂ ಮನುಜನಿಗೂ ಇರುವ ವ್ಯತ್ಯಾಸವೇನು ? ಮಾನವ ಸುಖದ ದಾರಿಯನ್ನು ಹುಡುಕುತ್ತಲೇ ಹೋದ. ಸುಖ ದುಃಖ ಅವನ ಚಿಂತನೆಗಳು. ದುಃಖವಿಲ್ಲದವನು ಸುಖಿ. ಬುದ್ಧ ಭಗವಾನನು ಬೋಧಿಸಿದ ದುಃಖಕ್ಕೆ ಕಾರಣ ದುರಾಸೆ ಎಂದು; ಜನರು ದುರಾಸೆಯನ್ನು ಬಿಟ್ಟು ಲೋಕೋಪಕಾರ ಮಾಡುತ್ತಾ ಸನ್ಮಾರ್ಗದಲ್ಲಿ ನಡೆದರೆ ಯಾರು ಬೇಕಾದರೂ ಮೋಕ್ಷವನ್ನು ಪಡೆಯ ಬಹುದೆಂದು; ಅದೇ ಸುಖವೆಂದ. ಜನರು ದುರಾಸೆಯನ್ನು ಬಿಡಬಹುದಾದರೂ ಆಸೆಯನ್ನು ಬಿಡಲಾದೀತೇ ? ಕಣ್ಣು ಬಿಟ್ಟ ಕಂದನಿಗೆ ತಾಯಿಯ ಮೊಲೆಯುಣ್ಣುವ ಆಸೆ. ಕುಕಿಲುವ ಕೋಗಿಲೆಗೆ ಮಾವಿನ ಮಿಡಿಯಾಸೆ. ಝೇಂಕರಿಸುವ ದುಂಬಿಗೆ ಪುಷ್ಪಗಳ ಬಂಡುಂಬ ಆಸೆ. ಕಾಡುಮೃಗಗಳಿಗೆ ಕಾಡುಪ್ರಾಣಿಗಳನ್ನು ಬೇಟೆಯಾಡುವ ಆಸೆ. ಆಸೆ ಎಷ್ಟುಪ್ರದಕ್ಕಿಂತಲೂ ಅವು ಜೀವನಾಧಾರಗಳು. ಹೀಗಿರುವಾಗ ಮನುಷ್ಯ ಸ್ಥಾವರನಲ್ಲ. ಎಲ್ಲರೂ ಹೊಟ್ಟೆ ಬಟ್ಟೆಗಾಗಿ ದುಡಿದರೂ ಎಲ್ಲ ಮಾನವರೂ ಒಂದೇ ಅಚ್ಚಿನಲ್ಲಿ ಹುಟ್ಟಿದವರಲ್ಲ. ಒಬ್ಬೊಬ್ಬರ ಆಸೆ ಆಕಾಂಕ್ಷೆಗಳು ಬೇರೆಬೇರೆ. ಅದಕ್ಕೂ ಒಂದು ಇತಿಮಿತಿಯುಂಟು. ಆದುದರಿಂದ ಹೆಣ್ಣಾಗಲಿ ಗಂಡಾಗಲಿ ಜಡತ್ವವನ್ನು ಬಿಟ್ಟು ಒಂದಲ್ಲ ಒಂದು ರೀತಿ ದುಡಿಯಲೇಬೇಕು. ಆ ದುಡಿಮೆಗೂ ಒಂದು ಗುರಿಯಿರಬೇಕು. ಕಾಯಕದಿಂದಲೇ ಕೈಲಾಸವೆಂದರು ಶಿವಶರಣರು. ಕಾಯಕದಿಂದಲೇ ಮುಕ್ತಿ ಎಂದರು ಶಿವಭಕ್ತರು. ದೈನಂದಿನ ಕಾಯಕಕ್ಕೆ ಶರಣು ಹೋಗಲೇಬೇಕು. ಮಾನವನಿಗೆ ತನ್ನ ಸಂಸಾರ, ದೇಹ, ಮನೆ, ಮಠ ಯಾವುದೂ ಸ್ವತಂತ್ರಕ್ಕೆ ಒಳಗಾಗಲಾರದು. ಆದರೆ ತನ್ನ ಮನಸ್ಸಿನ ಮೇಲೆ ಮಾತ್ರ ಮಾನವನಿಗೆ ಪೂರ್ಣ ಸ್ವಾತಂತ್ರ್ಯವಿದೆ ಎಂದರೆ ತಪ್ಪಾಗಲಾರದು. ಇಂದಿನ ಅಕ್ರಮ ಸಮಾಜದಲ್ಲಿ ದುಡಿಯುವವನು ಒಬ್ಬ, ದುಡಿಯದೆ ಫಲವನುಣ್ಣುವವನು ಮತ್ತೊಬ್ಬ. ಇಂತಹ ಸಮಾಜದಲ್ಲಿ ಸುಖವನ್ನು ಪರವಸ್ತುವಿನಲ್ಲಿ ಹುಡುಕಲಾಗದು. ಹತ್ತು ಚಿಂತೆಗಳಿದ್ದರೂ ಒಂದು ಹಿತಾನುಭವವನ್ನು ಪಡೆದು ಸುಖಿಸುವನೇ ಜಾಣ. ಅಕ್ರಮ ಸಮಾಜದಲ್ಲಿ ಸರ್ವರಿಗೂ ಹಿತವನ್ನುಂಟುಮಾಡುವ ಪ್ರಯತ್ನಗಳು ನಡೆಯುತ್ತಲೇ ಇವೆ. ತನ್ನೆತ್ತರವ ಮೀರಿ ನಿಂತವರ ಭೋಗ ಭಾಗ್ಯಗಳಿಗೆ ಕರುಬದೆ ತನಗಿಂತ ತಗ್ಗಿನಲ್ಲಿರುವವರ ಕುಂದುಕೊರತೆಗಳಿಗಾಗಿ ಮರುಗಿ ಸಹಾಯ ಮಾಡುವವನೇ ಸಾಮ್ಯ ಸಮಾಜವಾದಿ. ತನ್ನಂತೆ ಪರರೆಂದು ಭಾವಿಸಿ ಕಾರ್ಯೋನ್ಮುಖನಾಗುವವನೇ ಕಾರ್ಯನಿಷ್ಠ. ತಪಸ್ಸು ಮಾಡಿ ಮೋಕ್ಷವನ್ನು ಪಡೆಯುವುದು ಒಂದು ರೀತಿಯ ಪಾರಮಾರ್ಥಿಕ ಸುಖವೆನ್ನಬಹುದಾದರೂ ಲೌಕಿಕದ ಸುಖಕ್ಕೆ ಸಂಬಂಧಪಟ್ಟುದಲ್ಲ. ಮಾನವ ತನ್ನ ಸುಖಕ್ಕಾಗಿ ಪಡಲಾರದ ಕಷ್ಟಪಟ್ಟು ಹಣ ಸಂಪಾದನೆ ಮಾಡಬಹುದು. ಆ ಹಣ ಸುಖವನ್ನು ಕೊಟ್ಟೀತೇ ? ಮೈದಾಸ ಮುಟ್ಟಿದ್ದೆಲ್ಲ ಚಿನ್ನವಾಗುವ ವರವನ್ನು ಪಡೆದ. ಕೊನೆಗೆ ಆ ವರವೇ ಅವನಿಗೆ ಶತ್ರುವಾಯಿತೇ ಹೊರತು ಸುಖವನ್ನು ಕೊಡಲಿಲ್ಲ. ಇದು ಹಳೆಯ ಕಾಲದ ಕಥೆಯಾಯಿತು. ಆದರೆ ಈಗಲೂ ಹಣ ಸಂಪಾದನೆ ಮಾಡಿದವನು ಅದರಿಂದ ಕ್ಷಣಿಕ ಸುಖಗಳನ್ನು ಪಡೆಯಬಹುದೇ ಹೊರತು ಅದನ್ನು ಬಚ್ಚಿಡುವ ಚಿಂತೆ ತಪ್ಪಿದ್ದಲ್ಲ. ಆದುದರಿಂದ ಮಾನವ ತನಗೆಟುಕದ ಸುಖವನ್ನು ಬಯಸದೆ ಸರ್ವಕಾರ್ಯ ಹಿತಾಯ, ಸರ್ವಜನ ಹಿತಾಯವೆಂದು ನಂಬಿ ತನ್ನ ಮುಖ್ಯೇಂದ್ರಿಯವಾದ ಮನಸ್ಸನ್ನು ಪಾಲಿಗೆ ಬಂದ ಕಾರ್ಯಕ್ಕಾಗಿ ಅನುಗೊಳಿಸುವವನೇ ಬುದ್ಧಿವಂತ. ಅಂತಹ ಕಾಯಕದ ಸಿದ್ಧಿಯನ್ನು ಪಡೆದು ಸಾರ್ಥಕವಾದ ನಂತರ ಉಂಟಾಗುವ ಸಂತೃಪ್ತಿಗಿಂತ ಬೇರೆ ಸುಖ ಉಂಟೇ ? ಮಾನವ ತನ್ನ ಮನವೆಂಬ ಸ್ವಾತಂತ್ರ್ಯ ಕುಟೀರದಲ್ಲಡಗಿರುವ ಪುಟ್ಟ ಸೌಖ್ಯ ಶಕುಂತವನ್ನು ದೊಡ್ಡದು ಮಾಡಿ ಆನಂದ ಪಡೆಯುವವನೇ ಸುಖಿ. ಅವನೇ ಜೇಡಿಮಣ್ಣಿನ ಮುರುಕು ಬೊಂಬೆಯ ಹಿಡಿದು ನಲಿಯುವ ಮಗುವಿನಂತೆ ಸುಖಿಸುವನು.

ಸಾವಿರದ ಇನ್ನೂರಕ್ಕೂ ಹೆಚ್ಚಾಗಿ ಇಂತಹ ಆಶುವಚನಗಳನ್ನು ಎಸ್. ವಿ. ರಂಗಣ್ಣನವರ 'ರಂಗಬಿನ್ನಪ'ವು ಒಳಗೊಂಡಿದೆ. ಮಾನವನ ಮನಸ್ಸನ್ನು ವಿಷಯಗಳ ಮಂಥನಕ್ಕೆ ಎಡೆಮಾಡಿ ಶಾಂತಿ ನೆಮ್ಮದಿಯನ್ನು ಕೊಡುವ ವಚನ ಸಾಹಿತ್ಯದ ರೀತಿ ಹಿಂದೆ ಬಿದ್ದಿದೆ. ವಿಷಯ ವೈವಿಧ್ಯಗಳನ್ನೊಳಗೊಂಡ ವಿಚಾರ ಸಂಕೀರ್ಣಗಳ ವಿಶ್ಲೇಷಣೆಗಳ ಸಾಹಿತ್ಯಗಳೂ ಕವನ ಮತ್ತು ಕಥಾಸಂಕಲನಗಳೂ, ಕಾದಂಬರಿಗಳೂ ವಿಶೇಷವಾಗಿ ಪ್ರಕಟವಾಗುತ್ತಿವೆ. ಹಿಂದಿನ ಶಿವಶರಣರ ವಚನಗಳು ಸುಶ್ರಾವ್ಯ ಸಂಗೀತದೊಡನೆ ಮೇಳೈಸಿ ಪ್ರಭಾವಿತವಾಗಿ ಜನಮೆಚ್ಚುಗೆಯನ್ನು ಗಳಿಸಿವೆ. ನಿಂತುಹೋಗಿದ್ದ ಶರಣರ ವಚನರಚನಾ ಶೈಲಿಯನ್ನು ಮಾನ್ಯ ಎಸ್. ವಿ. ರಂಗಣ್ಣನವರು ಪುನರುಜ್ಜೀವನಗೊಳಿಸಿದರೂ ಮುಂದಿನ ಕವಿಗಳ್ಯಾರೂ ಆ ವಚನಶೈಲಿಯನ್ನು ಮುಂದುವರಿಸಿದಂತಿಲ್ಲ. ಮುಂದೆ ಯುವ ಸಾಹಿತಿಗಳು ಈ ಶೈಲಿ ನಶಿಸಿಹೋಗದಂತೆ ಅದನ್ನು ಬೆಳಸಿ ಕನ್ನಡ ಸಾಹಿತ್ಯ ಭಂಡಾರವನ್ನು ಶ್ರೀಮಂತಗೊಳಿಸಬೇಕಿದೆ.

ಎಚ್. ವಿ. ಸಾವಿತ್ರಮ್ಮ
[illegible]
[illegible]

# ನಾ ಕಂಡ ಪ್ರೇಮಾನಂದ್

■ ನರೇಂದ್ರ ನಾಯಕ್

೧೯೮೦ರಲ್ಲಿರಬಹುದು ಯಾ ೧೯೮೧. ಸರಿಯಾಗಿ ನೆನಪಿಲ್ಲ. ಉಡುಪಿಯ ಮ್ಯಾಜಿಷಿಯನ್ ಶಂಕರ್ ನನ್ನನ್ನು ಮಂಗಳೂರಿನಲ್ಲಿ ಹುಡುಕಿಕೊಂಡು ಬಂದಿದ್ದರು. ಪೊದನೂರಿನ ಇಬ್ಬರು ಅಣ್ಣ-ತಮ್ಮಂದಿರನ್ನು ಅವರು ಭೇಟಿಯಾಗಿದ್ದರಂತೆ. ಅವರುಗಳ ಹೆಸರು ಪ್ರೇಮಾನಂದ-ದಯಾನಂದ. ದಯಾನಂದರು ಮ್ಯಾಜಿಕ್‌ನಲ್ಲಿ ಅತ್ಯಂತ ಮುಂದುವರಿದಿದ್ದಾರೆ, ಆದರೆ ಪ್ರೇಮಾನಂದರು, ಸತ್ಯನಾರಾಯಣ ರಾಜು, ಪವಾಡಗಳಲ್ಲಿ ಪರಿಣತರು. ಅವರ ಎರಡು ಕಾರ್ಯಕ್ರಮಗಳನ್ನು ಮಾಡೋಣ, ಒಂದು ಉಡುಪಿಯಲ್ಲಿ ಮತ್ತೊಂದು ಮಂಗಳೂರಿನಲ್ಲಿ ಎಂದರು. ಆಗ ನಡೆದುವು ಅವರ ಈ ಕಾರ್ಯಕ್ರಮಗಳು. ನೀವೇ ಹೇಳಿ ಇವರು ಪವಾಡಪುರುಷರೆ ?

ಉಡುಪಿಯಲ್ಲಿನ ಕಾರ್ಯಕ್ರಮವು ಸಾಯಂಕಾಲ ಆರಂಭವಾಯಿತು. ಸಭಾ ಕಾರ್ಯಕ್ರಮಗಳು ಮುಗಿದೊಡನೆ, ಪ್ರೇಮಾನಂದರ ಭಾಷಣ ಆರಂಭವಾಯಿತು, ಅದೂ ಇಂಗ್ಲಿಷ್‌ನಲ್ಲಿ - ಅವರು ಐದು ನಿಮಿಷವೂ ಮಾತನಾಡಲಿಲ್ಲ. ಸ್ಟೇಜಿನ ಮೇಲೆ ನಾಮಧಾರಿಗಳು, ಜನಿವಾರಧಾರಿಗಳು, ಜುಟ್ಟುಧಾರಿಗಳು ಧಾಳಿ ಮಾಡಿದರು. ಗಲಾಟೆಯೇ ಗಲಾಟೆ. ನಾವು ನಿನ್ನ ಲೆಕ್ಚರ್ ಕೇಳಲು ಬಂದಿಲ್ಲ, ಮ್ಯಾಜಿಕ್ ನೋಡಬೇಕೆಂದರು. ಏಕೆಂದರೆ, ಶಂಕರ್ ಈ ಪವಾಡ ರಹಸ್ಯ ಬಯಲು ಕಾರ್ಯಕ್ರಮದೊಂದಿಗೆ ತನ್ನ ೪ ವರ್ಷದ ಮಗನ ಮ್ಯಾಜಿಕ್ ಕಾರ್ಯಕ್ರಮ ತಳಕು ಹಾಕಿದ್ದ! ಜನರಿಗೆ ಬೇಕಾಗಿತ್ತು ಅದು ! ಜನರನ್ನು ಹೇಗೋ ಸಂತೈಸಿ, ಮ್ಯಾಜಿಕ್ ಆರಂಭ ಮಾಡಿ ಹೇಗೋ ಉಡುಪಿಯ ಜನಗಳನ್ನು ಸಾಗಹಾಕಿದೆವು.

ಮರುದಿನ ಮಂಗಳೂರಿನ ಕಾರ್ಯಕ್ರಮ : ಅದನ್ನು ನಡೆಸಿದೆವು. ಅಲ್ಲಿ ಗಲಾಟೆಯಾಗಲಿಲ್ಲ, ಸುಸೂತ್ರವಾಗಿಯೇ ನಡೆಯಿತು. ಆದರೆ, ನಂತರ ಆರಂಭವಾಯಿತು ಹೊಸತೊಂದು ಕಾಟ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಆಗಿನ ಕಾಲದ 'ವೆಂಕಜ್ಜಿಯ ಕೋಳಿ' ಯಂತಹ ಪತ್ರಿಕೆಯೊಂದಿತ್ತು, ಈಗಲೂ ಇದೆ ! ಆಗಿನ ಕಾಲದಲ್ಲಿ ಅವರು ಹೇಳಿದ್ದೇ ವೇದವಾಕ್ಯ ! ಆ ಪತ್ರಿಕೆಯೊಂದು ಕ್ಯಾಂಪೇನ್ ಆರಂಭಿಸಿತು, ವಾಚಕರ ಪತ್ರಗಳ ಮೂಲಕ. ಅವರಲ್ಲಿ ಕೆಲವರು, ವಿಚಾರವಾದಿಗಳು ಈಗ ಪವಾಡವಿಲ್ಲವೆನ್ನುತ್ತಾರೆ. ನಾಳೆ ದೇವರೇ ಇಲ್ಲವೆನ್ನಬಹುದು ಇತ್ಯಾದಿ ಇವುಗಳ ಒಕ್ಕಣೆ. ಅದಕ್ಕೆ ನಾನೂ ತೀಕ್ಷ್ಣವಾಗಿಯೇ ಉತ್ತರಿಸಿದೆ. ನಾಳೆ ಏಕೆ ? ಇವತ್ತೇ ನಾವು ದೇವರಿಲ್ಲವೆನ್ನುತ್ತೇವೆಂದು. ಈ ಉತ್ತರಗಳನ್ನು ಗಮನಿಸಿದ ಮ್ಯಾಜಿಕ್‌ನಾತನಿಗೆ ನಡುಕವಾಯಿತು. ಕೊನೆಗೆ ಪತ್ರಿಕೆಯಲ್ಲಿ ಹೇಳಿಕೆಕೊಟ್ಟ. ನಾವು ಮ್ಯಾಜಿಕ್ ಮಾಡುವವರು, ವಿಚಾರವಾದಕ್ಕೂ ನಮಗೂ ಸಂಬಂಧವಿಲ್ಲವೆಂದು ! ಆಗ ನಾವು ನಿರ್ಧರಿಸಿದೆವು ಇನ್ನು ಮೇಲೆ ನಮ್ಮ ಕಾರ್ಯಕ್ರಮಗಳನ್ನು ನಡೆಸುವುದಾದರೆ ಐಡಿಯಾಲಜಿಕಲ್ ಕ್ಲಾರಿಟಿ ಇದ್ದವರೊಂದಿಗೆ ಮಾತ್ರವೆಂದು ! ಇದೇ ವ್ಯಕ್ತಿ ಮುಂದೆ ಬ್ರಹ್ಮಕುಮಾರಿ ಈಶ್ವರೀಯ ವಿದ್ಯಾಲಯಕ್ಕಾಗಿ 'ಸ್ಪಿರಿಚ್ಯುವಲ್ ಮ್ಯಾಜಿಕ್' ಕಾರ್ಯಕ್ರಮಗಳನ್ನು ನಡೆಸಿದ್ದು, ಪುಟ್ಟಪರ್ತಿಗೆ ಹೋಗಿ ಅಲ್ಲಿ ಬಾಬಾ ಐಟಂಗಳ ಹೊರತಾಗಿ ಇತರ ಮ್ಯಾಜಿಕ್ ಮಾಡಿದ್ದು ಎಲ್ಲಾ ಕೇಳಿ ಬಂತು !

ಪ್ರೇಮಾನಂದರ ಮತ್ತು ನಮ್ಮ ಸಂಬಂಧ ಮುಂದುವರಿಯಿತು. ಅವರನ್ನು ಮತ್ತೆ-ಮತ್ತೆ ಮಂಗಳೂರಿಗೆ ಆಹ್ವಾನಿಸಿದೆವು, ನಮ್ಮ ಪ್ರಗತಿವಾದಿ ಸಂಘಟನೆಗಳ ಮೂಲಕ. ಕತೆ ಮತ್ತು ಧರ್ಮ ಬೀದಿನಾಟಕದೊಂದಿಗೆ ಅವರ ಕಾರ್ಯಕ್ರಮ, ಜಿಲ್ಲೆಯ ಮೂಲೆ-ಮೂಲೆಗಳಲ್ಲೂ ಜಾಥಾ ಇತ್ಯಾದಿ ನಡೆದುವು.

ಮೊದ-ಮೊದಲು ಅವರ ಕಾರ್ಯಕ್ರಮಗಳಲ್ಲಿ ಅವರು ಇಂಗ್ಲಿಷ್‌ನಲ್ಲಿ ಭಾಷಣ ಕೊಡುವುದನ್ನು ನಾನು ಕನ್ನಡೀಕರಿಸುತ್ತಿದ್ದೆ. ಕೆಲವು ಕಾರ್ಯಕ್ರಮಗಳಾದ ನಂತರ ಅವರು ಹೇಳಿದರು. ನಾನೇನು ಹೇಳುತ್ತೇನೆ ಎಂಬುದು ನಿನಗೆ ಗೊತ್ತಲ್ಲ, ಅದನ್ನು ನೀನು ಕನ್ನಡದಲ್ಲಿ ಹೇಳು. ನಂತರ ಅದನ್ನು ಮಾಡಲು ನನಗೆ ಇಂಗ್ಲಿಷ್‌ನಲ್ಲಿ ಹೇಳು, ನಾನು ಮಾಡಿ ತೋರಿಸುತ್ತೇನೆಂದರು, ಸಮಯ ಉಳಿಯುವುದೆಂದರು. ಹಾಗೆಯೇ ಮಾಡಲು ಆರಂಭಿಸಿದೆವು. ಸಮಯ ಉಳಿಯಿತು. ಹೀಗೆಯೇ ಮಾಡಿದ ಬಳಿಕ ಅವರು ಹೇಳಿದರು - ನೀನು ಮಾತನಾಡಲು ಕಲಿತಿದ್ದಿಯಲ್ಲೋ ಮಾಡಲೂ ಕಲಿ. ಹಾಗೆಯೇ ನಾನು ಮಾಡಲು ಕಲಿತೆ; ಆಗ ಹೇಳಿದರು - ನೀನು ಮಾತೂ ಕಲಿತಿದ್ದಿ, ಮಾಡಲೂ ಕಲಿತಿದ್ದಿ, ಇನ್ನು ಕಾರ್ಯಕ್ರಮಗಳನ್ನು ನೀನೇ ಕೊಡುವಿಯಂತೆ !

ಹಾಗೆ ಆರಂಭವಾಯಿತು, ನನ್ನ ಪವಾಡರಹಸ್ಯ ಬಯಲು ಕಾರ್ಯಕ್ರಮಗಳ ಸರಮಾಲೆ. ಈ ಮಧ್ಯೆ ಅವರು ಪುಸ್ತಕಗಳನ್ನು ಪ್ರಕಟಿಸಲು ಆರಂಭಿಸಿದರು. ಅವರು ಬರೆದ ಪುಸ್ತಕಗಳನ್ನು ಇತರರು ಪ್ರಕಾಶಿಸಲು ಹಿಂಜರಿಯುವ ಕಾರಣ, ಅವರು ತಮ್ಮದೇ ಆದ ಪ್ರಕಾಶನವನ್ನು ಆರಂಭಿಸಿದರು. ನಂತರ, ಇಂಡಿಯನ್ ಸ್ಕೆಪ್ಟಿಕ್ ಎಂಬ ಮಾಸಿಕವನ್ನು ಆರಂಭಿಸಿದರು. ಅದರ ಮೊದಲ ಪ್ರತಿಯ, ಮುಖಪುಟ ಲೇಖನ – ಸಾಯಿಬಾಬಾ ಆಶ್ರಮಗಳಲ್ಲಿನ ಕೊಲೆಗಳ ತನಿಖೆಯಾಗಲಿ- ಲೇಖಕ- ನಾನೇ !

ಈ ರೀತಿ ಆರಂಭವಾದ ನಮ್ಮ ಸಂಬಂಧ ಬೆಳೆಯುತ್ತಲೇ ಹೋಯಿತು. ೧೯೯೦ರಷ್ಟಕ್ಕೆ, ಕರ್ನಾಟಕದಲ್ಲಿ ಪವಾಡರಹಸ್ಯ ಬಯಲು ಕಾರ್ಯಕ್ರಮಗಳನ್ನು ಆರಂಭಿಸಿದೆ. ಈ ಸುದ್ದಿಯು ದೆಹಲಿಗೂ ತಲಪಿತು. ಕೇಂದ್ರ ಸರಕಾರದ ಎನ್.ಎಸ್.ಟಿ.ಸಿ. ಎಂಬ ಇಲಾಖೆಯಿಂದ ಕರೆಗಳು ಬರಲು ಆರಂಭವಾದುವು. ಮೊದಲು ಅವರು ಪ್ರೇಮಾನಂದರನ್ನು ಕರೆಯುತ್ತಿದ್ದರಂತೆ. ಅವರಿಗೆ ಇಂಗ್ಲಿಷ್ ಬಿಟ್ಟು ಬೇರೆ ಭಾಷೆ ಬಾರದ ಕಾರಣ, ನಿರರ್ಗಳವಾಗಿ ಹಿಂದಿ ಮಾತನಾಡುವ ನನ್ನನ್ನು ಅವರು ಆಹ್ವಾನಿಸತೊಡಗಿದರು. ಪ್ರೇಮಾನಂದರಿಗೆ ಬಹಳ ಸಂತೋಷವಾಯಿತು. ನೀನು ಒಳ್ಳೆಯ ಕೆಲಸ ಮಾಡುತ್ತಿ ಎಂದು ಬೆನ್ನುತಟ್ಟಿ ಪ್ರೋತ್ಸಾಹಿಸಿದರು. ಅವರಿಗೆ ಬಂದ ಆಹ್ವಾನಗಳನ್ನು ನನ್ನತ್ತ ತಿರುಗಿಸಲು ಆರಂಭಿಸಿದರು. ಎಲ್ಲರ ಬಳಿ ಹೇಳುವುದೊಂದೇ, ಆತ ನನಗಿಂತ ಉತ್ತಮವಾಗಿ ಕಲಿಸುತ್ತಾನೆ. ಮಾತ್ರವಲ್ಲದೆ, ಅವನಿಗೆ ಹಲವಾರು ಭಾಷೆಗಳೂ ಬರುತ್ತವೆ !

ಮಧ್ಯಪ್ರದೇಶದ ಭೋಪಾಲದಲ್ಲೊಂದು ತರಬೇತಿ ಇತ್ತು. ಅಲ್ಲಿ ಹೋದಾಗ ಪ್ರೇಮಾನಂದರು ಪ್ರತ್ಯಕ್ಷ. ನೀವು ಬರುತ್ತೀರೆಂದು ಮೊದಲೇ ಹೇಳಿದ್ದರೆ, ನಾನು ಬರುತ್ತಿರಲಿಲ್ಲವಲ್ಲ, ಯಾಕಾಗಿ ಇಬ್ಬಿಬ್ಬರಿಲ್ಲಿ ಎಂದೆ. ಸುಮ್ಮನಿರೋ, ಇಲ್ಲಿ ತರಬೇತಿ ಕೊಡುವುದು ನೀನು. ನಾನು ನೋಡಲು ಬಂದಿದ್ದೇನೆ ಎಂದರು. ಆ ಏಳು ದಿನಗಳ ತರಬೇತಿ ಉದ್ದಕ್ಕೂ ಅವರು ಹಿಂದಿನ ಬೆಂಚಿನಲ್ಲಿದ್ದರು. ಒಂದೇ ಒಂದು ಮಾತನಾಡಲಿಲ್ಲ. ಕೊನೆಗೆ ಹೇಳಿದರು, ನೀನು ತರಬೇತಿ ಕೊಡುವುದನ್ನು ನೋಡಲು ಬಂದಿದ್ದೆ. ಬಹಳ ಒಳ್ಳೆಯದಾಗಿ ಮಾಡುತ್ತಿಯಾ ಎಂದರು. ಇದರ ನಂತರ ನಾವು ಒಟ್ಟಿಗೆ ತರಬೇತಿ ಕೊಟ್ಟದ್ದು ಕಡಿಮೆ. ಆದರೆ, ಇತರ ಕಡೆಗಳಲ್ಲಿ ನಾವು ಒಟ್ಟಿಗೆ ಹೋಗುತ್ತಿದ್ದೆವು. ಅವರಿಗೆ ದೃಷ್ಟಿ ಮಂದವಾಗುತ್ತಿದ್ದ ಕಾರಣ, ಕೈ ಹಿಡಿದು ನಡೆಸಬೇಕಾಗುತ್ತಿತ್ತು. ಆದರೂ, ಅವರು ಎರಡೆರಡು ಚೀಲ ತುಂಬ ಪುಸ್ತಕಗಳನ್ನು ಎತ್ತಿಕೊಂಡು



ಬರುವುದನ್ನು ನೋಡಿದಾಗ, ಅವರಿಗಿಂತ ೨೦ ವರ್ಷ ಚಿಕ್ಕವನಾದ ನನಗೆ ನಾಚಿಕೆಯಾಗುತ್ತಿತ್ತು.

ವಿಚಾರವಾದಿಗಳನ್ನು ಒಟ್ಟು ಮಾಡಬೇಕು, ವಿಚಾರ ವಾದಿಗಳ ಸಂಘಟನೆಗಳ ಒಕ್ಕೂಟವನ್ನು ಮಾಡಬೇಕೆಂದು ಅವರಿಗೆ ಬಹಳ ದೊಡ್ಡ ಆಸೆಯಿತ್ತು. ಈ ಒಕ್ಕೂಟದ ಮೊದಲನೆಯ ಸಭೆಯು ಕೇರಳದ ಪಾಲಕ್ಕಾಡಿನಲ್ಲಿ ನಡೆಯಿತು. ಅಲ್ಲಿ ಏಳು ಸಂಘಟನೆಗಳು ಭಾಗವಹಿಸಿದ್ದುವು. ಅವರನ್ನು ಸಂಚಾಲಕ, ನನ್ನನ್ನು ಸಹಸಂಚಾಲಕನನ್ನಾಗಿ ಆಯ್ಕೆ ಮಾಡಲಾಯಿತು. ಕೇರಳದ ಯಾಂತ್ರಿವಾದಿ ಸಂಘಟನ ಯು. ಕಲಾನಾಥನ್ ಅವರು ಕಾರ್ಯದರ್ಶಿಯಾದರು. ನಂತರ, ಈ ಒಕ್ಕೂಟದ ನಂತರದ ಸಭೆ ಹೈದರಾಬಾದಿನಲ್ಲಿ ನಡೆಯಿತು. ಮೂರನೇ ಸಭೆಯು ಪೊದನೂರಿನಲ್ಲಿ ನಡೆಯಿತು. ಆಗ ಸುಮಾರು ೩೦ ಸಂಘಟನೆಗಳಿದ್ದುವು. ಇದರ ನಾಲ್ಕನೇ ಸಭೆಯು ಮಂಗಳೂರಿನಲ್ಲಿ ನಡೆಯಿತು. ಆಗ ೩೦ ಸಂಘಟನೆಗಳು ಇದ್ದುವು. ನಂತರದ ಸಭೆಯು ಪಂಜಾಬ್‌ನ ಭಟಿಂಡಾದಲ್ಲಿ ನಡೆಯಿತು. ಆ ಸಭೆಯಲ್ಲಿ ನನ್ನನ್ನು ರಾಷ್ಟ್ರಾಧ್ಯಕ್ಷನನ್ನಾಗಿ ಚುನಾಯಿಸಲು ಪ್ರೇಮಾನಂದರದ್ದೇ ತಾಕೀತು. ಈ ಸಂಘಟನೆ, 'ಫೆಡರೇಶನ್ ಆಫ್ ಇಂಡಿಯನ್ ರ‍್ಯಾಶನಲಿಸ್ಟ್ಸ್ ಎಸೋಸಿಯೇಶನ್ಸ್' (FIRA) ಸಭೆ ಮುಂದೆ ಪುಣೆಯಲ್ಲಿ ೨೦೦೭ರಲ್ಲಿ ನಡೆದಾಗ ೬೭ ಸಂಘಟನೆಗಳು ಸೇರಿದ್ದುವು. ಈಗ ನಮ್ಮ ಸಂಘಟನೆಯ ಏಳನೇ ಮಹಾಸಭೆಯು ೨೬, ೨೭ ದಶಂಬರದಂದು ಚೆನ್ನೈಯಲ್ಲಿ ನಡೆಯಲಿದೆ.

೨೦೦೬ ನವೆಂಬರ್‌ನಲ್ಲಿ ಪ್ರೇಮಾನಂದರು ಮಂಗಳೂರಿಗೆ ಬಂದಿದ್ದರು. ಸೊರಗಿ ಕಡ್ಡಿಯಾಗಿದ್ದರು. ಹೊಟ್ಟೆಯಲ್ಲಿ ಗಡ್ಡೆ ಬೆಳೆದಿತ್ತು. ನಮ್ಮ ಮಿತ್ರ ಡಾ|| ಶ್ರೀನಿವಾಸ್ ಕಕ್ಕಿಲ್ಲಾಯರಿಗೆ ತೋರಿಸಿದಾಗ, ಅವರೆಂದರು - ಇದು ಕ್ಯಾನ್ಸರ್ ಇರಬೇಕು. ನಂತರದ ತಪಾಸಣೆಯಲ್ಲಿ ಇದು ಕ್ಯಾನ್ಸರ್ ಎಂದು ತಿಳಿದುಬಂತು. ೧೯೭೮ರಲ್ಲಿ ಇದೇ ದಿನದಂದು ಎ. ಬಿ. ಕೋವೂರ್‌ರವರಿಗೆ ಕ್ಯಾನ್ಸರ್ ರೋಗವೆಂದು ಮಂಗಳೂರಿನಲ್ಲಿಯೇ ಪತ್ತೆ ಮಾಡಲಾಗಿತ್ತು. ಇನ್ನೊಂದು ಕಾಕತಾಳೀಯ ವಿಷಯವೇನೆಂದರೆ, ಅದೇ ದಿನ ನಾನು ಕಸ್ತೂರ್ಬಾ ಮೆಡಿಕಲ್ ಕಾಲೇಜಿನ ಉದ್ಯೋಗ ದಿಂದ ಬಿಡುಗಡೆಯಾಗಿ, ವಿಚಾರವಾದದ ಬೆಳವಣಿಗೆಗಾಗಿ ನನ್ನ ಪೂರ್ಣಾವಧಿ ಕೆಲಸ ಆರಂಭಿಸುವವನಿದ್ದೆ.

ಇವರನ್ನು ಕೂಡಲೇ ಬೆಂಗಳೂರಿಗೆ ವಿಮಾನದಲ್ಲಿ ಕಳಿಸಲಾಯಿತು. ಅಲ್ಲಿ ಅವರ ಭಾವ ಡಾ|| ಜೋಸ್‌ರವರು ಅವರನ್ನು ಹೆಚ್ಚಿನ ತಪಾಸಣೆಗಾಗಿ ಒಯ್ದರು. ದೊಡ್ಡ ದೊಡ್ಡ ತಜ್ಞರ ಅಭಿಪ್ರಾಯವೊಂದೇ, ಏನೂ ಮಾಡಲಿಕ್ಕಿಲ್ಲ, ಅವರನ್ನು ಹಾಗೆಯೇ ಬಿಡಿ. ಆದರೆ, ಡಾ|| ವಿಜಯ ಕುಮಾರ್‌ರವರು ಧೈರ್ಯವಾಗಿ ಅವರ ಮೇಲೆ ಶಸ್ತ್ರಚಿಕಿತ್ಸೆ ಮಾಡಿದರು. ಅವರು ಬದುಕಿದರು. ಮುಂದೆ, ಮೂರು ವರ್ಷಗಳ ಕಾಲ ನಮ್ಮೊಂದಿಗಿದ್ದರು. ಸಾಕಷ್ಟು ಕೆಲಸ ಮಾಡಿದರು. ಅವರ ಜೀವನದ ಮುಖ್ಯವಾದ ಉದ್ದೇಶಗಳಲ್ಲೊಂದಾದ ವಿಜ್ಞಾನದ ಕಾರ್ಯವಿಧಾನಗಳ ಮ್ಯೂಸಿಯಂ, ಅದನ್ನು ಕಟ್ಟಲು ಸಾಕಷ್ಟು ಪರಿಶ್ರಮ ವಹಿಸಿದ್ದರು, ಅವರಿಗೆ ಕೆಲವರು ಹಲವಾರು ಲಕ್ಷ ರೂಪಾಯಿ ಮೋಸವನ್ನೂ ಮಾಡಿದರು.

ಹೀಗಾದರೂ ಛಲಬಿಡದ ತ್ರಿವಿಕ್ರಮನಂತೆ ತಮ್ಮ ಕೆಲಸವನ್ನು ಮುಂದುವರೆಸಿದ ಅವರು, ಅದನ್ನು ಕೊನೆಗೂ ಮಾರ್ಚ್ ೨೦೦೯ರಲ್ಲಿ ಪೂರೈಸಿದರು. ಅದರ ಉದ್ಘಾಟನೆಯಂತೂ ವಿಶಿಷ್ಟ ರೀತಿಯಿಂದ ನಡೆಯಿತು. ಉದ್ಘಾಟಕಿ, ೧೧ ವರ್ಷದ ಶಾಲಾ ಬಾಲಕಿ ಐಶ್ವರ್ಯ! ಈ ಉದ್ಘಾಟನೆಯ ಎರಡುದಿನ ಮೊದಲು ಅವರ ಪ್ರೀತಿಯ ತಮ್ಮ ದಯಾನಂದರು ನಿಧನರಾದರೂ, ಇವರು ದಿನಾಂಕವನ್ನು ಬದಲಾಯಿಸಲಿಲ್ಲ. ನಿರ್ಧರಿತ ದಿನದಂದೇ ಉದ್ಘಾಟನೆಯಾಯಿತು.

ಕಳೆದ ಜುಲೈಯಲ್ಲಿ ನಾನು ಉತ್ತರಭಾರತದ ಟೂರ್‌ನಲ್ಲಿದ್ದೆ. ಇವರ ಫೋನ್ ಬಂತು, ನಾನು ಜುಲೈ ಕೊನೆಯಲ್ಲಿ ಮಂಗಳೂರಿಗೆ ಬರುತ್ತೇನೆ. ನನ್ನನ್ನು ನೀನು ಕೆಲವು ಕಡೆ ಕೊಂಡು ಹೋಗಬೇಕು. ಕುಂದಾಪುರ, ಪುತ್ತೂರು ಕಡೆ ಇವರ ಕೆಲವು ಮಿತ್ರರನ್ನು ಸಂದರ್ಶಿಸಿದರು. ನಂತರ ಪೊದನೂರಿಗೆ ಹೋದವರು ಮರಳಿ ಬರಲಿಲ್ಲ. ಅವರ ಕೊನೆಯ ಸಂವಾದ ಮಂಗಳೂರಿನ ಕೆನರಾ ಕಾಲೇಜಿನಲ್ಲಿ ನಡೆಯಿತು. ಅವರನ್ನು ಡಿ.ವೈ.ಎಫ್.ಐ. ಯುವರು ಶಾಲು ಹೊದಿಸಿ ಸನ್ಮಾನಿಸಿದರು ಕೂಡ.

ಸೆಪ್ಟೆಂಬರ್ ೩೦ರಂದು ಇವರನ್ನು ಆಸ್ಪತ್ರೆಗೆ ದಾಖಲಿಸಲಾಗಿದೆಯೆಂಬ ಸುದ್ದಿ ಬಂತು. ಆಗ, ಗೋವಾದಿಂದ ಸೋಮ ಮತ್ತು ನಾನು ಅವರನ್ನು ನೋಡಲು ಹೋದೆವು. ಮಂಪರಿನಲ್ಲಿದ್ದರು. ಆದರೆ, ನಾನು "ನೀವು ದೇವರನ್ನು ನಂಬಲು ಆರಂಭಿಸಿದ್ದೀರೆಂದು ಯಾರೋ ಹೇಳಿದರು" ಎಂದಾಗ ಎದ್ದು ಕುಳಿತು, ಯಾರದು ಹೇಳುವುದೆಂದು ದಬಾಯಿಸಿದರು! ಆಗ, ನಾನು ಮೊದಲೇ ಸಿದ್ಧಮಾಡಿದ ಹೇಳಿಕೆಯನ್ನು ತೋರಿಸಿ ಹೇಳಿದೆ, ಇದಕ್ಕೆ ದಸ್ಕತ್ತು ಮಾಡಿ! ಅದರಲ್ಲಿ ಸ್ಪಷ್ಟವಾಗಿ ಬರೆದಿದ್ದವು "ನಾನು ಯಾವುದೇ ದೇವರನ್ನಾಗಲಿ ಆಧ್ಯಾತ್ಮಿಕತೆಯನ್ನಾಗಲಿ ನಂಬಲು ಆರಂಭಿಸಿಲ್ಲ". ಇದಲ್ಲದೆ, ಅದರಲ್ಲಿ ಅವರ ಶರೀರವನ್ನು ಮೆಡಿಕಲ್ ಕಾಲೇಜಿಗೆ ದಾನ ಮಾಡಬೇಕು ಇತ್ಯಾದಿ ಒಕ್ಕಣೆಗಳಿದ್ದುವು. ಜೀವನದುದ್ದಕ್ಕೂ ಆದರ್ಶಗಳನ್ನು ಪಾಲಿಸಿದ ಅವರು ಸಾಯುವಾಗಲೂ ಅವುಗಳನ್ನು ಬಿಡಲಿಲ್ಲ. ದಸ್ಕತ್ತು ಹಾಕಲು ಸ್ವಲ್ಪ ಕಷ್ಟವಾದ ಕಾರಣ, ಅವರ ಎಡಗೈ ಹೆಬ್ಬೆರಳು ಗುರುತನ್ನು ಹಾಕಲಾಯಿತು. ನಾವು ವಿಚಾರವಾದಿಗಳು ಸಾಯಲು ಸಿದ್ಧರಾದರೂ, ಈ ಪ್ರತಿಗಾಮಿ ಶಕ್ತಿಗಳ ಅಸಂಬದ್ಧ ಪ್ರಲಾಪಗಳನ್ನು ಎದುರಿಸಲು ಸಿದ್ಧರಾಗಿರಲೇಬೇಕು.

ಅಮೆರಿಕ ವಿಶ್ವದ ಶಸ್ತ್ರವ್ಯಾಪಾರಿ

ಒಬಾಮಾಗೆ 'ನೊಬೆಲ್-ಶಾಂತಿ' ಪ್ರಶಸ್ತಿ ಕೊಟ್ಟಿರೋದು ಅದಕ್ಕಾಗೇ ಇರಬೇಕು.. ಕಣೋ?

ಅಕ್ಟೋಬರ್ ೪ನೇ ತಾರೀಕು ನಾನು ಭುವನೇಶ್ವರದಲ್ಲಿ ರಾಷ್ಟ್ರೀಯ ವಿಜ್ಞಾನ ಶಿಕ್ಷಕರ ಸಮಾವೇಶದಲ್ಲಿದ್ದಾಗ ಇವರು ತೀರಿಕೊಂಡ ಸುದ್ದಿ ಸಿಕ್ಕಿತು. ಆದರೆ ಅವರು ಹೇಳಿದ ಮಾತುಗಳೂ ಸ್ಪಷ್ಟವಾಗಿದ್ದುವು. "ನಾನು ಸತ್ತಾಗ, ನನ್ನ ಹೆಣ ನೋಡಲು ನೀನು ಯಾವುದೇ ಕಾರ್ಯಕ್ರಮ ರದ್ದು ಮಾಡಿದರೆ ಎಚ್ಚರಿಕೆ! ನನ್ನ ನೆನಪಿನಲ್ಲಿ ಎರಡು ಹೆಚ್ಚಿನ ಕಾರ್ಯಕ್ರಮ ಮಾಡು!" ತತ್ಕಾರಣ, ಅವರ "ಕೊನೆಯ ದರ್ಶನ" ಮಾಡುವ ಅವಕಾಶ ನನಗೆ ಸಿಗಲಿಲ್ಲ! ೫ನೇ ತಾರೀಕಿನಂದು ಹಲವಾರು ವಿಚಾರವಾದಿ, ಎಡಸಂಘಟನೆಗಳ ಕಾರ್ಯಕರ್ತರು ಇವರ ನಿರ್ಜೀವ ಶರೀರವನ್ನು ಮೆಡಿಕಲ್ ಕಾಲೇಜಿನ ವಾಹನದಲ್ಲಿ, ಕೊಯಮುತ್ತೂರಿನ ರಸ್ತೆಗಳಲ್ಲಿ ಮೆರವಣಿಗೆಯಲ್ಲಿ ಕೊಂಡು ಹೋಗಿ, ಅಲ್ಲಿ ಮುಟ್ಟಿಸಿದರು.

ಹೀಗೊಂದು ಭಾರತದ ವಿಚಾರವಾದಿ ಆಂದೋಲನದ ಅಧ್ಯಾಯವು ಮುಗಿಯಿತು. ಸುಮಾರು ೩೦ ವರ್ಷಗಳ ಕಾಲ ದಣಿವಿಲ್ಲದೆ ನಮ್ಮ ದೇಶದಲ್ಲಿ ವಿಚಾರವಾದಿ ಆಂದೋಲನವನ್ನು ಬಲಪಡಿಸಲು ತಮ್ಮ ತನು-ಮನ-ಧನಗಳನ್ನು ಅರ್ಪಿಸಿದ ಬಿ. ಪ್ರೇಮಾನಂದರು ನಿಧನರಾದರು.

ತಮ್ಮ ಶ್ರಮದಿಂದ ನೂರಾರು ಸಂಘಟನೆಗಳನ್ನು, ಸಾವಿರಾರು ಕಾರ್ಯಕರ್ತರನ್ನು ಸೃಷ್ಟಿಸಿದ್ದರು. ಸುಮಾರು ೨೫ರಷ್ಟು ಪುಸ್ತಕಗಳನ್ನು ಬರೆದಿದ್ದರು ಹಾಗೂ ಪ್ರಕಟಿಸಿದ್ದರು. ನೂರಾರು ಪವಾಡಗಳ ರಹಸ್ಯಗಳನ್ನು ಬಯಲಿಗೆಳೆದಿದ್ದರು. ಸಾಯಿಬಾಬಾ, ಅಮೃತಾನಂದಮಯಿ ಇಂತಹ 'ದೇವಮಾನವ'ಗಳ ವಿರುದ್ಧ ಸಮರವನ್ನೇ ಸಾರಿದರು. ಪುಟ್ಟಪರ್ತಿಯಲ್ಲಿ ನಡೆದ ಅಕ್ರಮ, ಅವ್ಯವಹಾರಗಳನ್ನು, ಕೊಲೆ ಸುಲಿಗೆಗಳನ್ನು ಜಗತ್ತಿನ ಗಮನಕ್ಕೆ ತಂದರು.

ಇವರು ತಮ್ಮ ಜೀವನದುದ್ದಕ್ಕೂ ಪಾಲಿಸಿದ ತತ್ವಾದರ್ಶಗಳನ್ನು ಪಾಲಿಸುವುದೇ ಇವರಿಗೆ ನಾವು ಮಾಡಬಹುದಾದ ಶ್ರದ್ಧಾಂಜಲಿ. ಏಕೆಂದರೆ ನಾವು ವಿಚಾರವಾದಿಗಳು ಯಾವುದೇ ಆತ್ಮ-ಪರಮಾತ್ಮಗಳನ್ನು ನಂಬುವುದಿಲ್ಲ. ನಮ್ಮ ಜೀವನವು ಭೌತಿಕಕ್ಕೆ ಸೀಮಿತವಾಗಿರುತ್ತದೆ. ಆದರೆ, ನಾವು ನಂಬಿಕೊಂಡ ತತ್ವಾದರ್ಶಗಳನ್ನು ಪಾಲಿಸಿಕೊಂಡು ಬರುತ್ತೇವೆ.

ನಿಧನರಾದ ಪ್ರೇಮಾನಂದರಿಗೆ ಇಬ್ಬರು ಪುತ್ರರು. ಇಬ್ಬರೂ ಈಗಾಗಲೇ ತೀರಿಕೊಂಡಿದ್ದಾರೆ. ಪತ್ನಿ ಕೆಲವು ವರ್ಷಗಳ ಮೊದಲೇ ನಿಧನರಾಗಿದ್ದಾರೆ. ಕುಟುಂಬದಲ್ಲಿ ಉಳಿದವರು ಅವರ ಸೊಸೆ ಮತ್ತು ಇಬ್ಬರು ಮೊಮ್ಮಕ್ಕಳು. ತಮ್ಮ ಆಸ್ತಿಯಲ್ಲಿ ಪುಸ್ತಕಗಳು ಮತ್ತವುಗಳ ಹಕ್ಕುಗಳನ್ನು ತಾವೇ ಕಟ್ಟಿ ಬೆಳೆಸಿದ ಸಂಘಟನೆಯಾದ ಫಿರಾಕ್ಕೆ ದಾನ ಮಾಡಿದ್ದಾರೆ. ತಾವು ಕಟ್ಟಿದ ವಿಜ್ಞಾನದ ಕಾರ್ಯ ವಿಧಾನಗಳ ಮ್ಯೂಸಿಯಂಅನ್ನು ಕೊಯಮತ್ತೂರಿನ ಜಿ. ಡಿ. ಗೋಪಾಲರವರ ಉಸ್ತುವಾರಿಗೆ ಕೊಟ್ಟಿದ್ದಾರೆ. ಯಾವುದಕ್ಕಿಂತಲೂ ಹೆಚ್ಚಾಗಿ, ತಮ್ಮ ಜೀವನದುದ್ದಕ್ಕೂ ಸ್ಫೂರ್ತಿಕೊಟ್ಟು, ವಿಚಾರವಾದದ ಹಾದಿಯಲ್ಲಿ ತಲುಪಿಸಿದ ಸಾವಿರಾರು ಕಾರ್ಯಕರ್ತರನ್ನು ದೇಶಕ್ಕೆ, ಜಗತ್ತಿಗೆ ಕೊಡುಗೆಯನ್ನಾಗಿ ಕೊಟ್ಟಿದ್ದಾರೆ. ಎಲ್ಲಿಯವರೆಗೆ ಆ ಚಟುವಟಿಕೆ ನಡೆಯುವುದೋ ಅಲ್ಲಿಯವರೆಗೆ ಪ್ರೇಮಾನಂದರವರು ನಮ್ಮ ಹೃದಯಗಳಲ್ಲಿ, ಮನಸ್ಸಿನಲ್ಲಿ ಜೀವಂತವಾಗಿರುತ್ತಾರೆ.

ನರೇಂದ್ರ ನಾಯಕ್
ರಾಷ್ಟ್ರಾಧ್ಯಕ್ಷರು, ಫೆಡರೇಷನ್ ಆಫ್ ಇಂಡಿಯನ್ ರ‍್ಯಾಶನಲಿಸ್ಟ್ಸ್
ಅಸೋಸಿಯೇಶನ್, ನಂ. ೧೦೧, [illegible],
ಮೈಕ್ರೋವೇವ್ ಸ್ಟೇಷನ್ ರಸ್ತೆ, ಮಂಗಳೂರು - [illegible]

# ತಂಬಿಟ್ಟು ಕೊಡುವೆನು ದಾಸಯ್ಯ...

**ಪ್ರ**ತಿ ಶನಿವಾರ ಭಿಕ್ಷೆಗೆ ಬರುತ್ತಿದ್ದ ಬಂಗಾರು ದಾಸಯ್ಯನನ್ನು ಕಂಡರೆ ಊರವರಿಗೆಲ್ಲಾ ಒಂದು ರೀತಿಯ ಪ್ರೀತಿ. ಯಾರೂ ಅವನಿಗೆ ಭಿಕ್ಷೆ ಇಲ್ಲವೆನ್ನದೆ ನೀಡುತ್ತಿದ್ದರು. ಬೇರೆ ಯಾರಾದರೂ ಬಂದರೆ ಗದುರಿಸಿ ಕಳುಹಿಸುತ್ತಿದ್ದರೂ ಬಂಗಾರು ದಾಸಯ್ಯ ಬಂದರೆ ಮಾತ್ರ ಯಾರೂ ಅವನನ್ನು ಬಯ್ಯದಿರಲು ಬಹುಶಃ ಅವನ ನಯವಿನಯದ ನಡವಳಿಕೆ, ಹಿರಿಕಿರಿಯರೆನ್ನದೆ ಎಲ್ಲರಿಗೂ ತೋರುತ್ತಿದ್ದ ಗೌರವ ಮತ್ತು ಅವನ ವೇಷಭೂಷಣಗಳೇ ಕಾರಣವಾಗಿದ್ದಿರಬಹುದು. ಯಾರು ಕೊಟ್ಟದ್ದರೋ ಏನೋ ಜರಿ ಅಂಚಿನ ಕೆಂಪು ಬಣ್ಣದ ಪಟ್ಟೆ ಮಡಿಯುಟ್ಟು, ಒಗೆದು ತಿದ್ದಿತೀಡಿದ ಬಿಳಿ ಷರಟು ಧರಿಸಿ, ತಲೆಗೊಂದು ರುಮಾಲನ್ನು ನೀಟಾಗಿ, ವಿ.ಸೀ.ಯವರು ಪೇಟ ಧರಿಸುತ್ತಿದ್ದಂತೆ, ಸುತ್ತಿಕೊಂಡು, ಎಡಬಗಲಿಗೆ ಮಿರಮಿರನೆ ಮಿಂಚುವಂತೆ ತೊಳೆದ, ಅಂಚುಗಳಿಗೆ ಕೆತ್ತನೆ ಕೆಲಸ ಮಾಡಿದ್ದು, ಎರಡೂ ಪಕ್ಕಗಳಲ್ಲಿದ್ದ ನವಿಲಿನಾಕಾರದ ಕೊಂಡಿಗಳಿಗೆ ಭುಜಕ್ಕೆ ತಗುಲಿಸಿಕೊಳ್ಳಲು ಕಟ್ಟಿದ ಉದ್ದನೆಯ ದಾರದ 'ರಾಮಕಣಜ' ಭಿಕ್ಷಾಪಾತ್ರೆ. ಬಲಬದಿಗೆ ಇಳಿಬಿಟ್ಟಿದ್ದ ದಾರಕಟ್ಟಿದ ಬಲಮುರಿ ಶಂಖು. ಎಡಗೈಯಲ್ಲಿ ಜಾಗಟೆ, ಬಲಗೈಯಲ್ಲಿ ಟ್ರಂಪೆಟ್ ಮಾದರಿಯ ಊದುವಾದ್ಯ. ಶ್ರಾವಣ ಶನಿವಾರ ಮಾತ್ರ ಹಚ್ಚಿದ ದೀಪದ ಗರುಡಗಂಭವನ್ನು ಕೆಲವು ಸಾರೆ ತರುತ್ತಿದ್ದ. ಇವನ ಇವಿಷ್ಟು ಶಿಸ್ತಿನ ವೇಷಭೂಷಣ ನೋಡಿದ ಮೇಲೆ ಯಾರಿಗೆ ತಾನೇ ಭಿಕ್ಷೆ ಕೊಡದಿರಲು ಮನಸ್ಸು ಬಂದೀತು ! ಭಿಕ್ಷೆ ಕೊಟ್ಟ ಮೇಲೆ, 'ಅಲ್ಲ ದಾಸಯ್ಯ, ನಿನ್ನ ಹೆಸರಿನಲ್ಲೇ ಬಂಗಾರ ತುಂಬ್ಕೊಂಡು ಭಿಕ್ಷೆಗೆ ಯಾಕೆ ಬರ್ತಿಯಾ' ಅಂದರೆ, ಹೆಸರು ಬಂಗಾರು ಹೊಟ್ಟೆಗೆ ತತ್ವಾರ ಎಂದು ನಗೆಯಾಡುವ.

ಅವನು ಬರುತ್ತಿದ್ದುದೂ ವಾರಕ್ಕೊಂದು ಬಾರಿಯೇ. ಶನಿವಾರ ಬಿಟ್ಟರೆ ಮತ್ತೆಂದೂ ಅವನು ಭಿಕ್ಷೆಗೆ ಬಂದದ್ದು ಕಾಣೆವು. ಅವನಿಗೆ ಹೊಲಗದ್ದೆಗಳಿಲ್ಲದಿದ್ದರೂ ವಾರಕ್ಕೊಮ್ಮೆ ಸಿಗುತ್ತಿದ್ದ ಆದಾಯದಿಂದ ವಾರವೆಲ್ಲಾ ಹೆಂಡತಿ ಮಗನೊಡನೆ ಹಂಚಿಕೊಂಡು ತಿಂದು ಊರ ಮುಂದಿನ ಹನುಮಂತನ ಗುಡಿಯಲ್ಲಿ ಕುಳಿತು ಭಜನೆ ಮಾಡುತ್ತ ಕಾಲಕಳೆಯುತ್ತಿದ್ದ. ಅಲ್ಲ ದಾಸಯ್ಯ, ನೀವು ಮೂವರಿಗೆ ಹೀಗೆ ಎತ್ತಿದ ಭಿಕ್ಷೆ ವಾರಪೂರ್ತಾ ಸಾಲುತ್ತಾ ಅಂದರೆ, ''ಅಯ್ ಬುಡಿ ಬುದ್ಧಿ, ಎಂಗೋ ನಮ್ಮಿಬ್ಬರಿಗೆ ಜೀವ್ನ ಕಳೆದೋಯ್ತದೆ, ಇನ್ನು ಮಗ ಪೋಲಿ ಬಿದ್ದೋಗವ್ನೆ, ಎಲ್ಲಿ ತಿಂತಾನೋ, ಎಲ್ಲಿ ಮನಗ್ತಾನೋ ಆ ಸಿವಂಗೆ ಗೊತ್ತು'' ಎನ್ನುತ್ತಿದ್ದ. ಇಂಥ ದಾಸಯ್ಯನಿಗೆ ಸ್ಕೂಲಿಗೆ ಹೋಗುವ ಹುಡುಗರನ್ನು ಕಂಡರೆ ಅದೇನೋ ವಾಂಛಲ್ಯ. ಹುಡುಗರ ಮುಂದೆ ತನ್ನ ಟ್ರಂಪೆಟ್ ಮಾದರಿಯ ವಾದ್ಯ ಊದಿ ನಗಿಸಿಯೇ ಮುಂದೆ ಹೋಗುತ್ತಿದ್ದುದು.

ಆದರೆ ಶ್ರಾವಣ ಶನಿವಾರ ಬಂದಿತೆಂದರೆ ಅದರ ಖದರ್ರೇ ಬೇರೆ ಆಗುತ್ತಿತ್ತು. ಅಂದು ನಮಗೆ ಒಂದೇ ಗಡಿಬಿಡಿ. ಇತ್ತ ಸ್ಕೂಲಿಗೆ ರೆಡಿಯಾಗಬೇಕು. ಅತ್ತ 'ಲಕ್ಷ್ಮೀನರಸಿಂಹಾಯ ಮಂಗಳಂ' ಎಂದು ಹೇಳಿಕೊಂಡು ಪಡಿ ಎತ್ತಲು ಹೋಗಬೇಕು. ಶಾಲೆಗೆ ಹೊತ್ತಾಗಿ ಹೋದರೆ ಸಾಕು ಬೆಂಚಿನ ಮೇಲೆ ನಿಂತುಕೊಳ್ಳಬೇಕಾಗುತ್ತಿತ್ತು. ಈ ಶಿಕ್ಷೆಯನ್ನು ತಪ್ಪಿಸಿಕೊಳ್ಳಲು ಶ್ರಾವಣ ಶನಿವಾರ ಪಡಿ ಎತ್ತಲು ಹೋಗುವುದಿಲ್ಲವೆಂದು ಹಠ ಹಿಡಿದರೆ ಅತ್ತ ಅಪ್ಪಯ್ಯನ ಕೈಲಿ ಬೆನ್ನಿಗೆರಡು ಗುದ್ದು ಬೀಳುತ್ತಿತ್ತು. ಇವೆರಡರಿಂದ ತಪ್ಪಿಸಿಕೊಳ್ಳಬೇಕಾದರೆ ಬೆಳಗಿನಜಾವ ಐದು-ಐದೂವರೆಗೆ ಏಳಬೇಕಿತ್ತು. ಆದರೆ ಏಳಲು ಸೋಮಾರಿತನ. ಅಮ್ಮ ಬಂದು ''ಏಳ್ರೋ ಹೊತ್ತಾಗುತ್ತೆ'' ಎಂದು ಎಷ್ಟೋ ಸಾರೆ ರಗ್ಗು ಎಳೆದು ಹೋದರೂ ಅಷ್ಟೆ. ತಿರುಗಿ ರಗ್ಗನ್ನು ಮುಖದ ತುಂಬ ಹೊದೆದು ಮುಸುಕೆಳೆದುಕೊಂಡು ಮಲಗಿಬಿಡುತ್ತಿದ್ದೆವು. ಅಪ್ಪ ಅಷ್ಟರಲ್ಲಿ ಊರ ಮುಂದಿನ ಲಕ್ಷ್ಮೀಕಾಂತನ ಕಟ್ಟೆಯ ಬಳಿ ಹೊಲದ ಕಡೆ ಹೋಗಿ ಬೆಳಗಿನ ಕೆಲಸ ತೀರಿಸಿಕೊಂಡು ಬಂದು ನಾವಿನ್ನೂ ಎದ್ದಿಲ್ಲದಿದ್ದರೆ, ''ಏಳ್ರೋ, ಹೊತ್ತಾಗಲ್ವಾ ಸ್ಕೂಲಿಗೆ'' ಎಂದು ಒಂದು ಸಾರೆ ಗದರಿಸಿದರೆ ಸಾಕು ಎದ್ದು ಕೂತುಕೊಂಡು, ''ಕರಾಗ್ರೇ ವಸತೇ....'' ಎಂದು ಹೇಳಿ ಹಾಸಿಗೆ ಸುತ್ತಿಟ್ಟು ಮುಖ ತೊಳೆಯಲು ಓಡುತ್ತಿದ್ದೆವು.

■ ವೈ. ಎಸ್. ಗುಂಡೂರಾವ್

ಇತರರೊಡನೆ ಊರಲ್ಲಿದ್ದ ನಮ್ಮವರ ಹತ್ತು ಮನೆಗಳಲ್ಲಿ ಐದು ಮಾಧ್ವರ ಮನೆಗಳು, ಐದು ಸ್ಮಾರ್ತರ ಮನೆಗಳು. ಹತ್ತು ಮನೆಗಳೂ ಒಂದೇ ಸಾಲಿನಲ್ಲಿದ್ದರೂ ನಮ್ಮ ಈ ಹತ್ತು ಮನೆಗಳನ್ನು ಬೇರ್ಪಡಿಸುವಂತೆ ಸರಿಯಾಗಿ ಐದು ಮನೆಗಳ ಮಧ್ಯೆ ಕಟ್ಟಲ್ಪಟ್ಟಿದ್ದು ಅಶ್ವತ್ಥ ಕಟ್ಟೆ. ಬಹು ದೊಡ್ಡದಾಗಿದ್ದು ಊರಿನ ಸಮಸ್ತರಿಗೂ ಬೇಸಿಗೆಯಲ್ಲಿ ಪಟ್ಟಾಂಗ ಹೊಡೆಯುವ ಸ್ಥಳವಾಗಿತ್ತು. ಆದರೆ ಊರಿನ ಪಟೇಲರಾದ ಬಸಪ್ಪನವರಾಗಲೀ, ಶ್ಯಾನುಭೋಗ ರಾಜಪ್ಪನವರಾಗಲೀ ಕಟ್ಟೆಯ ಮೇಲೆ ಕುಳಿತಿದ್ದರೆ ತುಂಡಾಂಡಿ ಹುಡುಗರ್‍ಯಾರೂ ಆ ಕಟ್ಟೆಯ ಬಳಿ ಸುಳಿಯುತ್ತಿರಲಿಲ್ಲ. ಅವರಿಲ್ಲದಿದ್ದರೆ ಬಂದು ಹುಲಿಕುರಿಯಾಗಲೀ, ಚೌಕಾಭಾರವಾಗಲೀ ಆಡುವುದು ಸಾಮಾನ್ಯವಾಗಿತ್ತು.

ಅಶ್ವತ್ಥ ಕಟ್ಟೆ ಎಂದರೆ ಬಹುದೊಡ್ಡ ಕಟ್ಟೆಯೇ. ಮರದ ಬುಡದ ಸುತ್ತಳತೆಯೇ ಸುಮಾರು ಹತ್ತು ಅಡಿಗಳಷ್ಟಿದ್ದು, ಬುಡದ ಸುತ್ತಲೂ ಎರಡುಮೂರಡಿ ಸುತ್ತಳತೆಯ ಮಣ್ಣಿನ ಪಾತಿ, ನಂತರ ನಾಲ್ಕು ಅಡಿಯಷ್ಟು ಸುತ್ತಳತೆಯ ಗಾರೆ ಹಾಕಿದ ನೆಲ, ಅದರ ಸುತ್ತಲೂ ಹಸನಾದ ಕಲ್ಲನ್ನು ಜೋಡಿಸಿದ ಚಚ್ಚೌಕಾಕಾರದ ನಾಲ್ಕಡಿ ಎತ್ತರದ ಸುಮಾರು ಎರಡಡಿ ಅಗಲದ ಕಟ್ಟೆ. ಕೆಲವು ಸೋಮಾರಿಗಳು ಬೇಸಿಗೆಯ ಬೇಗೆ ಕಳೆಯಲು ಆರಾಮವಾಗಿ ಕಟ್ಟೆಯ ಕಲ್ಲಿನ ಮೇಲೆ ಮಲಗಿದರೆ ಮತ್ತೆ ಕೆಲವರು ಹುಲಿ-ಕುರಿ ಆಟದಲ್ಲಿ ತೊಡಗುತ್ತಿದ್ದರು. ಈ ಅಶ್ವತ್ಥ ಕಟ್ಟೆ ಬೇಸಿಗೆಯಲ್ಲಿ ಹುಡುಗರಿಗೆ ಆಟದ ಜಾಗವಾಗಿದ್ದರೆ ದೊಡ್ಡವರಿಗೆ ಊರಿನ ಸಮಸ್ತ ಸಮಸ್ಯೆಯನ್ನು ಚರ್ಚಿಸುವ ತಾಣವಾಗಿತ್ತು. ಊರಿನ ಮಧ್ಯದಲ್ಲಿದ್ದುದರಿಂದ ಪಟೇಲ ಬಸಪ್ಪನವರು ಆಗಾಗ್ಗೆ ಬಂದು ಕುಳಿತು ''ಏಯ್ ಯಾರೋ ಅದು, ಸೊಪ್ಪಿನ ಬೀದಿಯ ಬುಸಗೆಡ್ಡೆ ಅಂಕನನ್ನು ಬರೇಳು'', ಅಂತಲೋ, ಇಲ್ಲ ''ಎಲೆ ತೋಟದ ಬೀದಿಯ ಕಡಾಣಿ ಕರಿಯನನ್ನು ಬರೇಳು'', ಅಂತಲೋ ಜೋರಾದ ಧ್ವನಿಯಲ್ಲಿ ಹೇಳಿದ್ದು, ಕಡೇ ಮನೆಯ ಶ್ಯಾನುಭೋಗ ರಾಜಪ್ಪನವರ ಕಿವಿಗೆ ಬಿದ್ದು, ಕಟ್ಟೆಯ ಮೇಲೆ ಬಸಪ್ಪ ಬಂದು ಕುಳಿತಿದ್ದಾರೆಂದು ತಾವೂ ಅಡ್ಡ ಶಲ್ಯ ಹೊದ್ದು ಮನೆಯಿಂದ ಹೊರಡುತ್ತಿದ್ದರು.



ಕಡಾಣಿ ಕರಿಯ ಅಂದ್ಮೇಲೆ ಜ್ಞಾಪಕಕ್ಕೆ ಬರ್‍ತಾಯಿದೆ. ಈ ಕರಿಯನಿಗೆ ಹೆಸರಿನ ಹಿಂದೆ ಕಡಾಣಿ ಎಂಬುದು ಹೇಗೆ ತಗುಲಿಕೊಂಡಿತೆನ್ನುವುದಕ್ಕೆ ದೊಡ್ಡ ಕಥೆಯೇ ಇದೆ. ಒಂದು ಸಾರೆ ದಾಸನ ಹುಂಡಿಯಿಂದ ಯಳಂದೂರಿಗೆ ಕಮಾನಿನ ಎತ್ತಿನಗಾಡಿ ಕಟ್ಟಿಸಿಕೊಂಡು ಚಲುವೇ ಗೌಡ ಹೊರಟಿದ್ದ. ಗಾಡಿ ಊರುಬಿಟ್ಟು ಸ್ವಲ್ಪ ದೂರದಲ್ಲಿದ್ದ ಹುಲಿಕೆರೆ ಕೆರೆ ಏರಿಯ ಮಾವಿನ ಮರದ ಬಳಿಯ ಕೋಡಿಯ ಹತ್ತಿರ ಕೊರಕಲಿನಲ್ಲಿ ಗಾಡಿ ಇಳಿದು ಹತ್ತಲು ತೊಡಗಿದಾಗ ಚಕ್ರ ಕೊಂಚ ಓರೆಯಾಗಿದ್ದು ಕಂಡು, ಕೆರೆಯ ಏರಿಯ ಮೇಲೆ ಹೋಗುತ್ತಿದ್ದ ಕರಿಯ ''ಗೌಡ್ರೇ... ಗೌಡ್ರೇ... ಗಾಡಿ ನಿಲ್ಸಿ'' ಎಂದು ಒಂದೇ ಉಸಿರಿಗೆ ಕೂಗಿಕೊಂಡು ಕೆಳಗಿಳಿದು ಬಂದು ಎತ್ತಿನ ಮೂಗುದಾರ ಹಿಡಿದು ಮುಂದೆ ಹೋಗದಂತೆ ತಡೆದಾಗ, ಒಳಗೆ ಕುಳಿತಿದ್ದ ಗೌಡರಿಗೆ ಆಶ್ಚರ್ಯ. 'ಇವನ್ಯಾಕೆ ಓಡಿಬಂದು ಹೀಗೆ ಗಾಡಿಯನ್ನು ತಡೆಯುತ್ತಿದ್ದಾನೆ' ಎಂದು ಗೊಂದಲಕ್ಕೆ ಬಿದ್ದರು. ಮಜಬೂತಾಗಿ ಬೆಳೆದಿದ್ದ ಕರಿಯ ಒಂದು ಕೈಲಿ ಎತ್ತುಗಳ ಮೂಗುದಾರ ಹಿಡಿದಿದ್ದರೆ, ಮತ್ತೊಂದು ಕೈಯಲ್ಲಿ ಹೊಳೆಯುತ್ತಿದ್ದ ಅಗ್ರಹಾರದ ಮಚ್ಚು ಹಿಡಿದಿರುವುದನ್ನು ನೋಡಿ ಕೊಂಚ ಅಧೀರರಾದರು. ತಮ್ಮ ಮತ್ತು ನಾಗಿಯ ವಿಷಯದಲ್ಲಿ ಯಾರಾದರೂ ಹಕೀಕತ್ ಮಾಡಿ ಈ ಕರಿಯನನ್ನು ಛೂ ಬಿಟ್ಟಿರಬಹುದೇ ಎಂದು ಯೋಚಿಸತೊಡಗಿದರು. ಅಷ್ಟರಲ್ಲಿ ''ಇಳೀರಿ, ಇಳೀರಿ ಕೆಳಕ್ಕೆ, ಬ್ಯಾಗ್ನೇ'' ಎಂದು ಗೌಡರನ್ನಿಳಿಸಿ, ಗಾಡಿ ಹೊಡೆಯುತ್ತಿದ್ದ ನಿಂಗನನ್ನು ಇಳಿಸಿ, ''ನೋಡ ಬಾರ್‍ಲ ಏನಾಯ್ತುತ್ತು ನಿಮ್ಮೊಡೆಯರ್‍ಗೆ, ಇನ್ನು ಕೊಂಚ ಮುಂದೆ ಹೋಗಿದ್ರೆ... ಅದೂ ಕೊರಕಲಾಗಿದ್ರಿಂದ ಗಾಡಿ ಚಕ್ರ ಅಳ್ಳಾಡಿ ಅಳ್ಳಾಡಿ, ಚಕ್ರ ಕೊರಕಲೊಳಗೆ ಕುಂತ್ಕಂಡಿದ್ರಿಂದ ಇರ್ಚಿಯಿಂದ ಗಾಡಿ ಚಕ್ರ ಕಳಚಿಕೊಂಡಿರಲಿಲ್ಲ, ಇಲ್ದಿದ್ರೆ ಏನ್ಗತಿಯಾಯ್ತಿತ್ತು'' ಎಂದಾಗಲೇ ಚಲುವೇ ಗೌಡರಿಗೂ ಪರಿಸ್ಥಿತಿ ಅರ್ಥವಾದದ್ದು. ''ಸದ್ಯ ! ನಮ್ಮ ಪ್ರಾಣ ಉಳಿಸ್ದೆ ಕರಿಯಾ. ಯುದ್ಧ ಮಾಡ್ತಿದ್ದ ದಶರಥ ಮಹಾರಾಜನ ರಥದ ಚಕ್ರದ ಕಡಾಣಿ ಕಳಚಿ ಬೀಳದಂತೆ ಕೈಕೇಯಿ ಪ್ರಾಣ ಉಳಿಸ್ದಂಗೆ ನನ್ನ ಪ್ರಾಣ ಉಳಿಸ್ದೆ ಕಣಪ್ಪ'' ಎಂದು ಕರಿಯನ ಎರಡು ಭುಜವನ್ನೂ ಎರಡು ಕೈಯಲ್ಲೂ ಹಿಡಿದು ತಮ್ಮ ಸಂತಸ ವ್ಯಕ್ತಪಡಿಸಿದಾಗ ಕರಿಯ ''ಬುಡಿ ಬುದ್ಧಿ, ಇದ್ಯಾವ ಸಹಾಯ ನಾ ಮಾಡಿದ್ದು, ಏನೋ ಕಂಡಿದ್ದರಿಂದ ಕೂಕ್ಕೊಂಡೆ. ಇಲ್ದಿದ್ರೆ ಪಾಪ ನಿಮಗ್ಗೂ, ಎತ್ತೊಗ್ಳೂಗ್ಗೂ ಏಟು ಬೀಳ್ತಿತ್ತು'' ಎಂದ. ಹೀಗೆ ತಮ್ಮ ಪ್ರಾಣ ಉಳಿಸಿದ ಕರಿಯನಿಗೆ ಏನಾದರೂ ಸಹಾಯ ಮಾಡಬೇಕೆನ್ನಿಸಿ ಊರಿಗೆ ಬರುವಂತೆ ತಿಳಿಸಿ ಹೊಸ ಕಡಾಣಿ ತರಿಸಿ ಹಾಕಿಕೊಂಡು ಮುಂದೆ ಹೊರಟರು.

ಅಂದಿನಿಂದಲೂ ಕರಿಯನಿಗೆ ಕಡಾಣಿ ಕರಿಯನೆಂದೇ ಹೆಸರಾಗಿ, ಹಳ್ಳಿಯಲ್ಲಿ ಸಂಪೂರ್ಣ ರಾಮಾಯಣ ನಾಟಕ ವಾಡುತ್ತಿದ್ದು ಕೈಕೇಯಿ ದೃಶ್ಯ ಬಂದಾಗಲೆಲ್ಲಾ ಕರಿಯನ ಗೆಳೆಯರು, ''ಲೋ ಕರಿಯಾ, ಕೈಕೇಯಿ ರಾಮನ್ನ ಕಾಡಿಗೆ ಕಳಿಸ್ದಂಗೆ, ಗೌಡ್ರ ಮಗನ್ನ ಕಾಡಿಗೆ ಕಳಿಸ್ ಬ್ಯಾಡ್ಲೆ'' ಎಂದು ಕರಿಯನನ್ನು ರೇಗಿಸುತ್ತಿದ್ದರು.

ಅಂತೂ ವಿಷಯಾಂತರವಾಗಿಹೋಯಿತು. ಶ್ರಾವಣ ಶನಿವಾರದ ಪಡಿ ಎತ್ತುವುದರಿಂದ ಹಿಡಿದು ಕಡಾಣಿ ಕರಿಯನವರೆಗೆ ಹರಿದುಬಂತು. ತಾಳಿ ತಾಳಿ, ಶನಿವಾರದ ಪಡಿ ವಿಷಯಕ್ಕೆ ಬರ್ತೇನೆ. ನಾವು ಇತ್ತ ಐದು ಮನೆಯಲ್ಲಿದ್ದ ಐವರು ಹುಡುಗರು (ನಾನು, ಸತೀಶ, ರವಿ, ರಘು, ರಾಮು) ಒಂದೇ ಬಾರಿಗೆ ''ನರಸಿಂಹಾಯ ಮಂಗಳಂ'' ಎಂದು ಕೂಗಿಕೊಂಡು ಅರಳಿ ಕಟ್ಟೆಯ ಹತ್ತಿರ ಬರುವುದಕ್ಕೂ, ಅತ್ತ ಕಡೆಯಿಂದ ಆ ಐದು ಮನೆಯಲ್ಲಿದ್ದ ಚಂದ್ರಶೇಖರ, ರಾಜೇಂದ್ರ, ವೆಂಕಟಪತಿ, ರಂಗರಾವ್, ಶ್ರೀಧರ) ''ಶ್ರೀನಿವಾಸಾಯ ಮಂಗಳಂ'' ಎಂದು ಹೇಳಿಕೊಂಡು ಬರುವುದಕ್ಕೂ ಸರಿಹೋಗುತ್ತಿತ್ತು. ಅವರನ್ನು ನೋಡಿದ ಕೂಡಲೇ ಹುರುಪು ಬಂದು ನಾವು ಐವರೂ ಸಾಧ್ಯವಾದಷ್ಟೂ ಜೋರಾಗಿ ''ನರಸಿಂಹಾಯ ಮಂಗಳಂ'' ಎಂದು ಕೂಗಿದರೆ, ಅವರು ಅತ್ತಕಡೆಯಿಂದ ನಮಗಿಂತ ಜೋರಾಗಿ ''ಶ್ರೀನಿವಾಸಾಯ ಮಂಗಳಂ'' ಎಂದು ಕೂಗುವರು. ಆದರೆ ನಮ್ಮ ಐವರ ಧ್ವನಿ ಅದರಲ್ಲೂ ಸತೀಶನೊಬ್ಬನ ಗಡುಸು ಧ್ವನಿಯೇ ಅವರು ಐವರ ಧ್ವನಿಯನ್ನು ಸರಿಗಟ್ಟಿಸಿ ಬಿಡುತ್ತಿತ್ತು. ಹೀಗೆ ಕೂಗುತ್ತ ಸ್ಕೂಲಿಗೆ ಹೋಗಬೇಕೆನ್ನುವುದನ್ನೂ ಮರೆತು ಎದುರು-ಬದುರು ಯುದ್ಧಕ್ಕೆ ನಿಂತವರಂತೆ ಪೈಪೋಟಿಯಿಂದ ಕೂಗುತ್ತಾ ನಿಂತಿದ್ದರೆ, ನಮ್ಮವರ ಯಾರಾದರೊಬ್ಬರ ಮನೆಯ ಕಿಟಕಿಯಿಂದ ಎಚ್ಚರಿಕೆ ಧ್ವನಿ ಕೇಳಿಬರುತ್ತಿತ್ತು. ಆದರೆ ನಾವ್ಯಾರೂ, ಇದಕ್ಕೆ ಕ್ಯಾರೆ ಎನ್ನದೆ ಮುಂದುವರಿಸುತ್ತಿದ್ದೆವು.

ಅಷ್ಟರಲ್ಲಿ ಬಂಗಾರು ದಾಸಯ್ಯ ಶಂಖ ಊದುತ್ತ ಅಲ್ಲಿಗೆ ಬರುತ್ತಿದ್ದ. ಅವನು ನಮ್ಮಿಬ್ಬರ ಗುಂಪಿನ ಮಧ್ಯೆ ರೆಫರಿಯಂತೆ ನಿಂತು ಢಣ್ ಢಣ್... ಢಣ್ ಢಣ್ ಎಂದು ಒಂದು ಕೈಯಲ್ಲಿ ಜಾಗಟೆ ಬಾರಿಸಿ, ಮತ್ತೊಂದು ಕೈಯಲ್ಲಿ ಶಂಖದಿಂದ ಭೌಂ ಭೌಂ ವ್ಹೂಂ ವ್ಹೂಂ... ಎಂದು ಊದಿ ಶಬ್ದವನ್ನು ತಾರಕಕ್ಕೇರಿಸಿ ನಮ್ಮಿಬ್ಬರ ಗುಂಪಿಗೂ ರಂಗೇರಿಸುತ್ತಿದ್ದ. ಬೆಳಗಾಗೆದ್ದು ಹಸು-ಕರು, ಕುರಿಮಂದೆ ಹೊಡೆದುಕೊಂಡು ಹೊರಟವರು, ಹೊಲಗದ್ದೆ ಕಡೆ ಏರು ಕಟ್ಟಿಕೊಂಡು ಹೊರಟವರು ನಮ್ಮ ಈ 'ನರಸಿಂಹಾಯ ಮಂಗಳಂ... ಶ್ರೀನಿವಾಸಾಯ ಮಂಗಳಂ...' ಶಬ್ದ ಯುದ್ಧವನ್ನು ನೋಡಿ ನಕ್ಕು ಮುಂದೆ ಹೋಗಿ ಬಿಡುತ್ತಿದ್ದರು. ಆದರೆ ಬಂಗಾರು ಮಾತ್ರ ತಾನು ಭಿಕ್ಷೆಗೆ ಹೊರಟಿರುವುದನ್ನು ಮರೆತು ನಮ್ಮಿಬ್ಬರ ಗುಂಪನ್ನೂ ಹುರಿದುಂಬಿಸುತ್ತಿದ್ದುದನ್ನು ನೋಡಿದ ಹಿರಿಯರ್‍ಯಾರಾದರೂ ಬಂದು, ''ಅಲ್ಲಾ, ಆ ಹುಡುಗರಿಗೆ ಬುದ್ಧಿಯಿಲ್ಲ ಸ್ಕೂಲಿಗೆ ಹೋಗದೆ ಹುಡುಗಾಟ್ಗೆ ಮಾಡ್ಕೊಂಡು ನಿಂತಿದ್ದಾರೆಂದರೆ ನಿಂಗೂ ಬುದ್ಧಿ ಬೇಡ್ವಾ ದಾಸಯ್ಯ ?'' ಎಂದು ಕೇಳಿದಾಗ, ''ಬುಡಿ ನನ್ನೊಡೆಯಾ, ವರ್ಸಕ್ಕೊಂದು ಸರ್ತಿ ಹಿಂಗ್ ಮಾಡಾದು'' ಎಂದೆನ್ನುತ್ತಾ ಬಂಗಾರು ದಾಸಯ್ಯ ''ಅಖಿಲಾಂಡಕೋಟಿ ಬ್ರಹ್ಮಾಂಡ ನಾಯಕ ...(ಜಾಗಟೆಯಿಂದ ಢಣ್), ನಿಖಿಲಾಕ್ಷ ಸುರಗಂಗಾಧರನೇ ...ಢಣ್, ನಿರಂತರವೂ ನಂಬಿದೆನೋ

...ನಿಖಿಳಗುಣಪೂರ್ಣ... ಢಣ್, ಝುಗ ಝುಗಿಸುವ ಮುಕುಟಧರಾ ಜೀವರಾಧಾರಾ ...ಢಣ್, ಇಪ್ಪತ್ತವಂದು ಸಾವಿರ ಐದೊಂದುನೂರು ಅಪ್ರತಿಮ ಹಂಸ ಮಂತರಾ... ಢಣ್‌ಢಣ್ ಎಂದು ಜಾಗಟೆ ಬಾರಿಸಿದ ದಾಸಯ್ಯ ಶಂಖ ಊದುತ್ತ ಇನ್ನೊಂದು ಬೀದಿಯ ಕಡೆ ಹೊರಟಾಗ ನಮ್ಮಿಬ್ಬರ ಗುಂಪು ರಂಗೇರುತ್ತಿದ್ದ ವೈರತ್ವವನ್ನು ಮರೆತು ದಾಸಯ್ಯನನ್ನು ರೇಗಿಸುವುದಕ್ಕೆ ಮೊದಲು ನೋಡುತ್ತ :

ಊರಿಗೆ ಬಂದರೆ ದಾಸಯ್ಯ, ನಮ್ಮ
ಕೇರಿಗೆ ಬಾ ಕಂಡ್ರ ದಾಸಯ್ಯ
ಕೇರಿಗೆ ಬಂದರೆ ದಾಸಯ್ಯ, ಗೊಲ್ಲ
ಕೇರಿಗೆ ಬಾ ಕಂಡ್ರ ದಾಸಯ್ಯ

– ಎಂದು ನಾವು ಕೋರಸ್ಸಿನಲ್ಲಿ ಹೇಳಲು ಪ್ರಾರಂಭಿಸಿದರೆ ದಾಸಯ್ಯ ಕೇಳಿಸಿಕೊಳ್ಳುತ್ತಾ ನಿಂತು ನಗೆಯಾಡ ತೊಡಗುವನು. ಇದು ಯಾರು ಬರೆದದ್ದು, ಯಾರ ಪದ ಎಂಬುದು ಆಗ ನಮಗಂತೂ ಗೊತ್ತಿರಲ್ಲಿಲ್ಲ. ಅಷ್ಟೇಕೆ, ಪೂರ್ತಾ ಹಾಡು ಕೂಡ ಗೊತ್ತಿರಲಿಲ್ಲ. ಆದರೆ ರವಿಗೆ ಪೂರ್ಣ ಹಾಡು ಗೊತ್ತಿದ್ದು, ಅದರ ಕಡೆಯ ಪದ್ಯವನ್ನು ಮಾತ್ರ ಅವನೊಬ್ಬನೇ ಹೇಳಲು ಪ್ರಾರಂಭಿಸುತ್ತಿದ್ದ :

ಸಿಟ್ಟು ಮಾಡದಿರು ದಾಸಯ್ಯ, ಸಿರಿ
ಪುರಂದರ ವಿಠಲ ದಾಸಯ್ಯ
ರಟ್ಟು ಮಾಡದಿರು ದಾಸಯ್ಯ, ತಂ-
ಬಿಟ್ಟು ಕೊಡುವೆನು ದಾಸಯ್ಯ

– ಎಂದು ಹೇಳಿ ಮುಗಿಸಿದಾಗ, ''ತಂಬಿಟ್ಟು ಕೊಡುವೆನು, ತಂಬಿಟ್ಟುಕೊಡುವೆನು'' ಎಂದೆನ್ನುತ್ತಾ ದಾಸಯ್ಯನ ಮುಖದ ಮುಂದೆ ಬಲ ಅಂಗೈಯನ್ನು ಮೇಲ್ಮಾಡಿಕೊಂಡು ತಂಬಿಟ್ಟು ಗಾತ್ರವನ್ನು ಕೈಯಲ್ಲಿ ತಿರುಗಿಸಿ ತಿರುಗಿಸಿ ತೋರಿಸಿದಾಗ ದಾಸಯ್ಯ ನಗುತ್ತಾ ಸೊಪ್ಪಿನ ಕೇರಿಯ ಕಡೆ ಹೊರಡುತ್ತಿದ್ದ.

ಈಗ ಪುನಃ ನಮ್ಮೆರಡು ಗುಂಪಿಗೆ ಪುರುಡು ಜ್ಞಾಪಕಕ್ಕೆ ಬಂದು, ಎದುರು-ಬದುರು ದಿಕ್ಕಿಗೆ ನಡೆದು ದೇವರ ಹೆಸರಿನಲ್ಲಿ ''ಮಂಗಳಂ'' ಎಂದು ಕೂಗಿಕೊಂಡು ಹೊರಟುಬಿಡುತ್ತಿದ್ದೆವು. ಹೀಗೆ ನಡೆಯುತ್ತಿದ್ದುದು ಶ್ರಾವಣ ಶನಿವಾರದ ನಾಲ್ಕು ಶನಿವಾರಗಳು ಮಾತ್ರ. ''ಎದ್ದು ಸ್ನಾನ ಮಾಡ್ಕೊಂಡು ಪಡಿ ಹಾಕಿಸ್ಕೊಂಡು ನೆಟ್ಟಗೆ ಬರೋದು ಬಿಟ್ಟು ಈ ಮುಂಡೇವಕ್ಕೆ ಅದೇನು ಪುರುಡು ಬಂದ್ಬಿಡುತ್ತೋ, ಜೊತೆಗೆ ಆ ದಾಸಯ್ಯ ಬೇರ ಇವರ ಜೊತೆ ಸೇರ್ಕೊಂಡು ಜಾಗ್ಟೆ ಹೊಡೆಯೋದು'' ಎಂದು ಎಷ್ಟು ಬೈದರೂ ಸರಿ, ಈ ಶಬ್ದ ಯುದ್ಧವನ್ನು ಪಾಂಗಿತವಾಗಿ ಪ್ರತಿವರ್ಷವೂ ನಡೆಸಿಕೊಂಡು ಬರುತ್ತಿದ್ದೆವು.

ಹೀಗೆ ಪಡಿ ಹಾಕಿಸಿಕೊಂಡುಬಂದ ಅಕ್ಕಿಯನ್ನು ಮನೆಗೆ ಕೊಟ್ಟು ಸ್ಕೂಲಿಗೆ ಹೊರಟರೆ, ಸ್ಕೂಲಿನಿಂದ ಮಧ್ಯಾಹ್ನ ಬರುವಷ್ಟರಲ್ಲಿ ದೇವರ ನೈವೇದ್ಯವಾಗಿದ್ದ ಅಕ್ಕಿ ಪಾಯಸ ಸಿದ್ಧವಾಗಿರುತ್ತಿತ್ತು. ಇದರಿಂದ ಸ್ಕೂಲಿಗೆ ಹೋಗುವುದು ಪ್ರತಿ ಶನಿವಾರವೂ ತಡವಾಗೇ ಆಗುತ್ತಿತ್ತು. ಅದೂ ವೆಂಕಟಾಚಾರ್ಯರು ಅರಣ್ಯಪರ್ವದ ಪಾಠ ತೆಗೆದುಕೊಂಡರೆ ಬಚಾವ್, ನಮ್ಮೆಲ್ಲರ ಮುಖವನ್ನು ದಿಟ್ಟಿಸಿ ನೋಡಿದ ವೆಂಕಟಾಚಾರ್ರರು ''ಅಹಹಾ... ಇವತ್ತು ಬ್ರಾಹ್ಮಣರಾಗಿ ಹುಟ್ಟಿದಕ್ಕೆ ಸಾರ್ಥಕ ಕಣ್ರೋ... ದಿನಾ ಹೀಗೆ ಮುದ್ರೆ, ವಿಭೂತಿ ಹಾಕ್ಕೊಂಡು ಬರೋದಕ್ಕೆ ಏನ್‌ರೋಗ ನಿಮ್ಗೆ, ಕೂತ್ಕೊಳ್ಳಿ ಕೂತ್ಕೊಳ್ಳಿ'' ಎಂದು ನವಿರಾಗಿ ಗದರಿಸಿದರೆ, ಆರೋಗ್ಯಶಾಸ್ತ್ರದ ಪಾಠವಿದ್ದರೆ, ನಂಜುಂಡಯ್ಯ ಮೇಷ್ಟ್ರೇನಾದರೂ ನಮಗಿಂತ ಮುಂಚೆ ಬಂದಿದ್ದರೆ,

''ಅಹಹಾ... ಆಯ್ತು ಇವತ್ತಿನ ಪಾಯಸದ ಕೋಟ ಗಿಟ್ಟಿಸಿಕೊಂಡುಬಂದ್ಬಿಟ್ರಾ'' ಎಂದು ಬೈದು, ''ತೆಗೀರಿ ತೆಗೀರಿ ಪುಸ್ತಕಾನಾ. ಏನ್ ಇನ್ನೂ ಮುಖಮುಖ ನೋಡ್ತಾ ಕೂತಿದ್ದೀರಾ ?'' ಎಂದು ಕಿಟಕಿಯಾಚೆ ಒಮ್ಮೆ ಬಗ್ಗಿ ನೋಡಿ, ಹಾಗೆ ನೋಡಿದ ನೋಟದಿಂದ ಸಂತೋಷ ಉಬ್ಬಿಬಂದಿದ್ದು, ನಮಗೆ ಬೈಯ್ಗಳು ಕೊಂಚ ಕಡಿಮೆ ಯಾಗುತ್ತಿತ್ತು. ಆದರೆ ಶನಿವಾರಗಳು ಬಿಟ್ಟರೆ ಬಾಕಿ ದಿನಗಳು ಮೊದಲ ಪಿರಿಯಡ್‌ಗೆ ತಡವಾಗಿ ಬಂದರೆ ಬೆಂಚಿನ ಮೇಲೆ ನಿಲ್ಲಿಸುತ್ತಿದ್ದುದಂತು ಗ್ಯಾರಂಟಿ. ಆದರೆ 'ಶನಿವಾರ ಮಾತ್ರ ಯಾಕೆ ಬೈಯೊಲ್ಲ. ಇವರೂ ಏನಾದರೂ ಪಡಿ ಎತ್ತಿ ಬರುತ್ತಿದ್ದರಾ ?' ಎಂಬ ಸಂಶಯ ಬರುತ್ತಿತ್ತು.

ಹ್ಞಾಂ! ಈಗ್ಲೂ ಎಳೆ ತಪ್ಪೋಯ್ತಲ್ವಾ. ಬಂದೆ ಬಂದೆ. ಬಂಗಾರು ದಾಸಯ್ಯನ ವಿಷಯಬಿಟ್ಟು ಎಲ್ಲೋ ಹೊರಟೋಯ್ತಲ್ವಾ ? ಪಾಪ, ಅವನಿಗೂ ವಯಸ್ಸಾಗುತ್ತಾ ಬಂತು. ಶನಿವಾರ ಕೂಡ ಕೆಲವುಸಾರೆ ಭಿಕ್ಷೆಗೆ ಬರುತ್ತಲೇ ಇರಲಿಲ್ಲ. ''ಏನ್ ತೊಂದ್ರೇನೋ ಏನೋ ಪಾಪ, ಬಂಗಾರು ಈ ನಡುವೆ ಭಿಕ್ಷೆಗೆ ಬರ್ತಾ ಇಲ್ಲ ಅಲ್ವಾ ?'' ಎಂದು ಹೆಂಗಸರು ತಮ್ಮ ತಮ್ಮಲ್ಲೆ ಮಾತಾಡಿ ಕೊಳ್ಳುತ್ತಿದ್ದುದು ನಮ್ಮ ಕಿವಿಗೆ ಬಿದ್ದರೂ ನಮಗೆ ಅವನು ಜ್ಞಾಪಕಕ್ಕೆ ಬರುತ್ತಿದ್ದುದು ಶ್ರಾವಣ ಶನಿವಾರಗಳಂದೇ !

ಇದ್ದಕ್ಕಿದ್ದಂತೆ ಅವನ ಮಗ ಪಾಪಣ್ಣ, ಅಪ್ಪನಂತೆ ರುಮಾಲು ಸುತ್ತಿದ ಪೇಟವನ್ನು ತಲೆಗಿಟ್ಟುಕೊಂಡು ಬಗಲಲ್ಲಿ ಶಂಖ, ಜೋಳಿಗೆ ತಗುಲಿಸಿಕೊಂಡು, ಒಂದು ಕೈಲಿ ಗರುಡಗಂಬ, ಮತ್ತೊಂದು ಕೈಯಿಂದ ಜಾಗಟೆ ಬಡಿಯುತ್ತ ಬಂದುದನ್ನು ನೋಡಿದ ಊರವರಿಗೆಲ್ಲಾ ಆಶ್ಚರ್ಯ. ಅರೆ, ಮುದುಕ ಬಂಗಾರು ದಾಸಯ್ಯನಿಗೇ ನಾಯಿತೋ ಏನೋ ಎಂದುಕೊಳ್ಳುವಷ್ಟರಲ್ಲೆ ಅವನೇ, ''ಅಪ್ಪಯಂಗೆ ಉಸಾರಿಲ್ಲ, ನಾನೇ ಬಿಕ್ಸೆ ಬೇಡಾಕೆ ಬಂದೆ'' ಎಂದ. ''ಅಯ್ಯೋ ಪಾಪ ! ಬಂಗಾರುಗೆ ಹುಷಾರಿಲ್ವಂತೆ'' ಎಂದು ಹಲವಾರು ಮಂದಿ ದವಸ-ಧಾನ್ಯದ ಜೊತೆಗೆ ದುಡ್ಡೂ ಕೊಟ್ಟು ಕಳುಹಿಸಿದರು.

ಎರಡು-ಮೂರು ದಿವಸದ ನಂತರ ಬಂಗಾರು ದಾಸಯ್ಯನ ಹೆಂಡತಿಯೇ ಜೋಳಿಗೆ ಹಿಡಿದು ಬಂದಾಗ ಎಲ್ಲರಿಗೂ ಮತ್ತಷ್ಟು ಆಶ್ಚರ್ಯ. ''ನೀನ್ಯಾಕೆ ಬರೋಕೆ ಹ್ವಾದ್ಯೇ... ನಿನ್ನ ಮಗನ್ನ ಕಳಿಸಿದ್ರೆ ಆಗ್ತಿರ್ಲಿಲ್ವಾ...?'' ಎಂದರು ಊರ ಹಿರಿಯರು.

''ಯಾನ್ ಹ್ವೇಳ್ಲಿ ಬುದ್ದಿ... ಅವ ಮೂರು ಜಿನಕ್ಕೆ ಮುಂಚೆ ನಮಗೊತ್ತಿಲ್ದಂಗೆ ಸಂಕ, ಜಾಗ್ಟೆ ಎತ್ಕೊಂಡ್ ಬಂದು ಬಿಕ್ಸಾ ಸಂಪಾದಿಸ್ಕಂಡು, ರಂಗನಾಥನ ಪುರದ ತಾವ ಕಳ್ಳಬಟ್ಟಿ ಕುಡಿದು ಬಿದ್ದವ್ನಂತೆ, ಎಲ್ಲ ನನ್ನ ಗಾಚಾರ'' ಎಂದು ಹೇಳಿಕೊಂಡು ಅಳತೊಡಗಿದಳು. ಅವಳಿಗೂ ರಾಗಿ-ಭತ್ತ, ದುಡ್ಡುಕೊಟ್ಟು ಕಳುಹಿಸಿದರು.

''ನಿನ್ನ ಮಗ ಇನ್ನೊಂದ್ಸಾರೆ ಇತ್ಲಾಗ್ ಬಂದ, ಮಾಡ್ತೀವಿ... ಲೇ ಯಾರ‍್ರಾ ಅದು..., ಈ ಬಂಗಾರು ಮಗ ಪಾಪಣ್ಣ ಬಂದ್ರೆ ಈ ಅಶ್ವತ್ಥಮರಕ್ಕೆ ಕಟ್ಟಾಕಿಬಿಡ್ರಾ'' ಎಂದ ಊರ ಹಿರಿಯ ನಂಜೇಗೌಡ.

ಆದರೆ ದಾಸಯ್ಯನ ಮಗ ಪುನಃ ಯಾಕೆ ಬಂದಾನು ! ಒಂದು ದಿನ ರಾತ್ರಿ ಬಂದವನು ದಾಸಯ್ಯನ ಶಂಖ, ಜಾಗಟೆ, ತುತ್ತೂರಿ ಎಲ್ಲವನ್ನೂ ಕದ್ಕೊಂಡು ಓಡಿ ಹೋದ್ನಂತೆ. ಪುನಃ ಯಾರೂ ಅವನ ಮುಖಾನೇ ನೋಡಲಿಲ್ಲ.

* * *

ನಾವುಗಳೂ ಊರುಬಿಟ್ಟು ಪಟ್ಟಣಕ್ಕೆ ಬಂದು ಎಷ್ಟೋ ವರ್ಷಗಳಾಗಿಬಿಟ್ಟಿದೆ. ಅಪರೂಪಕ್ಕೆ ಊರಕಡೆ ಹೋದಾಗ ಹಳ್ಳಿಯವರನ್ನು ಮಾತನಾಡಿಸಿಕೊಂಡು ಅರಳೀ ಕಟ್ಟೆಯ ಬಳಿ ಹೋಗಿನಿಂತರೆ ''ನರಸಿಂಹಾಯ ಮಂಗಳಂ... ಶ್ರೀನಿವಾಸಾಯ ಮಂಗಳಂ...'' ಎಂದು ಅಂದು ನಾವು ಮಾಡುತ್ತಿದ್ದ ಶಬ್ದ ಯುದ್ಧ, ಬಂಗಾರು ದಾಸಯ್ಯನು ಎರಡು ಗುಂಪಿನವರನ್ನೂ ಪುರುಡು ಕಟ್ಟಿ ಹುಚ್ಚೆಬ್ಬಿಸುತ್ತಿದ್ದುದು ಜ್ಞಾಪಕಕ್ಕೆ ಬರುತ್ತೆ. ದಾಸಯ್ಯ ಭಿಕ್ಷೆಗೆ ಬಂದಾಗ ಅವನನ್ನು ರೇಗಿಸಲು ನಾವು ಹಾಡುತ್ತಿದ್ದ ''ಊರಿಗೆ ಬಂದರೆ ದಾಸಯ್ಯ...'' ಮತ್ತು ಅವನು ಭಿಕ್ಷೆ ಬೇಡಲು ಬಂದಾಗ ಸ್ಮರಿಸುತ್ತಿದ್ದ ಪದಗಳಾದ ''ನಿಖಿಲಾಕ್ಷ ಸುರ ಗಂಗಾಧರನೇ... ನಿರಂತರವೂ ನಂಜಿದೆನೊ ನಿಖಿಳ ಗುಣ ಪೂರ್ಣ... ಝುಗಝುಗಿಸುವ ಮುಕುಟಧರಾ ಜೀವರಾಧಾರ... ಇಪ್ಪತ್ತವಂದು ಐದೊಂದು ನೂರು ಅಪ್ರತಿಮ ಹಂಸಮಂತರಾ...'' ಎಂದು ಮುಂತಾಗಿ ಹೇಳಿ ಕೊಂಡು ಜಾಗಟೆಯನ್ನು ಢಣ್ ಎಂದು ಬಾರಿಸುತ್ತಿದ್ದುದು ನಮಗೂ ಕಂಠಪಾಠವಾಗಿ ಹೋಗಿದ್ದುದು ಇಂದು ಜ್ಞಾಪಕಕ್ಕೆ ಬಂದಾಗ ಆಶ್ಚರ್ಯವಾಗುತ್ತದೆ. ಈ ಸಾಲು ಗಳೆಲ್ಲವೂ ಪುರಂದರದಾಸರ, ಗುರು ಜಗನ್ನಾಥದಾಸರ, ವ್ಯಾಸರಾಯರ, ವಿಜಯವಿಠಲದಾಸರ ಮತ್ತು ಗುರು ವಿಜಯವಿಠಲರ ಕೀರ್ತನೆಗಳ ಸಾಲುಗಳು. ಅದು ಹೇಗೆ ಅಷ್ಟು ವರುಷಗಳ ಹಿಂದೆಯೇ ವಿದ್ಯಾವಂತರಾದ ನಮ್ಮ ಮನೆಗಳಲ್ಲಿ ದಾಸರಪದಗಳನ್ನು ತಿಳಿದುದಕ್ಕಿಂತಲೂ ನಿರಕ್ಷರ ಕುಕ್ಷಿ ಬಂಗಾರು ದಾಸಯ್ಯನಿಗೆ ಹೇಗೆ ಗೊತ್ತಿತ್ತು ? ಪಾಪ ಅವನ ಮಗ ಏನಾದನೋ ? ಬಂಗಾರು ದಾಸಯ್ಯ, ಅವನ ಹೆಂಡತಿ ಇಬ್ಬರೂ ಈಗ ಇಲ್ಲ. ಹೀಗೆ ಬಾಲ್ಯದ ನೆನಪುಗಳನ್ನೆಲ್ಲಾ ಹೂವಾಗಿ ಅರಳಿಸಿಕೊಂಡು ಬುಟ್ಟಿಯಲ್ಲಿ ತುಂಬಿಕೊಂಡು ಪಟ್ಟಣಕ್ಕೆ ಹಿಂದಿರುಗುತ್ತೇನೆ. ಕೆಲವು ದಿವಸಗಳವರೆಗೂ ಬಂಗಾರು ದಾಸಯ್ಯನ ನೆನಪು ಕಾಡುತ್ತಲೇ ಇರುತ್ತದೆ.

ವೈ. ಎನ್. ಗುಂಡೂರಾವ್
ನಂ. [illegible], [illegible]ನೇ ಅಡ್ಡರಸ್ತೆ
೨ನೇ ಹಂತ, ಗಿರಿನಗರ, ಬೆಂಗಳೂರು - ೫೬೦ ೦೮೫





## ಅವ್ವ ನಿನ್ನ ಅರಿಯಲಿ ಹ್ಯಾಂಗ ?

(ಉತ್ತಮ್ ಕಾಂಬ್ಳೆ ಆತ್ಮಕಥನ)

ಕನ್ನಡಕ್ಕೆ : ಡಾ|| ಸರಜೂ ಕಾಟ್ಕರ್

**ಪುಟ : ೧೫೬**

**ಬೆಲೆ : ರೂ. ೭೫**

**ರೂಪ ಪ್ರಕಾಶನ,** ೨೪೦೬-೨೪೦೭/ಕೆ೧, ೧ನೇ ಕ್ರಾಸ್, ಹೊಸಬಂಡಿಕೇರಿ, ಮೈಸೂರು - ೪

ಇಲ್ಲೊಬ್ಬಳು ಅವ್ವ ಇದ್ದಾಳೆ. ಆಕೆ ಒಂದು ಎಳ್ಳನ್ನು ಏಳು ಭಾಗ ಮಾಡಿ ಹಂಚಿ ತಿನ್ನುವ ಪಾಠ ಹೇಳುತ್ತಿದ್ದಾಳೆ. ಆಕೆಗೆ ಗೊತ್ತಿರುವ ಈ ಬಹುದೊಡ್ಡ ಮೌಲ್ಯ ನಮಗೆ ಗೊತ್ತಿದೆಯೆ ? ವಿದ್ಯಾವಂತ ಮಗನನ್ನು ಚೆನ್ನಾಗಿ ಅರ್ಥೈಸಿಕೊಂಡ ಅವ್ವ ಮತ್ತು ಆಕೆಯ ಉನ್ನತ ಆದರ್ಶವನ್ನು ಅರ್ಥೈಸಲಾಗದ ಮಗ ಇವರಿಬ್ಬರ ಮಧ್ಯೆ ಈ ಆತ್ಮಕಥನ ಸುತ್ತಿಕೊಂಡಿದೆ. ಮರಾಠಿಯ ದಲಿತ ಲೇಖಕರೆಂದು ಖ್ಯಾತರಾದ ಶ್ರೀ ಉತ್ತಮ ಕಾಂಬ್ಳೆ ತನ್ನವ್ವನ ಕಥೆಯನ್ನೇ ತನ್ನ ಆತ್ಮಕಥನವಾಗಿಸಿದ್ದಾರೆ. ತುತ್ತು ಅನ್ನಕ್ಕಾಗಿ ಬಾಲ್ಯದಲ್ಲಿನ ಹೋರಾಟ, ದಲಿತರಾಗಿದ್ದರಿಂದ ಅನುಭವಿಸಿದ ಅವಮಾನ ನೆನಪಿಸಿಕೊಳ್ಳುವ ಲೇಖಕರು ಅದನ್ನು ಇಂದಿನ ತಮ್ಮ ಸ್ಥಾನಮಾನದೊಂದಿಗೆ ತಾಳೆ ನೋಡುತ್ತಾರೆ. ಅನುವಾದ ಶ್ರೀ ಸರಜೂ ಕಾಟ್ಕರ್ ಅವರದ್ದು.



## ಆಗಾಗ

(ಸಾಹಿತ್ಯ ಪರಿಚಾರಿಕೆಯ ನಡುವಿನ ಮಾತು-ಬರಹ)

ಜಿ. ಶ್ರೀನಿವಾಸರಾಜು

**ಪುಟ : xvi + ೭೪೪**

**ಬೆಲೆ : ರೂ. ೩೦೦**

**ಅಭಿನವ,** ೧೭/೧೮-೨, ಮೊದಲನೆಯ ಮುಖ್ಯರಸ್ತೆ, ಮಾರೇನಹಳ್ಳಿ, ವಿಜಯನಗರ, ಬೆಂಗಳೂರು - ೫೬೦ ೦೪೦

ಜಿ. ಶ್ರೀನಿವಾಸರಾಜು ಹಾಗೂ ಕ್ರೈಸ್ಟ್ ಕಾಲೇಜಿನ ಬಾಂಧವ್ಯ ಮೂವತ್ತು ವರ್ಷಗಳದ್ದು. ಅಧ್ಯಾಪಕರಾಗಿ ನಂತರ ಪ್ರಾಂಶುಪಾಲರಾಗಿ ವಿದ್ಯಾರ್ಥಿಗಳಿಗೆ ಅಚ್ಚುಮೆಚ್ಚಿನವರಾಗಿದ್ದರು. ಕ್ರೈಸ್ಟ್ ಕಾಲೇಜಿನ ಕನ್ನಡ ಸಂಘದ ಮೂಲಕ ಉಪಯುಕ್ತ ಪುಸ್ತಕಗಳನ್ನು ಹೊರ ತಂದಿದ್ದಾರೆ. ''ಹೊಸತು'' ಮಾಸ ಪತ್ರಿಕೆಯ ಸಂಪಾದಕ ಮಂಡಲಿಯಲ್ಲಿ ಸದಸ್ಯರಾಗಿದ್ದು, ಪತ್ರಿಕೆಯ ಹಿತೈಷಿಯಾಗಿದ್ದರು. ಆಪ್ತ ವಲಯದಲ್ಲಿ ಆತ್ಮೀಯರಾಗಿದ್ದು ಅವರಿಲ್ಲದ ಕೊರತೆ ಅವರ ಬಂಧುಗಳಿಗೆ ಮಾತ್ರವಲ್ಲದೆ ಗೆಳೆಯರನೇಕರಿಗೆ ಇನ್ನೂ ತುಂಬಿಕೊಳ್ಳಲಾಗುತ್ತಿಲ್ಲ. ಅವರಿದ್ದಾಗಲೇ ಬರಬೇಕಿದ್ದ ಈ ಸಂಗ್ರಹ ಇದೀಗ ಬಂದಿದೆ. ಈ ಬೃಹದ್ಗಾತ್ರದ ಸಂಪುಟದಲ್ಲಿ ಕವನ, ನಾಟಕ, ಲೇಖನಗಳೆಲ್ಲ ಸೇರಿವೆ. ಎಲ್ಲರಿಗೂ ಸಹಕಾರ ನೀಡುತ್ತ ಓಡಾಡುತ್ತಿದ್ದ ಅವರು ತಮ್ಮ ಬರವಣಿಗೆಗೆ ಯಾವಾಗ ಸಮಯ ಹೊಂದಿಸಿಕೊಳ್ಳುತ್ತಿದ್ದರೆಂಬುದೇ ಸೋಜಿಗ. ಅವರ ವ್ಯಕ್ತಿತ್ವವನ್ನು ಈ ಸಂಪುಟವನ್ನೋದಿಯೇ ಅರಿಯಬೇಕು.

## ಸಂಗತಿ (ಆತ್ಮಕತೆ)

ತಮಿಳು ಮೂಲ : ಬಾಮ; ಕನ್ನಡಕ್ಕೆ : ಎಸ್. ಪ್ರೇಮಿನ್ ದಾಸ್

**ಪುಟ : ೧೦೮** ಬೆಲೆ : ರೂ. ೬೫

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ ೫೧೫೯, ಬೆಂಗಳೂರು - ೫೬೦ ೦೦೧

ದಲಿತ ಮಹಿಳಾ ಸಾಹಿತ್ಯದಲ್ಲಿ ಬಾಮ ಅವರ ಈ ಕೃತಿಗೆ ವಿಶಿಷ್ಟ ಸ್ಥಾನವಿದೆ. ಕ್ರೈಸ್ತರಾಗಿ ಮತಾಂತರಗೊಂಡ ಪರಯ ಸಮಾಜದ ದಲಿತ ಸ್ತ್ರೀ ಸಮುದಾಯದ ಕಷ್ಟ-ಕೋಟಲೆಗಳನ್ನು ಇವರು ಹೇಳುತ್ತಿದ್ದಾರೆ. ಇಲ್ಲಿನ ಪಾತ್ರಗಳನ್ನು ಕಾಲ್ಪನಿಕವಾಗಿ ಸೃಷ್ಟಿಸದೆ, ಚಿಕ್ಕಂದಿನಲ್ಲಿ ಅಜ್ಜಿಯಿಂದ ಕೇಳಿ ತಿಳಿದ [illegible] ಎಷ್ಟೋ ನಡೆದ ಘಟನೆಗಳನ್ನೇ ದಾಖಲಿಸಿದ್ದಾರೆ. ತಮಿಳುನಾಡಿನಲ್ಲಿನ ಕೆಲವರ್ಷ ಹಿಂದಿನ ಘಟನೆಯೊಂದನ್ನು ಕೇಳಿ : ದಲಿತ ಕೇರಿಯ ದಿನತುಂಬಿದ ಬಸುರಿ ಹೆಣ್ಣುಮಗಳೊಬ್ಬಳು ಹುಲ್ಲು ತರಲು ಕಾಡಿಗೆ ಹೋಗಿದ್ದಾಗ ಪ್ರಸವಿಸಿ, ಹುಲ್ಲುಕೊಯ್ಯುವ ಕುಡುಗೋಲಿಂದ ಮಗುವಿನ ಹೊಕ್ಕುಳಬಳ್ಳಿ ಕತ್ತರಿಸಿ, ಹುಲ್ಲುಹೊರೆಯನ್ನೂ, ಮಗುವನ್ನೂ ಹೊತ್ತು ಮನೆಯವರೆಗೂ ಬಂದಳಂತೆ! ಇದನ್ನೋದಿ ಇಂದು ನಗುವವರಿರಬಹುದು; ಆ ಮಹಾತಾಯಿ ಇದನ್ನು ಯಾವ ಗಿನ್ನೆಸ್ ದಾಖಲೆಗಾಗಿಯೂ ಮಾಡಿದ್ದಲ್ಲ; ಹಸಿವು, ಕಡುಬಡತನ, ಅಸಹಾಯಕ ಬದುಕಿನಲ್ಲಿ ಇವೆಲ್ಲ ಸಾಮಾನ್ಯ. ಕೃತಿಯ ಲೇಖಕಿ ಬಾಮ ಒಂದೊಮ್ಮೆ ಕ್ರೈಸ್ತ ಸನ್ಯಾಸಿನಿಯಾಗಿದ್ದರು. ಅಲ್ಲಿನ ವಾತಾವರಣ ಹಿಡಿಸದೆ ಹೊರಬಂದು ಇದೀಗ ಶಿಕ್ಷಕಿ-ಲೇಖಕಿ ಎರಡೂ ಆಗಿದ್ದಾರೆ. ಇವರ ಕೃತಿಗಳು ಇಂಗ್ಲಿಷ್‌ಗೆ ಭಾಷಾಂತರಗೊಂಡು ಕ್ರಾಸ್‌ವರ್ಡ್ ಪ್ರಶಸ್ತಿಯೂ ಲಭಿಸಿದೆ.



## ಭಾರತೀಯ ಖಗೋಳವಿಜ್ಞಾನದಲ್ಲಿ ಗ್ರಹಣಗಳು

ಡಾ|| ಎಸ್. ಬಾಲಚಂದ್ರರಾವ್

**ಪುಟ : x + ೪ + ೧೫೨** ಬೆಲೆ : ರೂ. ೮೦

**ಭವನದ ವಿಜ್ಞಾನ ಮತ್ತು ಮಾನವೀಯ ಮೌಲ್ಯಗಳ ಗಾಂಧೀ ಕೇಂದ್ರ, ಭಾರತೀಯ** ವಿದ್ಯಾಭವನ, ನಂ. ೪೩/೧, ರೇಸ್ ಕೋರ್ಸ್ ರಸ್ತೆ, ಬೆಂಗಳೂರು - ೫೬೦ ೦೦೧

ಅಂತರರಾಷ್ಟ್ರೀಯ ಖಗೋಳವಿಜ್ಞಾನದ ವರ್ಷ - ೨೦೦೯ರ ಸಂದರ್ಭಕ್ಕೆ ಸರಿಯಾಗಿ ಡಾ|| ಎಸ್. ಬಾಲಚಂದ್ರರಾಯರಿಂದ ಬರಲೇಬೇಕಾಗಿದ್ದ ಈ ಪುಸ್ತಕಕ್ಕೆ ಸುಸ್ವಾಗತ. ಗ್ರಹಣಗಳು ಖಗೋಳದ ವಿದ್ಯಮಾನಗಳಲ್ಲಿ ಅತ್ಯಂತ ಕೌತುಕಮಯ ಕ್ಷಣಗಳು. ನಮಗೆ [illegible] ಅವು [illegible]. ಸಂಭವಿಸಲಿರುವ ಗ್ರಹಣವನ್ನು ಇಂದಿನ ಖಗೋಳ ವಿಜ್ಞಾನಿಗಳು ಕರಾರುವಾಕ್ಕಾಗಿ ಮುಂಚಿತವಾಗಿ ತಿಳಿಸಬಲ್ಲ. ಭಾರತೀಯ ಖಗೋಳ ವಿಜ್ಞಾನಿಗಳು ಮುಂಚಿನಿಂದಲೂ ಆಕಾಶದ ಈ ಸೋಜಿಗವನ್ನು ಗಮನಿಸಿದ್ದರು. ಅತ್ರಿ ಮುನಿಯು ಸೂರ್ಯನನ್ನು ಗ್ರಹಣಮುಕ್ತನನ್ನಾಗಿಸಿದನೆಂದೂ, ಇಂದ್ರಾದಿ ದೇವತೆಗಳು ಆತನನ್ನು ಕೊಂಡಾಡಿದ್ದರೆಂದೂ ಸ್ತೋತ್ರಗಳಲ್ಲಿ ಉಲ್ಲೇಖವಿದೆ. ಮೂಢನಂಬಿಕೆ ಬಲವಾಗಿದ್ದ ಕಾಲದಲ್ಲಿನ ಗ್ರಂಥಕರ್ತರು, ತಮ್ಮ ರಾಮಾಯಣ, ಮಹಾಭಾರತ, ಜೈಮಿನಿ ಭಾರತ – ಕೃತಿಗಳ ಕಥಾ ಸಂದರ್ಭದ ಕೇಡುಗಾಲ - ಅಪಶಕುನದ ಮುನ್ಸೂಚನೆಗಳಲ್ಲಿ ಸೂರ್ಯ, ಚಂದ್ರರ ಗ್ರಹಣ, ಧೂಮಕೇತುದರ್ಶನ, ಉಲ್ಕಾಪಾತದಂತಹ ಸಹಜ ವಿದ್ಯಮಾನ ಘಟಿಸಿದ ದಿನಗಳಲ್ಲೇ ನಡೆದುವೆಂದು ದಾಖಲಿಸಿ ದಾರಿ ತಪ್ಪಿಸಿದ್ದೂ ಉಂಟು. ಇರಲಿ, ಅಪೂರ್ವ, ಅಪಾರ ಮಾಹಿತಿಯಿರುವ ಇದನ್ನು ಗ್ರಹಣಗಳಿಗೆ ಭಯಪಡುವ ಜನರು ಅವಶ್ಯ ಓದಬೇಕು.

## ಬದುಕು ನಮ್ಮದು (ಆತ್ಮಕಥೆ)



ಮರಾಠಿ ಮೂಲ : ಬೇಬಿತಾಯಿ ಕಾಂಬಳೆ; ಕನ್ನಡಕ್ಕೆ : ಚಂದ್ರಕಾಂತ ಪೋಕಳೆ

**ಪುಟ : ೯೬** ಬೆಲೆ : ರೂ. ೫೫

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ ೫೧೫೯, ಬೆಂಗಳೂರು - ೫೬೦ ೦೦೧

ಹಿಂದಿ, ಪಂಜಾಬಿ, ಉರ್ದು, ಫ್ರೆಂಚ್, ಸ್ಪಾನಿಷ್, ಇಂಗ್ಲಿಷ್ ಮಾತ್ರವಲ್ಲದೆ ಇದೀಗ ಕನ್ನಡಕ್ಕೆ ಬಂದಿರುವ ಈ ಪುಸ್ತಕದ ಮೂಲ ಮರಾಠಿ. ಅರವತ್ತು ವರ್ಷ ಹಿಂದಿನ ಮಹಾರಾಷ್ಟ್ರದ ದಲಿತರ ಬದುಕು ಹೇಗಿತ್ತು ? ನಾಯಿ-ಕಾಗೆ-ಹದ್ದುಗಳನ್ನೋಡಿಸುತ್ತ ಸತ್ತ ಜಾನುವಾರುಗಳನ್ನು ಮಾಂಸಕ್ಕಾಗಿ ಒಯ್ಯುವ ಸ್ಥಿತಿ. ಅಸ್ಪೃಶ್ಯತೆಯ ಕೀಳರಿಮೆ, ಊರ ಹೊಲಸನ್ನು [illegible] ಎಂಜಲು ಆಹಾರವನ್ನು ಉಣಬೇಕಾಗಿತ್ತು. ಮೇಲ್ಜಾತಿಯವರ ಅಂಗಳಕ್ಕೂ [illegible] ಜೊತೆಗೆ [illegible] ಬಂದ ಕುರುಡು ಸಂಪ್ರದಾಯಗಳು. ಪಾಲಿಸದಿದ್ದರೆ ದೇವಿ ಕೋಪಗೊಂಡು [illegible] ಮಕ್ಕಳನ್ನೆಲ್ಲ [illegible] ಎಂಬ ಭಯ ! ಅದಕ್ಕಾಗಿ ಕೋಣನ ಬಲಿಯಂಥ ಭೀಕರ ಆಚರಣೆ. ಇಂಥ ನಿಕೃಷ್ಟ ಬದುಕಿನಿಂದ [illegible] ಮೂಲಕ ತಮ್ಮನ್ನುದ್ಧರಿಸಲು ಹೋರಾಡಿದ ಡಾ|| ಬಿ. ಆರ್. ಅಂಬೇಡ್ಕರ್ ಅವರನ್ನು [illegible] ಬೇಬಿತಾಯಿ ಕಾಂಬಳೆ ತನ್ನ ಬಾಲ್ಯಕಾಲವನ್ನು ನಮ್ಮ ಮುಂದೆ ಹರಡಿದ್ದಾರೆ. [illegible] ಕಥಾನಕದ ಅನುವಾದ ಚಂದ್ರಕಾಂತ ಪೋಕಳೆಯವರದು.

– [illegible]

೩೪/೧೧, ೨ನೇ ಕ್ರಾಸ್, ಬಾಂಬೆ ಡೈಯಿಂಗ್ [illegible]

# ಇಂದಿನ ಶಿಕ್ಷಣ ವ್ಯವಸ್ಥೆಯಲ್ಲಿ ಅಡಗಿರುವ ಗುಲಾಮಿ ಸಂಸ್ಕೃತಿ

ಶಿಕ್ಷಕರು ರಾಷ್ಟ್ರದ ಭವಿಷ್ಯ ನಿರ್ಮಾಪಕರು; ಬದಲಾವಣೆಯ ಹರಿಕಾರರು. ಅವರು ನಿತ್ಯ ಪರಿವರ್ತನ ಶೀಲರಾಗಿದ್ದು, ತಮ್ಮ ಸುತ್ತಲಿನ ಸಮಾಜವನ್ನು ಬದಲಿಸುವ ಪ್ರೇರಕಶಕ್ತಿಯಾಗಿರಬೇಕು. ಸ್ವಾಭಿಮಾನ, ಆತ್ಮಗೌರವ, ಮತನಿರಪೇಕ್ಷತೆ, ಪ್ರಜಾಪ್ರಭುತ್ವ, ಸಮಾನತೆ ಮೊದಲಾದ ಮೌಲ್ಯಗಳಿಗೆ ಬದ್ಧರಾಗಿರಬೇಕು ಎಂದೆಲ್ಲ ವಿವಿಧ ವೇದಿಕೆಗಳಿಂದ ಚಿಂತಕರು, ಪ್ರಾಜ್ಞರು ಹಾಗೂ ರಾಜಕಾರಣಿಗಳು ಧಾರಾಳವಾಗಿ ಹೇಳುತ್ತಿರುತ್ತಾರೆ. ಆದರೆ ವಾಸ್ತವ ತೀರ ವ್ಯತಿರಿಕ್ತವಾಗಿದೆ.

ಶಿಕ್ಷಕರಲ್ಲಿ ಬಹುಪಾಲು ಜನ ಬದಲಾವಣೆಯ ವಿರೋಧಿಗಳು; ಯಥಾಸ್ಥಿತಿವಾದಿಗಳು. ಶಿಕ್ಷಣರಂಗದಲ್ಲಿ ಯಾವುದೇ ಹೊಸ ಯೋಜನೆ, ಕಾರ್ಯಕ್ರಮ ಬಂದರೆ ಇವರು ಅದನ್ನು ವಿರೋಧಿಸುತ್ತಾರೆ. ಹಿಂದಿನ ಕ್ರಮಗಳನ್ನೇ ಪುರಸ್ಕರಿಸಿ ಅದನ್ನೇ ಅನುಸರಿಸುತ್ತಾರೆ. ''ನಾವು ಬಿ.ಎಡ್. ಮಾಡುವಾಗ ಮೇಷ್ಟ್ರು ಹೇಳಿಕೊಟ್ಟದ್ದು ಹೀಗೆ. ಅದೇ ಸರಿಯಾದ ಕ್ರಮ. ನಾವು ಅದನ್ನು ಬದಲಾಯಿಸೋಲ್ಲ'' ಎಂದು ಕಡ್ಡಿಮುರಿದಂತೆ ನುಡಿಯುತ್ತಾರೆ. 'ಅಕ್ಷರ ದಾಸೋಹ', 'ಚೈತನ್ಯ', ಬಾಲೆಯರಿಗೆ ಬೈಸಿಕಲ್ ಎಂಬ ಯಾವುದೇ ಕಾರ್ಯಕ್ರಮಗಳನ್ನೂ ಇವರು ಸ್ವಾಗತಿಸುವುದಿಲ್ಲ. ಸಿದ್ಧಾಂತದ ಹಾಗೂ ಆಚರಣೆಯ ನಡುವಿನ ಕಂದಕವನ್ನು ಗುರುತಿಸುವುದಿಲ್ಲ. ಕಾರ್ಯಕ್ರಮಗಳು ಯಶಸ್ವಿಯಾಗಿ ಜಾರಿಗೊಂಡರೂ ಅವನ್ನು ಒಪ್ಪಲಿಕ್ಕೆ, ತಮ್ಮ ಅಭಿಪ್ರಾಯಗಳನ್ನು ಪರಿಷ್ಕರಿಸಲಿಕ್ಕೆ ಸಿದ್ಧರಿಲ್ಲ. ಇಂಥ ಶಿಕ್ಷಕರು ಹೇಗೆ ತಾನೆ ಸಾಮಾಜಿಕ, ಸಾಂಸ್ಕೃತಿಕ ಬದಲಾವಣೆಗಳ ಬಗ್ಗೆ ವಕಾಲತ್ತು ವಹಿಸಲು ಸಾಧ್ಯ ? ಇವರು ಹೇಗೆ ತಾನೆ ತರಗತಿಗಳಲ್ಲಿ ಆಧುನಿಕ ಮೌಲ್ಯಗಳ ಬಗ್ಗೆ ಮಕ್ಕಳಲ್ಲಿ ಹೊಸ ಪ್ರಜ್ಞೆ ಮೂಡಿಸಲು ಸಾಧ್ಯ ? ಶಿಕ್ಷಕ ಬದಲಾವಣೆಗಳಿಗೆ ಒಗ್ಗಿಕೊಳ್ಳದಿದ್ದರೆ, ಅವರ ತರಗತಿಗಳಲ್ಲಿ ವರ್ತನೆಯ ಪರಿವರ್ತನೆಗಳು ಹೇಗೆ ಮೈದೋರಲು ಸಾಧ್ಯ ?

ಶಿಕ್ಷಕರು ಪ್ರಜಾಪ್ರಭುತ್ವದ ಮೌಲ್ಯಗಳನ್ನು ಬಿತ್ತಿ ಬೆಳೆಯಬೇಕಾದವರು. ಬೇವು ಬಿತ್ತಿ ಮಾವು ಬೆಳೆಯಲು ಸಾಧ್ಯವಿಲ್ಲ ತಾನೆ ? ಶಿಕ್ಷಕರಲ್ಲಿ ಇಂದಿಗೂ ಹಲವರು ಊಳಿಗಮಾನ್ಯ ಮೌಲ್ಯಗಳನ್ನು, ನಿರಂಕುಶ ಮೌಲ್ಯಗಳನ್ನು ಪ್ರತಿಪಾದಿಸುವವರು. ''ಈ ದೇಶದಲ್ಲಿ ಇಂದಿಗೂ ಬ್ರಿಟಿಷರೇ ಇರಬೇಕಾಗಿತ್ತು. ನಮ್ಮ ದೇಶ ಪ್ರಜಾಪ್ರಭುತ್ವ ವ್ಯವಸ್ಥೆಗೆ ಸೂಕ್ತವಲ್ಲ. ಇಂದಿರಾ ಗಾಂಧಿ ಜಾರಿ ಮಾಡಿದ ತುರ್ತುಪರಿಸ್ಥಿತಿಯೇ ಉತ್ತಮ'' ಎಂದು ನಿರ್ಭಿಡೆಯಿಂದ ಘೋಷಿಸುವ ಇವರು ತರಗತಿಗಳಲ್ಲಿ ಮಕ್ಕಳಿಗೆ ಸ್ವಾತಂತ್ರ್ಯ ನೀಡದವರು. ತಾವು ಹೇಳಿದ್ದನ್ನೇ ವಿದ್ಯಾರ್ಥಿಗಳು ಮಾಡಬೇಕು; ತಾವು ಹೇಳಿಕೊಟ್ಟ ಉತ್ತರಗಳನ್ನೇ ಬರೆಯಬೇಕು. ತಮ್ಮನ್ನು ಪ್ರಶ್ನಿಸಬಾರದು. ತಮ್ಮ ಆಜ್ಞೆಗಳನ್ನು ಚಾಚೂತಪ್ಪದೆ ಪಾಲಿಸಬೇಕು ಎಂಬ ಧೋರಣೆ ಉಳ್ಳವರು ! ವಿದ್ಯಾರ್ಥಿಗಳ ಅಭಿಪ್ರಾಯಗಳಿಗೆ ಕಿವಿಕೊಡದಿರುವವರು ! ಪ್ರಜಾಪ್ರಭುತ್ವದ ಬಗ್ಗೆ ತರಗತಿಗಳಲ್ಲಿ ಬೋಧನೆ ಮಾಡುವುದು ಬೇರೆ; ಜೀವನದ ಆಚರಣೆ ಬೇರೆ ಎಂದು ತಿಳಿದವರಿಂದ ಯಾವ ಬದಲಾವಣೆ ನಿರೀಕ್ಷಿಸಬಹುದು ?

ಸರ್ವಸಮಾನತೆಯ ತತ್ವಗಳನ್ನು ಶಿಕ್ಷಕರು ಪ್ರತಿಪಾದಿಸಬೇಕು, ಎಲ್ಲ ವಿದ್ಯಾರ್ಥಿಗಳನ್ನು ಸಮಾನ ನೆಲೆಯಲ್ಲಿ ಪರಿಗಣಿಸಬೇಕು. ಎಲ್ಲ ಅರ್ಥಗಳಲ್ಲಿ ಎಲ್ಲ ವರ್ಗದ ಹಿಂದುಳಿದ ವಿದ್ಯಾರ್ಥಿಗಳ ಬಗ್ಗೆ ಸಹಾನುಭೂತಿಪರ ನಿಲುವು ತಳೆದು ಕಲಿಕೆಯ ಕ್ರಿಯೆಯಲ್ಲಿ ಅವರೊಡನೆ ಸಹಕರಿಸಬೇಕು ಎಂದು ನಿರೀಕ್ಷಿಸಲಾಗುತ್ತದೆ. ಆದರೆ ಈಗೀಗ ಶಿಕ್ಷಕರು ಹೇಳುವುದನ್ನು ಕೇಳಿದರೆ ಗಾಬರಿಯಾಗುತ್ತದೆ. ''ನಮ್ಮ ಶಾಲೆಯಲ್ಲಿ ಇತರ ಜಾತಿಯ ಮಕ್ಕಳ ಸಂಖ್ಯೆ ಹೆಚ್ಚು. ಅವು ಏನೂ ಪ್ರಯೋಜನವಿಲ್ಲ. ಅವಕ್ಕೆ ಕಲಿಸುವುದೇ ದಂಡ'' ಎನ್ನುವವರಿದ್ದಾರೆ. ಕನ್ನಡದ ಕವಿ ಕುವೆಂಪು ಅಂಥವರಿಗೆ ಇಂಥ ಶಿಕ್ಷಕರು ಸಿಕ್ಕಿದ್ದರೆ ಅವರು ನಿಜಕ್ಕೂ ಸಗಣಿ ಹೊರುವ ಪರಿಸ್ಥಿತಿ ಬರುತ್ತಿತ್ತೋ ಏನೋ ! ಇನ್ನೂ ಹಲವು ಶಿಕ್ಷಕರು ಹೀಗೆ ಹೇಳುವುದನ್ನು ಕೇಳಿದ್ದೇನೆ – ''ನಮ್ಮ ಶಾಲೆಯಲ್ಲಿ ಸಾಬರ ಮಕ್ಕಳೇ ತುಂಬಿದ್ದಾರೆ. ಅವಕ್ಕೆ ಶಾಲೆ ಬೇಡ; ದುಬೈ ದುಡ್ಡು ಬರ್ತದೆ. ಮಜಾ ಮಾಡ್ತವೆ. ಮತ್ತೆ ಉಂಟಲ್ಲ ಭಯೋತ್ಪಾದನೆಯ ಕೆಲಸ !?'' ಈ ರೀತಿಯ ಪೂರ್ವಗ್ರಹಪೀಡಿತ ಶಿಕ್ಷಕರು ತರಗತಿಗಳಲ್ಲಿ ಹಿಂದುಳಿದ ಜನರಿಗೆ, ಜಾತಿಗಳವರಿಗೆ, ಅಲ್ಪಸಂಖ್ಯಾತರಿಗೆ ಏನು ತಾನೆ ಕಲಿಸಿಯಾರು ? ಇವರೆಲ್ಲ ಚೆನ್ನಾಗಿ ಕಲಿಯದೇ ಇರಲಿ, ಪ್ರಗತಿ ಸಾಧಿಸದೇ ಇರಲಿ, ತಮ್ಮ ಮಟ್ಟಕ್ಕೆ ಬರದಿರಲಿ ಮತ್ತು ತಮಗಿಂತಲೂ ಮುಂದುವರಿಯದಿರಲಿ ಎಂದು ಪ್ರಾರ್ಥಿಸುವ ಇಂಥ ಶಿಕ್ಷಕರು, 'ಭಯೋತ್ಪಾದನೆ'ಯ ಇನ್ನೊಂದು ಮುಖವಲ್ಲವೆ ?

ಸರಕಾರಿ, ಅನುದಾನಿತ ಹಾಗೂ ಖಾಸಗಿ ಶಿಕ್ಷಣ ಸಂಸ್ಥೆಗಳಲ್ಲಿ ಆತ್ಮಗೌರವ ಹಾಗೂ ಸ್ವಾಭಿಮಾನದಿಂದ ದುಡಿಯುವ ಶಿಕ್ಷಕರ ಸಂಖ್ಯೆ ಅತ್ಯಲ್ಪ. ಒಂದು ಬಗೆಯ ಗುಲಾಮಿ ಸಂಸ್ಕೃತಿ ಶಿಕ್ಷಣ ವ್ಯವಸ್ಥೆಯಲ್ಲಿ ಹುದುಗಿಕೊಂಡಿದೆ. ಸರಕಾರಿ ಶಿಕ್ಷಣ ಸಂಸ್ಥೆಗಳಲ್ಲಿ ಸಂಸ್ಥಾ ಮುಖ್ಯಸ್ಥರ ಮಾತುಗಳನ್ನು ಇತರ ಶಿಕ್ಷಕರು ಮೀರುವಂತಿಲ್ಲ; ಮೀರಿದರೆ ಅಶಿಸ್ತು, ಅವಿಧೇಯತೆ ಎಂಬ ನೆಪದಲ್ಲಿ ನೋಟೀಸು ಕೊಡಲಾಗುತ್ತದೆ. ಮುಖ್ಯಸ್ಥರೂ ಸೇರಿದಂತೆ ಎಲ್ಲ ಸಿಬ್ಬಂದಿಯವರೂ ಸಂಸ್ಥೆಯ ಆಡಳಿತ ಮಂಡಳಿಯಲ್ಲಿರುವ ಶಾಸಕರ ಮುಂದೆ ಡೊಗ್ಗು ಸಲಾಮು ಹೊಡೆಯಲೇಬೇಕು. ಸರಕಾರ ಬದಲಾದ ಹಾಗೆ ಬೇರೆಬೇರೆ ಶಾಸಕರುಗಳಿಗೆ ನಮಿಸಿ, ಕೊಂಡಾಡಿ, ಹಾಡಿ ಹೊಗಳಿ ಸಂಸ್ಥೆಗೆ ಬೇಕಾದುದನ್ನು ಪಡೆದುಕೊಳ್ಳಬೇಕು, ತಮಗೆ ಬೇಕಾದಲ್ಲಿಗೆ ವರ್ಗಾವಣೆ ಪಡೆದುಕೊಳ್ಳಬೇಕು; ತಮಗೆ ಬೇಡದವರನ್ನು ಮತ್ತೆಲ್ಲಿಗೋ ಎತ್ತಂಗಡಿ ಮಾಡಿಸಬೇಕು. ಹೀಗಾಗಿ ಸರಕಾರಿ ಸಂಸ್ಥೆಗಳಲ್ಲಿ ಬಹುಮಂದಿ 'ಜೀ ಹುಜೂರ್' ಎನ್ನುವವರು; ವಂದಿ ಮಾಗಧರು; ಸ್ತುತಿಪಾಠಕರು. ಸರಕಾರದ ಯಾವುದೇ ಧೋರಣೆಗಳ ಬಗ್ಗೆ ತುಟಿಪಿಟಕ್ಕೆನ್ನದವರು. ಟೀಕಿಸಿದರೆ ಶಿಕ್ಷೆ ಅನುಭವಿಸಬೇಕಾಗುತ್ತದೆ; ಯದ್ವಾತದ್ವಾ ಹೊಗಳಿದರೆ ವೈಯುಕ್ತಿಕ ಸ್ವಾರ್ಥಸಾಧನೆ ಸಾಧ್ಯ. ಆದುದರಿಂದ 'ಬದುಕುವ ಮಾರ್ಗ' ಉತ್ತಮವೆಂದು ಅದನ್ನೇ ಆಯ್ದುಕೊಳ್ಳುವವರು ಬಹುಮಂದಿ !

ಅನುದಾನಿತ ಶಿಕ್ಷಣ ಸಂಸ್ಥೆಗಳವರು ಸರಕಾರಿ ಶಿಕ್ಷಕರಿಗಿಂತ ಕೊಂಚ ಹೆಚ್ಚಿನ ಸ್ವಾತಂತ್ರ್ಯ ಅನುಭವಿಸುವವರು. ಸರಕಾರದ ಬಗ್ಗೆ ಇವರು ಟೀಕೆ ಟಿಪ್ಪಣಿಗಳನ್ನು ಮಾಡಿದರೂ ಸರಕಾರ ಅಥವಾ ಅಧಿಕಾರಿಗಳು ಇದನ್ನೆಲ್ಲ ಗಂಭೀರ ಪ್ರಕರಣವೆಂದು ಪರಿಗಣಿಸುವುದಿಲ್ಲ. ಆದರೆ ತಮ್ಮನ್ನು ನೇಮಕ ಮಾಡಿಕೊಂಡ ಆಡಳಿತ ಮಂಡಳಿಗೆ ಇವರು ತಲೆಬಾಗಬೇಕು. 'ಕಾಯುವ, ಕೊಲ್ಲುವ' ಅಧಿಕಾರ ಆಡಳಿತ ಮಂಡಳಿಗೆ ಇರುವುದರಿಂದ ಇವರೆಲ್ಲ ಆಡಳಿತ ಮಂಡಳಿಗಳ ಮುಂದೆ ಹಲ್ಲುಗಿಂಜುವವರೇ. ಮುಖ್ಯೋಪಾಧ್ಯಾಯರು ಹಾಗೂ ಪ್ರಾಂಶುಪಾಲರುಗಳಂತೂ ತಮ್ಮ ವ್ಯಕ್ತಿತ್ವವನ್ನು ಅಡವಿಟ್ಟು ಆಡಳಿತ ಮಂಡಳಿಯವರ ಅಭಿಪ್ರಾಯಗಳನ್ನೇ 'ಹಸಾದ'ವೆಂದು ಸ್ವೀಕರಿಸುವ ದುಃಸ್ಥಿತಿಯಿದೆ. ಇದರಿಂದಾಗಿ ಕೆಲವೊಂದು ಸಂಸ್ಥೆಗಳ ಮುಖ್ಯಸ್ಥರುಗಳ ಬಗ್ಗೆ ಅವರ ಸಹೋದ್ಯೋಗಿಗಳು ''ನಮ್ಮ ಪ್ರಿನ್ಸಿಪಾಲರು ಮ್ಯಾನೇಜ್‌ಮೆಂಟ್ ಹೇಗೆ ಹೇಳುತ್ತೋ ಹಾಗೆ; ಈಗ ಹಗಲೆಂದರೆ ಹೌದು ಹಗಲು; ಅಲ್ಲ, ರಾತ್ರಿ ಎಂದರೆ ಅಲ್ಲಲ್ಲ, ರಾತ್ರಿ ಎನ್ನುವವರು'' ಎಂದು ಲೇವಡಿ ಮಾಡುತ್ತಾರೆ. ಆದರೆ ಈ ಲೇವಡಿಗಾರರು ಮುಖ್ಯಸ್ಥರಾದಾಗ ಅವರು ಇದೇ ಬಲೆಗೆ ತಾವಾಗಿಯೇ ಬೀಳುತ್ತಾರೆ ! ಆದರೂ ಇದ್ದುದರಲ್ಲೇ ಆಡಳಿತ ಮಂಡಳಿಯ ತಾಳಕ್ಕೆ ತಕ್ಕಂತೆ ಕುಣಿಯದೆ, ತಮ್ಮದೇ ಆದ ಸ್ವತಂತ್ರ ನಿಲುವನ್ನು ತಳೆದು ವ್ಯವಹರಿಸುವ ಪ್ರಾಂಶುಪಾಲರುಗಳು, ಸಿಬ್ಬಂದಿ ವರ್ಗದವರು ಅಲ್ಲಲ್ಲಿ ಇದ್ದಾರೆ ಎಂಬುದು ಸಮಾಧಾನದ ಸಂಗತಿ.

ಅನುದಾನರಹಿತ ಖಾಸಗಿ ಶಿಕ್ಷಣ ಸಂಸ್ಥೆಗಳಲ್ಲಂತೂ ಸಂಪೂರ್ಣ ಗುಲಾಮಿ ಸಂಸ್ಕೃತಿ ಹರಡಿಕೊಂಡಿದೆ. ಪ್ರಜಾಪ್ರಭುತ್ವ, ಸಮಾನತೆ, ವ್ಯಕ್ತಿಗೌರವ ಇತ್ಯಾದಿಯಾದ ಯಾವ ಮೌಲ್ಯವನ್ನೂ ನೀವು ಇಂಥ ಶಿಕ್ಷಣ ಸಂಸ್ಥೆಗಳಲ್ಲಿ ಕಾಣಲು ಸಾಧ್ಯವಿಲ್ಲ. ಇಡೀ ಶಾಲೆಯ ಸಿಬ್ಬಂದಿವರ್ಗ ಆಡಳಿತ ಮಂಡಳಿಯ ಕಪಿಮುಷ್ಟಿಯಲ್ಲಿರುತ್ತದೆ. ಇವರೆಲ್ಲ ಆಡಳಿತ ಮಂಡಳಿ ಆಡಿಸುವ ಸೂತ್ರದ ಬೊಂಬೆಗಳು. ಏಳು ಎಂದರೆ ಏಳಬೇಕು; ಕೂತ್ಕೊ ಎಂದರೆ ಕುಳಿತುಕೊಳ್ಳಬೇಕು. ಅಂಥ ಗುಲಾಮತನ ಈ ಸಂಸ್ಥೆಗಳಲ್ಲಿದೆ. ಆಡಳಿತ ಮಂಡಳಿಯ ಕಾರ್ಯದರ್ಶಿ ಅಥವಾ ಅಧ್ಯಕ್ಷ ಅಥವಾ ಮತ್ಯಾರೋ ಪ್ರಭಾವಿ ವ್ಯಕ್ತಿ ಪ್ರತಿನಿತ್ಯ ಶಾಲೆಯಲ್ಲಿ ಹಾಜರು. ಶುಲ್ಕ ಸಂಗ್ರಹ, ಕಟ್ಟಡ ಕಾಮಗಾರಿ, ಶಿಕ್ಷಕರ ಮೇಲ್ವಿಚಾರಣೆ ಎಲ್ಲವೂ ಈ ಮಹಾಶಯನದ್ದೇ. ಮುಖ್ಯೋಪಾಧ್ಯಾಯರ ಕೊಠಡಿಯಲ್ಲಿ ಅವರ ಕುರ್ಚಿಯಲ್ಲಿ ಆಸೀನರಾಗುವ ಈ ಮಹಾಶಯನ ಮುಂದೆ ಮುಖ್ಯೋಪಾಧ್ಯಾಯರು ಕೈಕಟ್ಟಿ ನಿಲ್ಲಬೇಕು. ಯಾವ ಸ್ವಾತಂತ್ರ್ಯವೂ ಇಲ್ಲದೆ ಮುಖ್ಯೋಪಾಧ್ಯಾಯರು ಹಾಗೂ ಶಿಕ್ಷಕರು ಮೂಗುಬ್ಬಸಪಡುತ್ತ ಕಾರ್ಯ ನಿರ್ವಹಿಸಬೇಕು. ಕೊಡುವ ಸಂಬಳ ಹೇಳಿಕೊಳ್ಳುವಂಥದ್ದಲ್ಲ.

ಹೆಸರು ಇಂಗ್ಲಿಷ್ ಮೀಡಿಯಂ ! ಖಾಸಗಿ ಸಂಸ್ಥೆಗಳಲ್ಲಿ ಆಡಳಿತ ಮಂಡಳಿಯವರನ್ನು ತೃಪ್ತಿಪಡಿಸಿದರೇನೇ ತಮ್ಮ ವೇತನ ವೃದ್ಧಿ ಸಾಧ್ಯ ಎಂದು ಅರಿತ ಸಿಬ್ಬಂದಿವರ್ಗ ಚೆನ್ನಾಗಿ ನಾಟಕ ಮಾಡುವುದನ್ನು ಕಲಿಯುತ್ತಾರೆ. ವಿವಿಧ ಸಂದರ್ಭಗಳಲ್ಲಿ ಕೃತಕ ವಿಧೇಯತೆ ಪ್ರದರ್ಶಿಸುತ್ತ ಅವರನ್ನು ಹಾಡಿಹೊಗಳುತ್ತ ತಮ್ಮ ಹಾಗೂ ಮಕ್ಕಳ ಸಾಧನೆಯನ್ನು ಉತ್ಪ್ರೇಕ್ಷಿಸುತ್ತ, ಅವರ ಹಾದಿಯಲ್ಲಿ ಮಕ್ಕಳಿಂದ ಹೂವು ಚೆಲ್ಲಿಸುತ್ತಾ ...ಹೀಗೆ ಏನೇನೋ 'ಮಂಗವಿದ್ಯೆ' ಮಾಡುತ್ತಾರೆ, ''ಉದರ ನಿಮಿತ್ತಂ ಬಹುಕೃತ ವೇಷಃ'' ಎಂಬಂತೆ. ಸರಕಾರಿ ಶಿಕ್ಷಕ ಹುದ್ದೆ ಸಿಕ್ಕಿದೊಡನೆ ಕೆಲವರು ಬಂಧಮುಕ್ತವಾಗಿ ಹಾರಿಹೋಗುತ್ತಾರೆ; ಆ ಭಾಗ್ಯ ಇಲ್ಲದವರು ಕಟ್ಟುಪಾಡುಗಳೊಳಗೇ ನರಳುತ್ತಾ ನಡೆಯುತ್ತಾ ಕಾಲ ಸವೆಸುತ್ತಾರೆ.

ಮೌಲ್ಯಪ್ರಜ್ಞೆಯನ್ನು ಬೆಳೆಸಬೇಕಾದ ಶಿಕ್ಷಕರು ಗುಲಾಮಿ ಸಂಸ್ಕೃತಿಯ ಬಂಧನದಲ್ಲಿ ಸಿಲುಕಿದ್ದಾರೆ. ಕೆಲವರು ತಾವಾಗಿಯೇ ಮತ್ತೆ ಕೆಲವರು ಅನಿವಾರ್ಯವಾಗಿ ಪಂಜರಗಳಲ್ಲಿ ಸಿಲುಕಿಕೊಂಡಿದ್ದಾರೆ. ಹೀಗಿರುವಾಗ ಶಿಕ್ಷಕ ಬದಲಾವಣೆಯ ಹರಿಕಾರ, ಯುಗ ಪ್ರವರ್ತಕ ಎಂಬುದು ಬರೀ ಆದರ್ಶವಾಗಿ ಗೋಚರಿಸುತ್ತದೆ. ತಾನೇ ಸರಿಯಾಗಿ ಉರಿಯದ, ಉರಿಯಲಾಗದ ಸೊಡರು ಬೇರೆ ಸೊಡರುಗಳನ್ನು ಬೆಳಗಿಸುವುದು ಹೇಗೆ ?

**ಡಾ|| ಮಹಾಬಲೇಶ್ವರ ರಾವ್**

ಪ್ರಾಚಾರ್ಯರು, ಡಾ|| ಟಿ. ಎಂ. ಎ. ಪೈ ಶಿಕ್ಷಣ ಕಾಲೇಜು, ಉಡುಪಿ - ೫೭೬ ೧೦೧



ನಮ್ಮ ಮಕ್ಕಳಗಾಗಿ ಉತ್ತಮ ಪಠ್ಯಪುಸ್ತಕಗಳನ್ನು ತಯಾರಿಸುವ ಚಾರಿತ್ರಿಕ ಜವಾಬ್ದಾರಿ ನಮ್ಮದಾಗಿದೆ. ನಮ್ಮ ಮಕ್ಕಳ ಭವಿಷ್ಯ ನಿಂತಿರುವುದು ಸಾಂಸ್ಕೃತಿಕ ವೈವಿಧ್ಯತೆಗೆ ಗೌರವ ತೋರಿಸುವಲ್ಲ, ಈ ದೇಶದಲ್ಲಿರುವ ವಿವಿಧ ಸಾಮಾಜಿಕ, ಆರ್ಥಿಕ ಮತ್ತು ಭಾಷಿಕ ಗುಂಪುಗಳು ರಾಷ್ಟ್ರದ ಬಳುವಳಿಯನ್ನು ಸಮಾನವಾಗಿ ಹಂಚಿಕೊಳ್ಳುವವರೆಂಬುದನ್ನು ಗುರುತಿಸಿ ಅದಕ್ಕೆ ಬದ್ಧರಾಗುವಲ್ಲ. ನಮ್ಮ ಪಠ್ಯಪುಸ್ತಕಗಳು ಈ ಬಹುಮುಖ್ಯ ಅಂಶವನ್ನು ಮತ್ತೊಮ್ಮೆ ಖಡಾಖಂಡಿತವಾಗಿ ದೃಢೀಕರಿಸಬೇಕು. ಭಾರತೀಯ ಸಮಾಜದ ಸಮ್ಮಿಳಿತ ಮತ್ತು ಬಹುತ್ವ ಸಂಸ್ಕೃತಿಯ ಸ್ವಭಾವವನ್ನು ಬಹಳ ದೃಢವಾಗಿ, ಶಕ್ತಿಯುತವಾಗಿ ಒತ್ತಿ ಹೇಳಬೇಕು.

**ಸುರೇಶ್ ಭಟ್ ಬಾಕ್ರಬೈಲ್**

# ಪ್ರಸಕ್ತ ಶಿಕ್ಷಣ ನೀತಿಯ ಹುಳುಕುಗಳು ಮತ್ತು ಭಾರತದ ಯುವಪೀಳಿಗೆ

೧೯೯೮ನೇ ಇಸವಿಯಲ್ಲಿ ಕೇಂದ್ರದಲ್ಲಿ ಅಧಿಕಾರಕ್ಕೆ ಬಂದ ಎನ್‌ಡಿಎ ಸರಕಾರ ತತ್‌ಕ್ಷಣದಿಂದಲೆ ದೇಶದ ಶಿಕ್ಷಣ ನೀತಿಯನ್ನು ಬದಲಾಯಿಸಲು ಮುಂದಾಯಿತು. ಸಂಸತ್ತು ಹಾಗೂ ಕೇಂದ್ರ ಶಿಕ್ಷಣ ಸಲಹಾ ಮಂಡಳಿ(ಸಿಎಬಿಇ)ಗಳನ್ನು ಅಲಕ್ಷಿಸಿ ನಡೆಸಿದ ಈ ಪ್ರಯತ್ನಗಳಿಗೆ ಸ್ವಲ್ಪ ಮಟ್ಟಿನ ಯಶಸ್ಸು ದೊರೆತಿದೆ ಕೂಡ. ಉದಾಹರಣೆಗೆ, ಗುಜರಾತ್ ರಾಜ್ಯದ ಸಮಾಜ ಅಧ್ಯಯನ ಪಠ್ಯಪುಸ್ತಕಗಳಲ್ಲಿ ಅಲ್ಪಸಂಖ್ಯಾತರ ಬಗೆಗಿನ ಹೀನಾಯಕರ ಅಂಶಗಳು ಇಂದಿಗೂ ಉಳಿದುಕೊಂಡಿವೆ. ಮಾಜಿ ಕೇಂದ್ರ ಗೃಹಸಚಿವ ಎಸ್. ಬಿ. ಚವಾಣ್ ನೇತೃತ್ವದ ಸಂಸತ್ತಿನ ವಿಶೇಷ ತನಿಖಾ ಸಮಿತಿಯೊಂದು ಈ ಆಕ್ಷೇಪಣೀಯ ಅಂಶಗಳನ್ನು ಕಿತ್ತುಹಾಕಬೇಕೆಂದು ಆದೇಶಿಸಿದ್ದರೂ ಅದು ಗೋರ್ಕಲ್ಲ ಮೇಲೆ ಸುರಿದ ನೀರಿನಂತಾಗಿದೆ.

ಇಂದು ಹೆಚ್ಚುಕಮ್ಮಿ ಪ್ರತಿಯೊಂದು ರಾಜ್ಯದಲ್ಲೂ ಪಠ್ಯಕ್ರಮ, ಪಠ್ಯಪುಸ್ತಕಗಳ ತಯಾರಿಗಾಗಿ ಪ್ರತ್ಯೇಕ ಅಧಿಕೃತ ಸಂಸ್ಥೆಗಳಿವೆ. ಹೀಗಿದ್ದರೂ ಪಠ್ಯವಸ್ತುಗಳನ್ನು ಆಯ್ದುಕೊಳ್ಳುವಾಗ ಕೇವಲ ಸ್ವರೂಪವನ್ನಷ್ಟೆ ನೋಡಲಾಗುತ್ತಿದೆಯೇ ಹೊರತು ಹೂರಣ ಅಥವಾ ವಸ್ತು ತಾತ್ಪರ್ಯಕ್ಕೆ ನೀಡಲಾಗುತ್ತಿರುವ ಗಮನ ತೀರಾ ಅತ್ಯಲ್ಪ. ಹೀಗಾಗಿ ಕೆಲವು ಪಠ್ಯಪುಸ್ತಕಗಳಲ್ಲಿ ಪೂರ್ವಗ್ರಹಗಳನ್ನೂ ಸಾಂವಿಧಾನಿಕ ಚೌಕಟ್ಟಿನ ಹೊರಗಿರುವ ವಿಷಯಗಳನ್ನೂ ಕಾಣಬಹುದಾಗಿದೆ. ಸಾಮಾಜಿಕ ಮತ್ತು ಧಾರ್ಮಿಕ ಸಂಸ್ಥೆಗಳಿಂದ ನಡೆಸಲ್ಪಡುವ ದೊಡ್ಡ ಸಂಖ್ಯೆಯ ಶಾಲೆಗಳಲ್ಲಿ ಮಕ್ಕಳನ್ನು ದೇಶದ ಸಾಂವಿಧಾನಿಕ ಮತ್ತು ಪ್ರಜಾಸತ್ತಾತ್ಮಕ ಮೌಲ್ಯಗಳ ದಿಕ್ಕಿನತ್ತ ಒಯ್ಯುವ ಬದಲಾಗಿ ಕೋಮುವಾದಿ ಯೋಚನೆಗಳ ದಿಕ್ಕಿನಲ್ಲಿ ಸಮಾಜೀಕರಿಸಲಾಗುತ್ತಿದೆ. ಸ್ವಾತಂತ್ರ್ಯದ ಆರಂಭದ ದಿನಗಳಲ್ಲಿ ಕ್ರಿಶ್ಚಿಯನ್ ವಿದ್ಯಾಸಂಸ್ಥೆಗಳು ಖಾಸಗಿ ಶಿಕ್ಷಣ ಕ್ಷೇತ್ರದ ಮುಂಚೂಣಿಯಲ್ಲಿದ್ದವಾದರೂ ಇಂದು ಅತ್ಯಂತ ಬಲಶಾಲಿ ಹಾಗೂ ಅತ್ಯಂತ ಹೆಚ್ಚು ಅನುದಾನ (ವಿದೇಶೀ ಹಣ) ಪಡೆಯುತ್ತಿರುವ ಖಾಸಗಿ ವಿದ್ಯಾಸಂಸ್ಥೆಗಳೆಂದರೆ ಸಂಘಪರಿವಾರದ ಅಂಗಸಂಸ್ಥೆಗಳು ನಡೆಸುತ್ತಿರುವ ಶಾಲೆಗಳು. ಸಂಘಪರಿವಾರದ ಈ ಶಾಲೆಗಳು ಸರಕಾರದ ನಿಯಂತ್ರಣದಲ್ಲಿ ಇಲ್ಲದಿರುವುದು ಒಂದೆಡೆಯಾದರೆ, ಇನ್ನೊಂದೆಡೆ ಅಧಿಕೃತ ಸರಕಾರಿ ಪಠ್ಯಪುಸ್ತಕಗಳ ಬದಲಿಗೆ ಸಂವಿಧಾನ ವಿರೋಧಿ ವಿಷಯಗಳಿಂದ ಕೂಡಿದ ಪಠ್ಯಪುಸ್ತಕಗಳನ್ನು ಬಳಸುತ್ತಿರುವುದು ಅತ್ಯಂತ ಅಪಾಯಕಾರಿ ಹಾಗೂ ಗಂಭೀರ ಬೆಳವಣಿಗೆಯಾಗಿದೆ.

ಪಠ್ಯವಸ್ತುಗಳ ಆಯ್ಕೆ ಮತ್ತು ನಿರ್ದೇಶನಗಳಿಗಾಗಿ ಸ್ವತಂತ್ರ, ಸ್ವಾಯತ್ತ ನಿಯಂತ್ರಣ ವ್ಯವಸ್ಥೆಯೊಂದರ ತುರ್ತು ಆವಶ್ಯಕತೆಯಿದೆ. ಇತ್ತೀಚಿನ ಎರಡು ವಿದ್ಯಮಾನಗಳು ಇದಕ್ಕೆ ಇನ್ನಷ್ಟು ಪುಷ್ಟಿ ನೀಡುತ್ತವೆ. ಮೊದಲನೆಯದಾಗಿ, 'ಶೈಕ್ಷಣಿಕ ಸಂಶೋಧನೆ ಮತ್ತು ತರಬೇತಿಯ ರಾಷ್ಟ್ರೀಯ ಮಂಡಳಿ' (ಎನ್‌ಸಿಇಆರ್‌ಟಿ) ೨೦೦೦ನೆ ಇಸವಿಯಲ್ಲಿ ಮಾಡಿದ 'ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು' (ಎನ್‌ಸಿಎಫ್-೨೦೦೦) ಹಾಗೂ ತತ್ಪರಿಣಾಮವಾಗಿ ಶಿಕ್ಷಣನೀತಿಯಲ್ಲಾದ ವಿಸ್ತೃತ ಬದಲಾವಣೆ ಮತ್ತು ರಾಷ್ಟ್ರೀಯ ಶಿಕ್ಷಣ ಕಾರ್ಯಕ್ರಮವೊಂದನ್ನು ಸಿದ್ಧಪಡಿಸುವ ಪ್ರಕ್ರಿಯೆಗೆ ಸಂಬಂಧಿಸಿದಂತೆ ಭುಗಿಲೆದ್ದ ವಿವಾದ. ಎರಡನೆಯದಾಗಿ, ಎನ್‌ಸಿಎಫ್-೨೦೦೦ನ್ನು ಅಳವಡಿಸುವ ಸಂದರ್ಭದಲ್ಲಿ ದೇಶದ ಶಿಕ್ಷಣನೀತಿಯ ಅತ್ಯುಚ್ಚ ಸಲಹಾ ಸಂಸ್ಥೆಯಾದ ಸಿಎಬಿಇಯ ಅನುಮತಿಯನ್ನು ಪಡೆದುಕೊಂಡಿರಲಿಲ್ಲ.

ಎನ್‌ಸಿಎಫ್-೨೦೦೦ನ್ನು ಮರುಪರಿಶೀಲನೆಗೊಳಪಡಿಸುವಂತೆ ಎನ್‌ಸಿಇಆರ್‌ಟಿಗೆ ಆದೇಶಿಸಲಾಗಿದೆ. ಆದರೆ ಕೇಂದ್ರ ಮಾಧ್ಯಮಿಕ ಶಿಕ್ಷಣ ಮಂಡಳಿ (ಸಿಬಿಎಸ್‌ಇ)ಯ ವ್ಯಾಪ್ತಿಯ ಹೊರಗಿರುವ, ರಾಜ್ಯ ಸರಕಾರಗಳಿಂದ ನಡೆಸಲ್ಪಡುವ ಮತ್ತು ಸರಕಾರೇತರ ಶಾಲೆಗಳ ಪಠ್ಯಪುಸ್ತಕ ಹಾಗೂ ಪೂರಕ ವಸ್ತುಗಳ ಬೃಹತ್ ಸಮಸ್ಯೆಗೆ ಇದರಿಂದ ಉತ್ತರ ಸಿಗಲಾರದು. ಏಕೆಂದರೆ ದೇಶಾದ್ಯಂತ ಎನ್‌ಸಿಇಆರ್‌ಟಿ ಪಠ್ಯಪುಸ್ತಕಗಳನ್ನು ಕೇವಲ ಸಿಬಿಎಸ್‌ಇ ಶಾಲೆಗಳಲ್ಲಿ ಬಳಸಲಾಗುತ್ತಿದೆ. ಆದರೆ ಭಾರತದಲ್ಲಿರುವ ಸುಮಾರು ೧.೨೫,೦೦೦ ಮಾಧ್ಯಮಿಕ ಮತ್ತು ಮೇಲ್ ಮಾಧ್ಯಮಿಕ ಶಾಲೆಗಳ ಪೈಕಿ ಸಿಬಿಎಸ್‌ಇ ಶಾಲೆಗಳ ಸಂಖ್ಯೆ ಬರೀ ೬೨೦೦. ಹೀಗಾಗಿ ಎನ್‌ಸಿಇಆರ್‌ಟಿ ಪಠ್ಯಪುಸ್ತಕಗಳನ್ನು ಬದಲಾಯಿಸುವ ಆವಶ್ಯಕತೆ ಇರಬಹುದಾದರೂ ಕೇವಲ ಅಷ್ಟು ಮಾಡುವುದರಿಂದ ಸಮಸ್ಯೆ ಅಂತ್ಯವಾಗದು.

ಶಿಕ್ಷಣದ ಮುಖಾಂತರ ಸಮಾನತೆಯನ್ನು ತರಬೇಕೆಂದು ಸ್ವತಂತ್ರ ಭಾರತದ ಎಲ್ಲಾ ಕಾರ್ಯನೀತಿಗಳಲ್ಲೂ ಸ್ಪಷ್ಟವಾಗಿ ಹೇಳಲಾಗಿದೆ. ಪ್ರಜಾಸತ್ತಾತ್ಮಕ ಸಮಾಜದಲ್ಲಿ ಸಮಾನತೆಯನ್ನು ಬೆಳೆಸುವ ಅತ್ಯಂತ ಪ್ರಮುಖ ವಿಧಾನವೆಂದರೆ ಸರ್ವರಿಗೂ ಉತ್ತಮ, ವಿಮರ್ಶಾತ್ಮಕ ಶಿಕ್ಷಣವನ್ನು ಒದಗಿಸುವುದು. ವಿಮರ್ಶಾತ್ಮಕ ದೃಷ್ಟಿಕೋನ ಮತ್ತು ವಿವೇಚನಾ ಶಕ್ತಿಗಳನ್ನು ಬೆಳೆಸುವುದಕ್ಕೆ ಒತ್ತು ನೀಡುವ ಶಿಕ್ಷಣ ಸ್ವಾಭಾವಿಕವಾಗಿ ಸೆಕ್ಯೂಲರ್ ಆಗಿರುತ್ತದೆ. ಆದರೆ ಇದುವರೆಗೂ ಇದನ್ನು ಸರಿಯಾಗಿ ಕಾರ್ಯರೂಪಕ್ಕೆ ಇಳಿಸಲಾಗಿಲ್ಲ. ೧೯೮೬/೯೨ರ ರಾಷ್ಟ್ರೀಯ ಶಿಕ್ಷಣ ನೀತಿಯಲ್ಲಿ ಹೇಳಲಾಗಿರುವ ಸಾಂಸ್ಕೃತಿಕ ಮತ್ತು ಮೌಲ್ಯಾಧಾರಿತ ಶಿಕ್ಷಣವನ್ನು ಸಾರ್ವತ್ರಿಕವಾಗಿ ಜಾರಿಗೆ ತರಬೇಕಿದೆ. ಸಮಾನತೆ, ಸೋದರತೆ, ನ್ಯಾಯ ಮತ್ತು

ಸ್ವಾತಂತ್ರ್ಯದ ಸಾಂವಿಧಾನಿಕ ಮೌಲ್ಯಗಳನ್ನು ಎಲ್ಲಾ ಪಠ್ಯಪುಸ್ತಕಗಳಲ್ಲಿ ಅಳವಡಿಸುವಂತೆ ನೋಡಿಕೊಳ್ಳಬೇಕಿದೆ. ಪಠ್ಯಕ್ರಮ ಮತ್ತು ಪಠ್ಯಪುಸ್ತಕಗಳಲ್ಲಿ ಭಾರತದ ಸಾಮಾನ್ಯ ಸಾಂಸ್ಕೃತಿಕ ಪರಂಪರೆ, ಸಮಾನತಾವಾದ, ಪ್ರಜಾತಂತ್ರ, ಜಾತ್ಯತೀತತೆ, ಲಿಂಗ ಸಮಾನತೆ, ಪರಿಸರ ಸಂರಕ್ಷಣೆ, ಸಾಮಾಜಿಕ ಅಡೆತಡೆಗಳ ನಿರ್ಮೂಲನ, ಸಣ್ಣ ಕುಟುಂಬ ನಿಯಮ ಮತ್ತು ವೈಜ್ಞಾನಿಕ ಮನೋಭಾವವನ್ನು ಬೆಳೆಸುವ ಮೌಲ್ಯಗಳನ್ನು ಅಳವಡಿಸಬೇಕಾಗಿದೆ.

ಎಲ್ಲಾ ಶಿಕ್ಷಣಸಂಸ್ಥೆಗಳು ನೀಡುವ ವಿದ್ಯಾಭ್ಯಾಸ ಮುಕ್ತ ವಿಚಾರ ಮತ್ತು ಚಿಂತನೆಗಳನ್ನು ಪ್ರೋತ್ಸಾಹಿಸುವುದಕ್ಕೆ ಬದ್ಧತೆಯುಳ್ಳದ್ದಾಗಿರಬೇಕು. ಇದಕ್ಕೋಸ್ಕರ ಪಠ್ಯಪುಸಕಗಳು ಮುಕ್ತವಾಗಿರಬೇಕು ಮತ್ತು ಮಕ್ಕಳಲ್ಲಿ ವಿಚಾರ, ಭಿನ್ನಮತ ಮತ್ತು ಚರ್ಚೆಗಳ ಸೃಜನಾತ್ಮಕ ಪ್ರಕ್ರಿಯೆಗಳನ್ನು ಪ್ರೋತ್ಸಾಹಿಸುವಂತಿರಬೇಕು. ಪಠ್ಯಪುಸ್ತಕಗಳ ಮೂಲಕ ಮಕ್ಕಳು ಸಮಾನ ನಾಗರಿಕತೆ ಹಾಗೂ ವೈವಿಧ್ಯತೆಗೆ ಗೌರವ ನೀಡುವ ಆದರ್ಶ ಮತ್ತು ಮೌಲ್ಯಗಳನ್ನು ಗ್ರಹಿಸಿಕೊಳ್ಳ ಬಹುದಲ್ಲದೆ ರಾಷ್ಟ್ರೀಯ ಅಸ್ಮಿತೆಯನ್ನು, ಸಂಸ್ಕೃತಿಯನ್ನು ಮತ್ತು ವೈಜ್ಞಾನಿಕ ಮನೋಭಾವವನ್ನು ಬೆಳೆಸಿಕೊಳ್ಳಬಹುದಾಗಿದೆ. ಇಂತಹ ಒಂದು ಪ್ರಕ್ರಿಯೆ ಕೆಲವು ವರ್ಷಗಳಿಂದ ನಡೆಯುತ್ತಿತ್ತು. ಆದರೆ ಎನ್‌ಸಿಎಫ್-೨೦೦೦ದ ಮೂಲಕ ಪಠ್ಯಕ್ರಮ ಮತ್ತು ಪಠ್ಯಪುಸ್ತಕಗಳನ್ನು ಬದಲಾಯಿಸುವ ಯತ್ನಗಳು ಈ ಪ್ರಕ್ರಿಯೆಗೆ ದೊಡ್ಡ ಹಿನ್ನಡೆ ಉಂಟುಮಾಡಿವೆ. ಇವು ಅಲ್ಪಸಂಖ್ಯಾತರು, ಆದಿವಾಸಿಗಳು, ದಲಿತರು ಮತ್ತು ಮಹಿಳೆಯರ ವಿಷಯಗಳಲ್ಲಿ ಈಗಿರುವ ಅಸಮಾನತೆಗಳನ್ನು ಇನ್ನಷ್ಟು ಗಟ್ಟಿಗೊಳಿಸಿ ಅವನ್ನು ಮುಂದುವರಿಸಿಕೊಂಡು ಹೋಗುತ್ತಿವೆ. ಕೆಲವು ರಾಜಕೀಯ ಪಕ್ಷಗಳ ಮತ್ತು ನಿರ್ದಿಷ್ಟ ಸಂಸ್ಥೆಗಳ ಸಿದ್ಧಾಂತಗಳಿಗನು ಗುಣವಾದ ಸಂಕುಚಿತ ರಾಜಕೀಯ ಉದ್ದೇಶಗಳಿಗಾಗಿ ಶಿಕ್ಷಣವನ್ನು ಬಳಸಿಕೊಳ್ಳುವ ಇಂತಹ ಪ್ರಯತ್ನಗಳಿಗೆ ಪೋಷಕರು ಸಮ್ಮತಿಸಿಲ್ಲ. ಮಾತ್ರವಲ್ಲ, ಇದು ಶಿಕ್ಷಣತಜ್ಞರು ಹಾಗೂ ವಿದ್ವಾಂಸರ ನಡುವಿನಲ್ಲೂ ದಿಗಿಲು, ದಿಗ್ಭ್ರಾಂತಿ ಮೂಡಿಸಿದೆ. ಮತ್ತೊಂದು ಮುಖ್ಯ ವಿಷಯ ವೆಂದರೆ ಕೆಲವು ರಾಜ್ಯಗಳು ಈ ಪ್ರವೃತ್ತಿಯನ್ನು ಬಹಳ ಹಿಂದಿನಿಂದಲೂ ಆರಂಭಿಸಿದ್ದವು. ಎನ್‌ಸಿಎಫ್-೨೦೦೦ದ ನಂತರ ಚರಿತ್ರೆಯ ಕೋಮುವಾದೀಕರಣವಷ್ಟೆ ಅಲ್ಲ, ಮಹಿಳೆಯರ ಸ್ಥಾನಮಾನ, ವರ್ಗ, ಜಾತಿ, ಪರಿಸರ ಇತ್ಯಾದಿ ವಿಷಯಗಳಲ್ಲಿ ಕೂಡ ಪ್ರತಿಗಾಮಿ ಅಂಶಗಳನ್ನೊಳಗೊಂಡ ಈ ಪ್ರವೃತ್ತಿಗೆ ಮತ್ತಷ್ಟು ಬಲ ಬಂದಿದೆ ಮಾತ್ರವಲ್ಲ, ಒಂದು ರೀತಿಯ ನ್ಯಾಯಸಮ್ಮತತೆಯೂ ಸಿಕ್ಕಿದೆ.

೨೦೦೪ರಲ್ಲಿ ಪರಿಷ್ಕೃತಗೊಂಡ 'ಕೇಂದ್ರ ಶಿಕ್ಷಣ ಸಲಹಾ ಮಂಡಳಿ' ಪಠ್ಯಪುಸ್ತಕಗಳ ಕಸಿವ ಹಾಗೂ ವಿಶ್ಲೇಷಣೆ ನಡೆಸುವುದಕ್ಕಾಗಿ ಒಂದು ಸಮಿತಿಯನ್ನು ನೇಮಿಸಿತು. ಸಮಿತಿ ೨೦೦೫ರಲ್ಲಿ ತಯಾರಿಸಿದ ಅಂತಿಮ ವರದಿಯಲ್ಲಿ ಹಲವಾರು ಉತ್ತಮ ಶಿಫಾರಸುಗಳಿವೆ. ಖಾಸಗಿ ವಿದ್ಯಾಸಂಸ್ಥೆಗಳೂ ಸೇರಿದಂತೆ ದೇಶಾದ್ಯಂತ ಎಲ್ಲಾ ವಿದ್ಯಾಸಂಸ್ಥೆಗಳಲ್ಲಿ ಬಳಸಲಾಗುವ ಪಠ್ಯಪುಸ್ತಕಗಳಲ್ಲಿ ಸೇರಿಕೊಳ್ಳುವ ಅಪಾಯಕಾರಿ ಅಂಶಗಳನ್ನು ತಡೆಗಟ್ಟಿ ಸ್ತರಗಳ ಶಿಕ್ಷಣ ಗುಣಮಟ್ಟವನ್ನು ಕಾಪಾಡಿಕೊಳ್ಳುವ ಸಲುವಾಗಿ 'ರಾಷ್ಟ್ರೀಯ ಪಠ್ಯಪುಸ್ತಕ ಮಂಡಳಿ' ಎಂಬ ಸ್ಥಾಯಿ ಸ್ವತಂತ್ರ ಹಾಗೂ ಸ್ವಾಯತ್ತ ಮಂಡಳಿಯೊಂದನ್ನು




ರಚಿಸಬೇಕೆನ್ನುವುದು ಇವುಗಳಲ್ಲೊಂದು ಬಹುಮುಖ್ಯ ಶಿಫಾರಸು.

**ಭಾರತದ ಸರಕಾರೇತರ ಶಾಲೆಗಳು**

ಭಾರತದಲ್ಲಿ ವಿವಿಧ ರೀತಿಯ ರಾಜ್ಯಮಟ್ಟದ, ರಾಷ್ಟ್ರ ಮಟ್ಟದ ಖಾಸಗಿ, ಧಾರ್ಮಿಕ, ಸಾಮಾಜಿಕ ಸಂಸ್ಥೆಗಳು ಶಿಕ್ಷಣಸಂಸ್ಥೆಗಳನ್ನು ನಡೆಸುತ್ತಿವೆ. ಅನುದಾನರಹಿತ ಶಿಕ್ಷಣಸಂಸ್ಥೆಗಳನ್ನೂ ಕಾಣಬಹುದು. ಕ್ರೈಸ್ತಧರ್ಮದ ವಿವಿಧ ಪಂಥಗಳು ತಮ್ಮದೇ ಪ್ರತ್ಯೇಕ ಶಾಲೆಗಳನ್ನು ಹೊಂದಿವೆ. ವಿವಿಧ ಮುಸ್ಲಿಂ ಮಂಡಳಿಗಳು/ಗುಂಪುಗಳು ವಿವಿಧ ಮದ್ರಸಾಗಳನ್ನು ನಡೆಸುತ್ತಿವೆ. ಆರೆಸ್ಸೆಸ್‌ನ ವಿದ್ಯಾಭಾರತಿ ಸಂಸ್ಥೆ ನಡೆಸುವ ಸರಸ್ವತಿ ಶಿಶುಮಂದಿರಗಳಿವೆ. ಪಠ್ಯಪುಸ್ತಕಗಳ ಆಯ್ಕೆಯ ವಿಷಯದಲ್ಲಿ ಇವುಗಳಿಗೆಲ್ಲಾ ಒಂದೇ ಸಮಾನ ನೀತಿಯೆಂಬುದೇ ಇಲ್ಲ. ಕೆಲವು ಶಾಲೆಗಳು ಸರಕಾರದಿಂದ ಅನುಮೋದಿತ ಪುಸ್ತಕಗಳನ್ನು ಆರಿಸುತ್ತವಾದರೆ, ಕೆಲವು ಶಾಲೆಗಳಲ್ಲಿ ಇತರ ಖಾಸಗಿ ಸಂಸ್ಥೆಗಳು ಪ್ರಕಟಿಸಿದ, ಸರಕಾರದ ಅನುಮೋದನೆ ಇಲ್ಲದ ಪಠ್ಯಪುಸ್ತಕ, ಗೈಡ್ ಮತ್ತು ವರ್ಕ್‌ಬುಕ್‌ಗಳನ್ನು ಬಳಸಲಾಗುತ್ತಿದೆ. ಸರಸ್ವತಿ ಶಿಶು ಮಂದಿರ, ದಾರುಲ್ ಉಲೂಮ್ ದಿಯೊಬಂದ್, ನದವತುಲ್ ಉಲಾಮ ಮುಂತಾದವುಗಳು ತಮ್ಮದೇ ಪಠ್ಯಪುಸ್ತಕಗಳನ್ನು ಪ್ರಕಟಿಸುತ್ತವೆ. ಆಂಗ್ಲೊ-ಇಂಡಿಯನ್ ಶಾಲೆಗಳ ಮಂಡಳಿ ಪಠ್ಯಕ್ರಮವನ್ನು ಮಾತ್ರ ವಿಧಿಸಿ ಪಠ್ಯಪುಸ್ತಕಗಳ ಆಯ್ಕೆಯನ್ನು ಆಯಾ ಶಾಲೆಗಳಿಗೆ ಬಿಟ್ಟುಕೊಟ್ಟಿದೆ. ಒಟ್ಟಾರೆಯಾಗಿ ಸರಕಾರೇತರ ಶಾಲೆಗಳಲ್ಲಿ ಉಪಯೋಗಿಸಲಾಗುವ ಪಠ್ಯಪುಸ್ತಕ ಮತ್ತಿತರ ಓದಿನ ಸಾಮಗ್ರಿಗಳಿಗೆ ಹೆಚ್ಚುಕಮ್ಮಿ ಯಾವುದೇ ನಿಯಂತ್ರಣ ಅಥವಾ ನಿಯಂತ್ರಣ ವ್ಯವಸ್ಥೆ ಇಲ್ಲವೆಂದೇ ಹೇಳಬಹುದು.

**ಸಿಬಿಎಸ್‌ಇ ಪಠ್ಯಕ್ರಮ ಬಳಸದ ಸರಕಾರಿ ಶಾಲೆಗಳು**

ಪಠ್ಯಪುಸ್ತಕ ನಿಯಂತ್ರಣಕ್ಕಾಗಿ ಹೆಚ್ಚುಕಮ್ಮಿ ಪ್ರತಿಯೊಂದು ರಾಜ್ಯದಲ್ಲೂ ಸರಕಾರಿ ಶಿಕ್ಷಣ ಮಂಡಳಿಯನ್ನು ಸ್ಥಾಪಿಸಲಾಗಿದೆ. ಕರ್ನಾಟಕದ ಶಾಲೆಗಳ ಕುರಿತಂತೆ ಸಮಿತಿಯ ವರದಿ ಏನು ಹೇಳುತ್ತದೆಂದು ನೋಡೋಣ. ಕರ್ನಾಟಕದಲ್ಲಿ ೧ರಿಂದ ೧೦ನೇ ತರಗತಿಯ ಎಲ್ಲಾ ಪಠ್ಯಪುಸ್ತಕಗಳನ್ನು 'ರಾಜ್ಯ ಶೈಕ್ಷಣಿ ಸಂಶೋಧನೆ ಮತ್ತು ತರಬೇತಿ ಇಲಾಖೆ (ಡಿಎಸ್‌ಇಆರ್‌ಟಿ) ತಯಾರಿಸುತ್ತದೆ. ಪ್ರತಿ ವಿಷಯ ತರಗತಿಗೆ ಒಂದರಂತೆ ತಜ್ಞರು ಮತ್ತು ಶಿಕ್ಷಕರಿಂದ ಕೂಡಿದ ಪ್ರತ್ಯೇಕ ಪಠ್ಯಪುಸ್ತಕ ಸಮಿತಿಗಳನ್ನು ರಚಿಸಲಾಗಿದೆ. ಇವು ತಯಾರಿಸಿದ ಮೂಲಪ್ರತಿಗಳನ್ನು ಇನ್ನೊಂದು ಸಮಿತಿಯ ಮೂಲಕ ಪರಿಶೀಲಿಸಿದ ನಂತರ ರಾಜ್ಯದ ಕೆಲವು ಆಯ್ದ ಸ್ಥಳಗಳಲ್ಲಿ ಒಂದು ವರ್ಷದ ಅವಧಿಗೆ ಬಿಡುಗಡೆಗೊಳಿಸಲಾಗುತ್ತದೆ. ಇದಕ್ಕೆ ಬರುವ ಪ್ರತಿಕ್ರಿಯೆಗಳನ್ನು ಆಧರಿಸಿ ಪಠ್ಯಪುಸ್ತಕವನ್ನು ಪರಿಷ್ಕರಿಸಿದ ತರುವಾಯ ಇಡೀ ರಾಜ್ಯದಲ್ಲಿ ಬಿಡುಗಡೆಗೊಳಿಸಲಾಗುತ್ತದೆ. ಎನ್‌ಸಿಎಫ್-೨೦೦೦ವನ್ನು ಅನುಸರಿಸಿ ರಾಜ್ಯದ ಪಠ್ಯಪುಸ್ತಕಗಳನ್ನು ೨೦೦೨ರಲ್ಲಿ ಬದಲಾಯಿಸಲಾಗಿತ್ತು. ಇದರ ನಂತರ ಸಮಾಜ ವಿಜ್ಞಾನ ಮತ್ತು ಚರಿತ್ರೆಯ ಪಠ್ಯಪುಸ್ತಕಗಳಲ್ಲಿ ಹಲವಾರು ಅನಪೇಕ್ಷಣೀಯ ಕೋಮುವಾದಿ ನಿಲುವುಗಳು ಕಂಡುಬಂದಾಗ ಸಾರ್ವಜನಿಕರು ರೊಚ್ಚಿಗೆದ್ದಿದ್ದರು. ೨೦೦೨ರಲ್ಲಿ ಡಿಎಸ್‌ಇಆರ್‌ಟಿ ಪಠ್ಯಪುಸ್ತಕಗಳ ಬಗ್ಗೆ ಜೇನ್ ಸಾಹಿ ಮತ್ತು ಇಂದಿರಾ ವಿಜಯಸಿಂಹ ಜಂಟಿಯಾಗಿ ತಯಾರಿಸಿದ ''ಕರ್ನಾಟಕದ ಶಾಲಾ ಪಠ್ಯಪುಸ್ತಕಗಳಲ್ಲಿ ಕೋಮುವಾದಿ ಪಕ್ಷಪಾತಗಳು'' ಎಂಬ ವರದಿ ಹಿಂದಿನ ಪಠ್ಯಪುಸ್ತಕಗಳಲ್ಲಿದ್ದ ಉತ್ತಮ ಅಂಶಗಳನ್ನು ಸಂಪೂರ್ಣವಾಗಿ ಕೈಬಿಟ್ಟ ಕುರಿತು ಹೇಳುತ್ತದೆ. ಬಿ. ಕೆ. ಚಂದ್ರಶೇಖರ್ ಶಿಕ್ಷಣ ಸಚಿವರಾಗಿದ್ದಾಗ ಇದನ್ನೆಲ್ಲ ಬದಲಾಯಿಸಲಾಯಿತು.

ಕರ್ನಾಟಕದ ಒಂದು ಸರಕಾರಿ ಉರ್ದು ಮಾಧ್ಯಮ ಶಾಲೆಯಲ್ಲಿ 'ಇಸ್ಲಾಮೀ ಸಂಕೇತಗಳನ್ನು ಪ್ರದರ್ಶಿಸು ತ್ತಿರುವುದು' ಸಮಿತಿಯ ಗಮನಕ್ಕೆ ಬಂದಿದೆ. ಮತ್ತೊಂದು ಸರಕಾರಿ ಶಾಲೆಯಲ್ಲಿ ಮಕ್ಕಳು ದಿನಾಲೂ ಪೂಜೆ ಮಾಡಬೇಕೆಂದು ಹೇಳಲಾಗುತ್ತಿತ್ತು. ಅನೇಕ ಶಾಲೆಗಳಲ್ಲಿ ಪ್ರಾಂಶುಪಾಲರ ಕಚೇರಿಯಲ್ಲಿ ಹಿಂದೂ ದೇವತೆಗಳ ಫೋಟೋಗಳನ್ನು ತೂಗುಹಾಕಿರುವುದೂ ಕಂಡುಬಂದಿದೆ.

**ವಿದ್ಯಾಭಾರತಿ ಶಾಲೆಗಳು**

ದೇಶದ ಬಹುತೇಕ ವಿದ್ಯಾಭಾರತಿ ಶಾಲೆಗಳು ಸಿಬಿಎಸ್‌ಇ ಪಠ್ಯಕ್ರಮವನ್ನು ಅನುಸರಿಸುತ್ತಿವೆಯಾದರೂ ಅವು ತಮ್ಮದೇ ಕೆಲವು ಪಠ್ಯಪುಸ್ತಕಗಳ ಮೂಲಕ ಅಸ್ತಿತ್ವದಲ್ಲಿರುವ ಪೂರ್ವಗ್ರಹಗಳನ್ನೂ ಪಕ್ಷಪಾತಗಳನ್ನೂ ಕೋಮುದ್ವೇಷವನ್ನೂ ಮುಂದುವರಿಸುತ್ತಿವೆ. 'ವಿದ್ಯಾಭಾರತಿ ಅಖಿಲ ಭಾರತೀಯ ಶಿಕ್ಷಾ ಸಂಸ್ಥಾನ' ಶಿಕ್ಷಕರಿಗೋಸ್ಕರ (ಇವಲ್ಲಿ ಕೆಲವನ್ನು ಹೆತ್ತವರಿಗೂ ಕೊಡಲಾಗುತ್ತದೆ) ಪ್ರಕಟಿಸುವ ಕೆಲವು ಸಂಹಿತೆಗಳಲ್ಲಿ ರವೀಂದ್ರನಾಥ ಠಾಕೂರ್ ಮಾತುಗಳ ಜೊತೆಗೆ ಕಾಕಾ ಕಾಲೆಲ್ಕರ್ ರಂತಹವರ ಹೇಳಿಕೆಗಳನ್ನೂ ಸೇರಿಸಲಾಗುತ್ತದೆ. ಆರೆಸ್ಸೆಸ್‌ನ ಅಂಗವಾದ 'ಬುಡಕಟ್ಟುಗಳ ಸ್ನೇಹಿತರ ಸಂಘ' (ಎಫ್‌ಟಿಎಸ್) ನಡೆಸುತ್ತಿರುವ ಏಕ ಶಿಕ್ಷಕ ಶಾಲೆ (ಏಕಲ್ ವಿದ್ಯಾಲಯ) ಗಳಂತೂ ಸರಕಾರದಿಂದ ಅನುದಾನ ಮತ್ತು ವಿದೇಶಗಳಿಂದ ಸಹಾಯಧನ ಪಡೆಯುತ್ತ ದ್ವೇಷದ ಗುಣವನ್ನೇ ಕಲಿಸುತ್ತವೆ. ಹಿಂದೂ ಧಾರ್ಮಿಕ ಸಂಕೇತಗಳಿಂದ ತುಂಬಿಹೋಗಿರುವ ಈ ಶಾಲೆಗಳ ಶಿಕ್ಷಕರಿಗೆಲ್ಲ ಸಮುದಾಯಗಳಲ್ಲಿ ಕೋಮುಸೌಹಾರ್ದ ಕೆಡಿಸುವ, ಧರ್ಮದ ಆಧಾರದಲ್ಲಿ ಕೋಮುಗಳ ನಡುವಿನಲ್ಲಿ ವೈರತ್ವವನ್ನು ಸೃಷ್ಟಿಸುವ ಮತ್ತು ಮಕ್ಕಳಲ್ಲಿ

ಮೂಲಭೂತವಾದಿ ರಾಜಕೀಯ ಸಿದ್ಧಾಂತವನ್ನು ಬೆಳೆಸುವ ತರಬೇತಿ ನೀಡಲಾಗುತ್ತಿದೆ.

ಕರ್ನಾಟಕ ರಾಜ್ಯದಲ್ಲಿ ಆರೆಸ್ಸೆಸ್ ಪರವಾಗಿರುವ ಕೆಲವು ಸಂಸ್ಥೆಗಳು ಕೊಳಚೆ ನಿವಾಸಿಗಳ ಸಾಕ್ಷರತಾ ಕೇಂದ್ರಗಳಲ್ಲಿ ಪಠ್ಯಪುಸ್ತಕಗಳನ್ನು ವಿತರಿಸುತ್ತವೆ. ಉದಾಹರಣೆಗೆ, ಇನ್‌ಫೋಸಿಸ್ ಸಂಸ್ಥೆ ಸರಕಾರಿ ಮತ್ತು ಸರಕಾರೇತರ ಶಾಲೆಗಳಲ್ಲಿ ಹೆಚ್ಚಾಗಿ ವಿತರಿಸುವ 'ಮಹಾನ್ ಭಾರತೀಯರು' ಪುಸ್ತಕಗಳನ್ನು ಮುಖ್ಯವಾಗಿ ಪ್ರಕಟಿಸುತ್ತಿರುವುದೆ ಆರೆಸ್ಸೆಸ್ ಅಂಗಸಂಸ್ಥೆಯಾದ ರಾಷ್ಟ್ರೋತ್ಥಾನ ಪರಿಷತ್ತು. ಈ ಪುಸ್ತಕಗಳಲ್ಲಿ ರಾಷ್ಟ್ರೀಯವಾದಿ ನಾಯಕರ ಸಾಲಿನಲ್ಲಿ ಗಾಂಧಿ, ನೆಹರೂ ಚಿತ್ರಗಳ ಬದಲಿಗೆ ಆರೆಸ್ಸೆಸ್ ಕರ್ಮಠರ ಚಿತ್ರಗಳು ಕಂಡುಬರುತ್ತವೆ; ಕೇವಲ ಒಬ್ಬ ಮುಸ್ಲಿಮನ ಚಿತ್ರವಿದೆ; ದಲಿತನ ಅಥವಾ ಸಮಕಾಲೀನ ಮಹಿಳೆಯ ಒಂದು ಚಿತ್ರವೂ ಇಲ್ಲ. ಸರಕಾರಿ ಶಾಲೆಗಳಲ್ಲಿ ನಡೆಸಲಾಗುತ್ತಿರುವ ಇಂತಹ ಖಾಸಗಿ (ಇನ್‌ಫೋಸಿಸ್ ಲೈಬ್ರೆರಿ ಮತ್ತು ರಾಮಕೃಷ್ಣಾಶ್ರಮದ ಕಾರ್ಯಕ್ರಮಗಳು) ಉಪಕ್ರಮಗಳಿಗೆ ರಾಜ್ಯಸರಕಾರ ಯಾವೊಂದು ಪರಿವೀಕ್ಷಣೆ ಅಥವಾ ಅನುಮೋದನೆಯ ಪ್ರಕ್ರಿಯೆಯನ್ನೂ ಇಟ್ಟುಕೊಂಡಿಲ್ಲ.

**ಮದ್ರಸಾಗಳು**

ಕೆಲವು ಮದ್ರಸಾಗಳಲ್ಲಿ ಸರಕಾರಿ ಪಠ್ಯಕ್ರಮವನ್ನು ಅನುಸರಿಸಲಾಗುತ್ತಿದೆ. ದಾರುಲ್ ಉಲೂಮ್ ದಿಯೊಬಂದ್, ನದವತುಲ್ ಉಲಮಾಗಳು ಖಾಸಗಿಯಾಗಿ ಪಠ್ಯಪುಸ್ತಕಗಳನ್ನು ಪ್ರಕಟಿಸುತ್ತವೆ. ಈ ಪುಸ್ತಕಗಳು ಇತರ ಧರ್ಮಗಳ ಬಗೆಗೆ ಋಣಾತ್ಮಕ ವಿಷಯಗಳನ್ನು ಹೇಳುವುದಿಲ್ಲ. ಆದರೆ ಇಸ್ಲಾಮಿಗೆ ಸಂಬಂಧಿಸಿದ ಪ್ರತಿಯೊಂದು ವಿಷಯವನ್ನೂ ಎಷ್ಟೊಂದು ವೈಭವೀಕರಿಸಲಾಗುತ್ತಿದೆ! ಅವು ವಿದ್ಯಾರ್ಥಿಗಳಲ್ಲಿ ಧಾರ್ಮಿಕ ಅಸ್ಮಿತೆಯನ್ನು ಇನ್ನಷ್ಟು ಹರಿತಗೊಳಿಸುವಂತಿವೆ. ಇವುಗಳಲ್ಲಿ ಕುರುಡು ನಂಬಿಕೆಗಳಿಗೆ ಪ್ರೋತ್ಸಾಹ ನೀಡಲಾಗುತ್ತಿದೆಯೇ ಹೊರತು ವೈಜ್ಞಾನಿಕ ಮತ್ತು ವಿಮರ್ಶಾತ್ಮಕ ಚಿಂತನೆಗಳಿಗೆ ಇಂಬಿಲ್ಲ. ಆದುದರಿಂದ ಇವುಗಳಿಂದ ಪ್ರತ್ಯೇಕತೆಯ ಭಾವನೆಗಳು ಹೆಚ್ಚುತ್ತವೆ. ಅದೇ ವೇಳೆ ಕೆಲವು ಪುಸ್ತಕಗಳು ಧನಾತ್ಮಕವಾಗಿದ್ದು ಪಕ್ಷಪಾತರಹಿತವೂ ಮುಕ್ತವೂ ಆಗಿವೆ. ಕೇವಲ ಸ್ತ್ರೀಯರಿಗಾಗಿಯೇ ಇರುವ ಪಠ್ಯಪುಸ್ತಕಗಳಾದ ಹುಸ್ನ್-ಎ-ಮುಆಶರತ್, ಉಮ್ಮತ್-ಎ-ಮುಸಲ್ಲಿಮಾ ಕಿ ಮೇಂ ಮುಂತಾದವುಗಳಲ್ಲಿ ಕೇವಲ ಮುಸ್ಲಿಂ ಮಹಿಳೆಯರನ್ನು ಉಲ್ಲೇಖಿಸಲಾಗಿದ್ದು, ಇವು ಮಕ್ಕಳ ಸಂಸ್ಕೃತಿ ಮತ್ತು ದೃಷ್ಟಿ ವೈಶಾಲ್ಯವನ್ನು ತಗ್ಗಿಸಿ ಅವರು ಮುಖ್ಯವಾಹಿನಿಯ ಭಾಗವಾಗುವ ಭಾವನೆಗೆ ಅಡ್ಡಿಯಾಗುತ್ತವೆ. ಮಕ್ಕಳ ಉತ್ತಮ ಭವಿಷ್ಯದ ಹಿತದೃಷ್ಟಿಯಿರುವ ಸುಮಾರು ಶೇಕಡ ೯೦ರಷ್ಟು ಮದ್ರಸಾಗಳು ತಮ್ಮ ಶಿಕ್ಷಣದಲ್ಲಿ ಆಧುನಿಕ ವಿಷಯಗಳನ್ನು ಆರಂಭಿಸಲಿಚ್ಛಿಸುತ್ತಿವೆ. ಕೆಲವು ರಾಜ್ಯಗಳಲ್ಲಿ ಸ್ಥಾಪಿಸಲಾಗಿರುವ ಮದ್ರಸಾ ಮಂಡಳಿಗಳಿಂದಾಗಿ ಇದು ಸ್ವಲ್ಪಮಟ್ಟಿಗೆ ಸಾಧ್ಯವಾಗಿದೆ. ಆದರೆ ಈ ರೀತಿಯಲ್ಲಿ ಗಣನೀಯ ಸಂಖ್ಯೆಯ ಮುಸ್ಲಿಂ ಮಕ್ಕಳಿಗೆ ಪ್ರತ್ಯೇಕ ಶಿಕ್ಷಣ ನೀಡುವುದರ ಒಂದು ಅಪಾಯವೆಂದರೆ ಈ ಮಕ್ಕಳಿಗೆ ಸಮಾಜದ ಇತರ ಮಕ್ಕಳೊಂದಿಗೆ ಸಂವಹನ, ಮಾತುಕತೆ ಮತ್ತು ಸಾಮಾಜಿಕ ಸಂಪರ್ಕಗಳ ಅವಕಾಶಗಳು ಕಡಿಮೆಯಾಗುತ್ತವೆ; ಪೂರ್ವಗ್ರಹಗಳನ್ನು, ಪಡಿಯಚ್ಚುಗಳನ್ನು ಹೆಚ್ಚಿಸುವ ಅವಕಾಶವನ್ನು ಕಲ್ಪಿಸುತ್ತವೆ; ಹಿಂದೂ, ಮುಸ್ಲಿಂ ಎಂಬ ಪ್ರತ್ಯೇಕ ಅಂಕಣಗಳ ಬೆಳೆಯುವಿಕೆಗೆ ಸಹಕರಿಸುತ್ತವೆ.

**ಖಾಸಗಿ ಪ್ರಕಾಶಕರ ಪಠ್ಯಪುಸ್ತಕಗಳು**

ಹೆಚ್ಚುಕಡಿಮೆ ಎಲ್ಲ ರಾಜ್ಯಗಳಲ್ಲೂ ಖಾಸಗಿ ಪಠ್ಯಪುಸ್ತಕಗಳಿಗೆ ಸಂಬಂಧಿಸಿದಂತೆ ಯಾವ ರೀತಿಯ ನಿಯಂತ್ರಣವೂ ಇಲ್ಲವಾಗಿದೆ. ಇವೆಲ್ಲವೂ ಕೇವಲ ಹಿಂದೂ ಸಂಸ್ಕೃತಿಯನ್ನೆ ಎತ್ತಿಹಿಡಿಯುವ ರೀತಿಯಲ್ಲಿವೆ. ಕರ್ನಾಟಕ ರಾಜ್ಯದ ವರದಿಯನ್ನಷ್ಟೆ ಎತ್ತಿಕೊಳ್ಳೋಣ. ಅಲ್ಲಿ ಸುಭಾಷ್ ಬುಕ್ ಏಜೆನ್ಸಿ ಪ್ರಕಟಿಸುವ ೧ರಿಂದ ೪ನೇ ತರಗತಿಯ 'ಬಾಲನೀತಿ' ಪಠ್ಯಪುಸ್ತಕಗಳು ಆರ್ಥಿಕ ಅಸಮಾನತೆಗಳನ್ನು ಗಟ್ಟಿಗೊಳಿಸುವಂತಿವೆ. ಇವುಗಳಲ್ಲಿ ಮುಖ್ಯವಾಗಿ ಹಿಂದು ಧರ್ಮದ ನೀತಿಗಳನ್ನು ಹೇಳಲಾಗಿದೆಯಲ್ಲದೆ ಉದಾಹರಣೆಗಳನ್ನು ಹಿಂದೂ ಪೌರಾಣಿಕ ಗ್ರಂಥಗಳಿಂದ ನೀಡಲಾಗಿದೆ. ಪರಿಸರ ಸಂರಕ್ಷಣೆಯ ವಿಷಯದಲ್ಲಿ ಒಂದು ಶಬ್ದವೂ ಕಾಣಸಿಗುವುದಿಲ್ಲ. ಮಂಗಳೂರಿನ ಗದಗ ಪ್ರಕಟಣೆಯ ಕನ್ನಡ ಮತ್ತು ಸಮಾಜ ಶಾಸ್ತ್ರದ 'ಮೋಹನ' ಮತ್ತು 'ಆನಂದ' ಗೈಡ್‌ಗಳಲ್ಲಿ ಗಣನೀಯಮಟ್ಟದ ಲಿಂಗ ತಾರತಮ್ಯ ಮತ್ತು ಅತ್ಯಧಿಕ ಪ್ರಮಾಣದಲ್ಲಿ ಹಿಂದು ಧರ್ಮ ಕುರಿತ ಉಲ್ಲೇಖಗಳಿವೆ. ಅಲ್ಲದೆ ಮುಸ್ಲಿಮರು ಹಿಂದೂಗಳನ್ನು ಗುಲಾಮರನ್ನಾಗಿ ಮಾಡಿದ್ದರೆಂದು ಕೀಳಾಗಿ ಚಿತ್ರಿಸಲಾಗಿದೆ. ಬೆಂಗಳೂರಿನ 'ಕನ್ನಡ ಪರಿಮಳ'ದಲ್ಲಿ ೨ರಿಂದ ೫ನೇ ತರಗತಿಗಾಗಿರುವ ನೀತಿಶಾಸ್ತ್ರ/ಸಂಸ್ಕೃತಿ ವಿಷಯದ ಪಾಠಗಳಿವೆ. ಇವುಗಳಲ್ಲಿರುವ ಮೌಲ್ಯಗಳಲ್ಲವುಗಳ ಮೂಲ ಹಿಂದೂ ಪುರಾಣಗಳು ಮತ್ತು ಹಿಂದೂ ಧರ್ಮ. ಇವುಗಳಲ್ಲಿ ಕೇವಲ ಹಿಂದೂ ಹಬ್ಬಗಳನ್ನೂ ಹಿಂದೂ ದೇವರುಗಳನ್ನೂ ಉಲ್ಲೇಖಿಸಲಾಗಿದೆ. ಈ ಪುಸ್ತಕಗಳಲ್ಲಿ ವಾಕ್ಯರಚನೆ ಹೇಗಿದೆಯೆಂದರೆ ಭಾರತೀಯರನ್ನು ಹಿಂದೂಗಳು ಮತ್ತು 'ಇತರರು' ಎಂದು ಪ್ರತ್ಯೇಕಿಸಲಾಗಿದೆ.




**ಸಮಿತಿಯ ವರದಿ**

ಸಮಿತಿಯಿಂದ ನಡೆಸಲಾದ ಈ ಪರಿಶೀಲನೆ ಎರಡು ವಿಭಿನ್ನ ರೀತಿಯ ಸಮಸ್ಯೆಗಳ ಮೇಲೆ ಬೆಳಕು ಚೆಲ್ಲುತ್ತದೆ. ಮೊದಲನೆಯದಾಗಿ, ಧಾರ್ಮಿಕ ಮತ್ತು ಇಂಗ್ಲಿಷ್ ಸಂಸ್ಥೆಗಳ ಶಾಲೆಗಳಲ್ಲಿ, ಅವರಲ್ಲೂ ವಿಶೇಷವಾಗಿ ಆರೆಸ್ಸೆಸ್ ಅಂಗಸಂಸ್ಥೆಗಳ ಶಾಲೆಗಳಲ್ಲಿ ಬಳಕೆಯಾಗುವ ಪಠ್ಯಪುಸ್ತಕಗಳಲ್ಲಿ ತುಂಬಿರುವ ಕೋಮುವಾದಿ ಪ್ರಚಾರ. ಎರಡನೆಯದಾಗಿ ಕೆಲವು ಧಾರ್ಮಿಕ ಸೂಕ್ಷ್ಮ ವಿಷಯಗಳು. ಉದಾಹರಣೆಗೆ: ಮಧ್ಯಮವರ್ಗದ ಒಡೆತನಕ್ಕೆ ಒಂದು ಸಮರ್ಥ ಆದರ್ಶವನ್ನಾಗಿಸುವ ಕರ್ನಾಟಕ, ಕೇರಳದ ರಾಜ್ಯಗಳ ಪಠ್ಯಪುಸ್ತಕಗಳು.

ಧಾರ್ಮಿಕ ಮತ್ತು ಸಾಮಾಜಿಕ ಸಂಸ್ಥೆಗಳು ಪಠ್ಯಪುಸ್ತಕಗಳನ್ನು ತಯಾರಿಸುತ್ತಿರುವಾಗ ಸರಕಾರಿ ಪಠ್ಯಪುಸ್ತಕಗಳಲ್ಲಿರುವ ಚರಿತ್ರೆಗೆ 'ಪೂರಕ' ಅಂಶಗಳನ್ನು ಸೇರಿಸುವ ಮತ್ತು 'ತಿದ್ದುವ' ಕೆಲಸ ನಡೆಯುತ್ತದೆ. ಉದಾಹರಣೆಗೆ: ಗಾಂಧಿ ಮತ್ತು ನೆಹರು ರಾಷ್ಟ್ರೀಯ ನಾಯಕರೆಂದು ಹೇಳುವ ಜೊತೆಜೊತೆಗೆ ಹಿಂದುತ್ವದ ಮುಖಂಡರಿಗೂ ಅಷ್ಟೇ ಪ್ರಾಮುಖ್ಯತೆಯನ್ನು ನೀಡಲಾಗುತ್ತದೆ. ಸ್ವಾತಂತ್ರ್ಯ ಹೋರಾಟದ ಮುಂಚೂಣಿಯಿಂದ ಹೇಗೆ ಮುಸ್ಲಿಂ ಕೋಮುವಾದಿ ಮುಖಂಡರು ಪ್ರತ್ಯೇಕಿಸಲ್ಪಟ್ಟಿದ್ದರೋ ಅದೇ ರೀತಿ ಹಿಂದುತ್ವ ಮುಖಂಡರೂ ಸ್ವಾತಂತ್ರ್ಯ ಹೋರಾಟದಿಂದ ಹೊರಗುಳಿದಿದ್ದರೆಂಬುದು ಸರ್ವವಿದಿತ. ಆದುದರಿಂದ ಅಂತಹ ಮುಖಂಡರಿಗೆ ನೆಹರೂ, ಗಾಂಧಿಯವರಿಗೆ ನೀಡಿದ ಸ್ಥಾನಮಾನ ನೀಡುವುದು ಚಾರಿತ್ರಿಕ ಸತ್ಯಗಳನ್ನು ತಿರುಚಿದಂತಾಗುತ್ತದೆ. ಹಿಂದುತ್ವ ಮುಖಂಡರ ಉದ್ದೇಶ ಜನರನ್ನು ವಿಭಜಿಸುವುದಾಗಿತ್ತಲ್ಲದೆ ಒಂದುಗೂಡಿಸುವುದಾಗಿರಲಿಲ್ಲ. ಹೀಗಾಗಿ ಇಂತಹ ವ್ಯಕ್ತಿಗಳು ಜಾತ್ಯತೀತ ಗಣತಂತ್ರವೊಂದರ ಪಠ್ಯಪುಸ್ತಕಗಳಲ್ಲಿ ಹೀರೋಗಳಾಗಿ ಬಿಂಬಿಸಲ್ಪಡಕೂಡದು.

ಈ ಚರಿತ್ರೆಯ ಪಠ್ಯಪುಸ್ತಕಗಳಲ್ಲಿ ಸತ್ಯ, ಕಲ್ಪನೆ ಮತ್ತು ಪುರಾಣಗಳ ನಡುವೆ ವ್ಯತ್ಯಾಸಗಳೇ ಇಲ್ಲ. ಈ ಪಠ್ಯಪುಸ್ತಕಗಳ ಪ್ರಧಾನ ಗುರಿ ಭಾರತ ಹಿಂದಿನಿಂದಲೂ ಒಂದು ಹಿಂದೂ ರಾಷ್ಟ್ರವಾಗಿತ್ತೆನ್ನುವ ಹಿಂದೂ ಕೋಮುವಾದಿ ಕಲ್ಪನೆಯನ್ನು ಮಕ್ಕಳಲ್ಲಿ ತುಂಬಿಸಿ ಅದನ್ನು ಹರಡುವುದಾಗಿದೆ. ಹಿಂದೂ ರಾಜರ ಆಳ್ವಿಕೆಯಲ್ಲಿ ಭಾರತ ಅತ್ಯಂತ ಉಚ್ಛ್ರಾಯ ಸ್ಥಿತಿಯನ್ನು ತಲುಪಿತ್ತಲ್ಲದೆ ಆ ಕಾಲಾವಧಿಯಲ್ಲಿ, ಅರ್ಥಾತ್ ಮುಸ್ಲಿಂ ಆಡಳಿತಕ್ಕೆ ಹಿಂದಿನ ಕಾಲಾವಧಿಯಲ್ಲಿ, ಅತ್ಯಂತ ಮಹತ್ತರ ಸಾಧನೆಗಳನ್ನೂ ಮಾಡಲಾಯಿತೆಂದು ಬಿಂಬಿಸಲಾಗಿದೆ. ಬಹಳ ಪ್ರಾಚೀನ ಕಾಲದಿಂದಲೂ ಭಾರತ ಒಂದು ಬಹುಸಂಸ್ಕೃತಿ, ಬಹು ಧರ್ಮಗಳ ಸಮ್ಮಿಳಿತ ಸಮಾಜವಾಗಿತ್ತೆಂಬ ವಿಷಯಕ್ಕೆ ಹೆಚ್ಚಿನ ಒತ್ತು ನೀಡಲಾಗಿಲ್ಲ. ತನ್ಮೂಲಕ ಈ ಪುಸ್ತಕಗಳು ಭವಿಷ್ಯದ ಪೀಳಿಗೆಗಳ ಮನಸ್ಸನ್ನು ಸಂಕುಚಿತಗೊಳಿಸಿ ಅವರನ್ನು ಪರಮತ ಅಸಹಿಷ್ಣುತೆಯ ಚಿಂತನೆಗಳತ್ತ ದೂಡುತ್ತವೆ.

ಖಾಸಗಿ ಪ್ರಕಾಶಕರ ಪುಸ್ತಕಗಳು ಕೂಡ ಸಾಂವಿಧಾನಿಕ ಮೌಲ್ಯಗಳಿಗೆ ತಿಲಾಂಜಲಿ ಇತ್ತಿವೆ. ಚರಿತ್ರೆ, ಭೂಗೋಳದ ಪಾಠಗಳಲ್ಲಿ ಸತ್ಯಾಂಶಗಳು, ಕಲ್ಪನೆಗಳು, ದಂತಕತೆಗಳು ಒಟ್ಟೊಟ್ಟಿಗೆ ಸೇರಿಕೊಂಡಿವೆ. ಅವು ಹಿಂದೂ ಮತ್ತು ಮುಸ್ಲಿಂ ಎಂಬ ಪ್ರತ್ಯೇಕತೆಯ ಗೋಡೆಗಳನ್ನು ಬೆಳೆಸುವ

(ಮುಂದಿನ ಪುಟಕ್ಕೆ)

**ಡಾ|| ಕೆ. ಎಸ್. ಪವಿತ್ರ**

ನಾವ್ಯಾರೂ ದೇವರನ್ನು ಮುಖತಃ ಕಾಣದಿದ್ದರೂ, ದೇವರೊಡನೆಯ ನಮ್ಮ ಸಂಬಂಧ ವಿಶಿಷ್ಟವಾದುದು. ಎಲ್ಲರನ್ನೂ ಗೌರವದಿಂದ 'ನೀವು' ಎಂದು ಬಹುವಚನದಿಂದ ಸಂಬೋಧಿಸಿದರೂ, ದೇವರನ್ನು ಆತ್ಮೀಯವಾಗಿ 'ನೀನು' ಎನ್ನುತ್ತೇವೆ. 'ನೀನೇ ಅನಾಥ ಬಂಧು', 'ನೀನೇ ನಮ್ಮ ತಂದೆ ತಾಯಿ' ಎಂದು ಬೇಡುತ್ತೇವೆ. ನಮ್ಮ ಸಂಬಂಧಿಗಳು, ಆತ್ಮೀಯರು ಯಾರೂ ನಮ್ಮ ಕಷ್ಟ ಸಮಯದಲ್ಲಿ ನೆರವಾಗದಿದ್ದರೂ ದೇವರು ನಮ್ಮ ಕಷ್ಟಗಳನ್ನು ಪರಿಹರಿಸುತ್ತಾನೆ ಎಂದು ನಂಬುತ್ತೇವೆ. ಸಾವನ್ನಪ್ಪಿದ ನಮ್ಮ ಸಂಬಂಧಿಗಳು ದೇವರ ಬಳಿ ತೆರಳುತ್ತಾರೆ ಎಂಬ ವಿಶ್ವಾಸ ನಮ್ಮದು. ಮಹಿಳೆಗೂ-ದೇವರಿಗೂ ಹತ್ತಿರದ ನಂಟು. ಹಿಂದೂ ದೇವತೆಗಳಲ್ಲಂತೂ ಸ್ತ್ರೀ ದೇವತೆಗಳು ಶಕ್ತಿ ಸ್ವರೂಪ. ಹಾಗೆಯೇ ಮಹಿಳೆಯ ಮಾನಸಿಕ ಆರೋಗ್ಯಕ್ಕೂ, ದೇವರು-ಧಾರ್ಮಿಕ ಆಚರಣೆಗಳಿಗೂ ಹತ್ತಿರದ ಸಂಬಂಧವಿದೆ. ಹಾಗಿದ್ದರೆ ಈ ಸಂಬಂಧದ ವಿವಿಧ ಆಯಾಮಗಳು, ಮಾನಸಿಕ ಆರೋಗ್ಯದ ವರ್ಧನೆಗೆ ಅಥವಾ ಕಾಯಿಲೆಗಳಿಗೆ ಅದರ ಕೊಡುಗೆಯೇನು ಎಂಬುದರ ಬಗೆಗೆ ವಿಶದವಾಗಿ ತಿಳಿಯೋಣ.

ಮನೋವಿಜ್ಞಾನದ ಪ್ರಕಾರ ದೇವರ ಅಸ್ತಿತ್ವದ ಬಗ್ಗೆ ಚರ್ಚಿಸುವುದಕ್ಕಿಂತ ಮುಖ್ಯವಾದ ಪ್ರಶ್ನೆ 'ದೇವರು' ಎಂಬ ನಂಬಿಕೆಯ ಅಗತ್ಯ ನಮಗೆ ಏಕಿದೆ ಎಂಬುದು. ನಾವೆಲ್ಲರೂ 'ಸಂಕಟ'ದಲ್ಲಿ, ಕಷ್ಟದಲ್ಲಿ ಸಿಲುಕಿದಾಗ ನಮಗಿಂತ ಮಿಗಿಲಾದ, ಈ ಕಷ್ಟಗಳನ್ನೆಲ್ಲಾ ಪರಿಹರಿಸುವ 'ಶಕ್ತಿ'ಯೊಂದಿದೆ ಎಂದು ನಂಬುತ್ತೇವೆ. ಆ ಕ್ಷಣಕ್ಕೆ ಅದು ನಮಗೆ ಸಮಾಧಾನ ನೀಡುತ್ತದೆ. ಆ ನಂಬಿಕೆಯಡಿಯಲ್ಲಿ ಕುಟುಂಬಗಳು, ಸಮಾಜ, ಹಲವೊಮ್ಮೆ ಒಂದು ಸಮುದಾಯದ ಒಗ್ಗಟ್ಟನ್ನು ಕಾಪಾಡಲೂ ಅದು ಸಹಾಯಕ. ಸಾಮಾಜಿಕವಾಗಿ ಆಚರಿಸುವ ನವರಾತ್ರಿ, ಗಣಪತಿ ಚೌತಿ ಇದಕ್ಕೆ ಉದಾಹರಣೆ.

ಧರ್ಮ ಎಂಬುದು ನಿಜವಾದ ಅರ್ಥದಲ್ಲಿ ಒಂದು ರೀತಿಯ ಶಿಸ್ತು. ಆದರೆ 'ದೇವರ' ನಂಬಿಕೆ - ಆಚರಣೆಗಳು ಮಾನವ ಧರ್ಮವನ್ನು ಮೀರಿ ನಡೆದಾಗ ಅದು ಮಾನಸಿಕ ಕಾಯಿಲೆಯನ್ನು ಉಂಟುಮಾಡಬಹುದು. ಬದುಕೇ ದುಸ್ತರ ಎಂದೆನಿಸುವಂತೆ ಮಾಡಬಹುದು. ಯಾವುದೇ ಮಹಿಳೆಯ ಬದುಕಿನಲ್ಲಿ ಧಾರ್ಮಿಕ ಆಚರಣೆಗಳಿಗೂ ದೇವರಿಗೂ ಮಹತ್ವದ ಸ್ಥಾನವೇ. ಎಷ್ಟೋ ಮಹಿಳೆಯರು ಇವಕ್ಕಾಗಿಯೇ ದಿನದ ಬಹುಪಾಲನ್ನು ವ್ಯಯಿಸಿದರೆ, ಪದ್ಧತಿಗಳಲ್ಲಿ ಸ್ವಲ್ಪ ಏರುಪೇರಾದರೂ ತಪ್ಪಿತಸ್ಥ ಭಾವನೆಯಿಂದ ನರಳುವ ಅಸಂಖ್ಯಾತ ಮಹಿಳೆಯರನ್ನು ನಮ್ಮ ಸುತ್ತಮುತ್ತ ನೋಡಬಹುದು.

**ಮೈಲಿಗೆ-ಮಡಿ-ಮಹಿಳೆ**

ಮೈಲಿಗೆ-ಮಡಿ ಪದ್ಧತಿಗಳು ದೇವರಿಗಿಂತ ಹೆಚ್ಚಾಗಿ ಮನುಷ್ಯರಿಗೆ ಅನ್ವಯಿಸುತ್ತವೆ. ನಿಜಾರ್ಥದಲ್ಲಿ ಇವು ಸ್ವಚ್ಛತೆಯನ್ನು ಕಾಪಾಡುವ, ತನ್ಮೂಲಕ ರೋಗ-ರುಜಿನಗಳನ್ನು ತಡೆಯುವ ಪ್ರಯತ್ನದಲ್ಲಿ ಆರಂಭವಾಗಿರಬಹುದಾದರೂ ಅವುಗಳು ಅತಿಯಾದಾಗ ಅನಾರೋಗ್ಯವನ್ನೇ ಉಂಟುಮಾಡಬಹುದು. ಕೆಳಗಿನ ಉದಾಹರಣೆಗಳನ್ನು ಗಮನಿಸಿ :

* ಶಾರದೆ ೪೦ರ ವಯಸ್ಸಿನ ಮಧ್ಯಮ ವರ್ಗದ ಸ್ತ್ರೀ. ಚಿಕ್ಕ ವಯಸ್ಸಿನಿಂದಲೂ ಸ್ನಾನಮಾಡಿ ದೇವರ ಪೂಜೆ ಮುಗಿಸದೆ ಒಂದು ತೊಟ್ಟು ನೀರನ್ನೂ ಬಾಯಿಗೆ ಹಾಕುವುದಿಲ್ಲ. ಸ್ಕೂಲು-ಕಾಲೇಜು-ಆಫೀಸಿಗೆ ಹೋಗುವ ಗಂಡ, ಮಕ್ಕಳ ತಯಾರಿಯ ಗಡಿಬಿಡಿಯಲ್ಲಿ ಶಾರದೆಗೆ ಬೆಳಿಗ್ಗೆ ಸ್ನಾನ ಮಾಡಿ ದೇವರ ಪೂಜೆ ಮಾಡಲು ಪುರುಸೊತ್ತಿರಲು ಎಲ್ಲಿ ಸಾಧ್ಯ ? ಹಾಗಾಗಿ ಅವರನ್ನೆಲ್ಲಾ ಕಳಿಸಿ ೧೧ ಗಂಟೆಗೆ ಸ್ನಾನ ಪೂಜೆ ಮುಗಿಸಿ ತಿಂಡಿ ತಿನ್ನುವ ಹೊತ್ತಿಗೆ ೧೨ ಗಂಟೆ. ಮಧ್ಯಾಹ್ನದ ಊಟ ೪ ಗಂಟೆಗೆ. ಇತ್ತೀಚೆಗೆ ಅವಳಿಗೆ ಹೊಟ್ಟೆ ಉರಿ, ನೋವು, ಉಬ್ಬಳಿಕೆ ಬಂದಂತಾಗುವುದು ಎಲ್ಲವೂ ಆರಂಭವಾಗಿವೆ. ಯಾವುದೇ ಗ್ಯಾಸ್ಟ್ರಿಕ್ ಮಾತ್ರೆಗಳೂ ಕೆಲಸ ಮಾಡುತ್ತಿಲ್ಲ.
* ಕನಕ ೩೫ರ ವಯಸ್ಸಿನ ವಿದ್ಯಾವಂತ ಸ್ತ್ರೀ. ಮನೆಯಲ್ಲಿ ಮರುದಿನ ಸುಬ್ರಹ್ಮಣ್ಯ ಪೂಜೆ ಇದೆ ಎನ್ನುವಾಗ ಮುಟ್ಟು ಕಾಣಿಸಿಕೊಂಡು, ಇರುವ ನೆಂಟರ ಎದುರು ಹೇಗೆ ಹೇಳುವುದು ಎಂಬ ನಾಚಿಕೆಯೊಡನೆ ಹಾಗೇ ಧಾರ್ಮಿಕ ವಿಧಿವಿಧಾನಗಳನ್ನು ಪೂರೈಸಿದ್ದಾಳೆ. ನಂತರ ಏನೂ ತೊಂದರೆಯಾಗಿರದಿದ್ದರೂ, ಯಾರಿಗೂ ಅದರ ಬಗ್ಗೆ ಗೊತ್ತಾಗದಿದ್ದರೂ, ಕನಕಳಿಗೆ ಒಳಗೊಳಗೇ ಒಂದು ಭೀತಿ. ಮತ್ತೆ ಮತ್ತೆ ನಾನು ಈ 'ತಪ್ಪು' ಮಾಡಿದ್ದಕ್ಕೆ ದೇವರಿಗೆ ಸಿಟ್ಟು ಬಂದು ಏನಾದರೂ ಆದರೆ ಎಂಬ ಅನುಮಾನ ಅವಳನ್ನು ಬಲವಾಗಿ ಕಾಡುತ್ತಲೇ ಇರುತ್ತದೆ.
* ವಿದ್ಯಾ ೨೫ರ ಸುಂದರ ಯುವತಿ. ಆಕೆಗೆ ಅನುರೂಪನಾದ ಪತಿ ನಟೇಶ. ಮದುವೆಯಾಗಿ ೬ ತಿಂಗಳುಗಳಾಗಿವೆ. ಅತ್ತೆ-ಮಾವ ಪತಿಯರೊಂದಿಗೆ ಚೊಕ್ಕವಾಗಿ ಸಂಸಾರ ಮಾಡುತ್ತಿದ್ದಾಳೆ ವಿದ್ಯಾ. ಇದ್ದಕ್ಕಿದ್ದಂತೆ ಮಾವನಿಗೆ ಕ್ಯಾನ್ಸರ್ ಎಂದು ಗೊತ್ತಾಗಿ ಚಿಕಿತ್ಸೆ ಕೊಡಿಸುವುದರೊಳಗಾಗಿ ಸಾವನ್ನಪ್ಪಿದ್ದಾರೆ. ವಿದ್ಯಾಳ ಮೇಲೆ ಅತ್ತೆಗೆ ಮತ್ತು ಸಂಬಂಧಿಕರೆಲ್ಲರಿಗೂ ಬೇಸರ. ಮನೆಗೆ ಬಂದ ಸೊಸೆಯ ಕಾಲ್ಗುಣ ಸರಿಯಿಲ್ಲದಿದ್ದರಿಂದಲೇ ಹೀಗಾಯ್ತು ಎನ್ನುತ್ತಾರೆ, ಕೊಂಕು ಮಾತುಗಳನ್ನಾಡುತ್ತಾರೆ.

ಮೇಲಿನ ಮೂರು ಉದಾಹರಣೆಗಳು ಸಮಾಜದ ಎಲ್ಲರೂ, ಅಂದರೆ ಮಹಿಳೆಯರು - ಪುರುಷರು (ವಿಶೇಷತಃ ಮಹಿಳೆಯರು) ಅಂಧಶ್ರದ್ಧೆಯಿಂದ ಧಾರ್ಮಿಕ ವಿಧಿವಿಧಾನಗಳನ್ನು ಪಾಲಿಸುವ ಅಪಾಯವನ್ನು

(೬೦ನೇ ಪುಟಕ್ಕೆ)

# ದೇವರು, ಧರ್ಮ ಮತ್ತು ಮಹಿಳೆ



**ಸಮಾಜದ ಎಲ್ಲರೂ, ಅಂದರೆ ಮಹಿಳೆಯರು-ಪುರುಷರು (ವಿಶೇಷತಃ ಮಹಿಳೆಯರು) ಅಂಧಶ್ರದ್ಧೆಯಿಂದ ಧಾರ್ಮಿಕ ವಿಧಿವಿಧಾನಗಳನ್ನು ಪಾಲಿಸುವ ಅಪಾಯವನ್ನು ಕಾಣುತ್ತಿದ್ದೇವೆ. ಈ ಅಂಧಶ್ರದ್ಧೆಯನ್ನು ವಿಧಿಸುವಲ್ಲಿ, ಪಾಲಿಸುವಲ್ಲಿ ಮಹಿಳೆಯರದೇ ಮೇಲುಗೈ. ಪುರುಷಪ್ರಧಾನವಾದ ಭಾರತೀಯ ಸಮಾಜ ಮಹಿಳೆಯರಿಗೆಂದೇ ದೇವರ ಹೆಸರಿನಲ್ಲಿ ಧಾರ್ಮಿಕ ಕಟ್ಟಳೆಗಳನ್ನು ವಿಧಿಸದಿರುವುದೂ ಇದಕ್ಕೆ ಕಾರಣವಿರಬಹುದು. ನಾವು ಸ್ತ್ರೀವಾದಿಗಳಿರಲಿ, ಇಲ್ಲದಿರಲಿ ಈ ತಾರತಮ್ಯ ಸುಸ್ಪಷ್ಟ. ಯಾರಾದರೂ ನಿಧನಹೊಂದಿದ ಕುಟುಂಬದಲ್ಲಿ ಸೊಸೆಯನ್ನು ಕರೆತರುವಂತಿಲ್ಲ. ಹೆಂಗಸರು ಮಾತ್ರ ಎಲ್ಲಾ ಪದ್ಧತಿಗಳನ್ನೂ ಸರಿಯಾಗಿಯೇ ಅನುಸರಿಸಬೇಕು, ಇಲ್ಲದಿದ್ದರೆ ಅವರು ಯಾವುದೇ ಶ್ರೇಯಸ್ಸಿಗೆ ಪಾತ್ರರಾಗಲಾರರು... ಇತ್ಯಾದಿ, ಇತ್ಯಾದಿ. ಧಾರ್ಮಿಕ ವಿಧಿಗಳನ್ನು ಪುರುಷರಿಗೂ ವಿಧಿಸಿದ್ದರೂ ಅವುಗಳನ್ನು ಅವರು ಪಾಲಿಸದಿದ್ದಾಗ ಅವರಲ್ಲಿ ಯಾವ ತಪ್ಪಿತಸ್ಥ ಭಾವನೆಯೂ ಇರುವುದಿಲ್ಲ. ಯಾರೂ ಅವರನ್ನು ದೂಷಿಸುವುದಿಲ್ಲ ಎಂಬುದನ್ನು ಸಾಮಾನ್ಯವಾಗಿ ಕಾಣಬಹುದು.**

# ಕರ್ನಾಟಕ ಶಿಲ್ಪ - ಸಂಸ್ಕೃತಿ (ನಾ ಕಂಡ ದೇಗುಲಗಳು)







ಲೇಖಕರು : **ಜಯದೇವಪ್ಪ ಜೈನಕೇರಿ**
ಪುಟ : xvi + ೨೬೪ ಬೆಲೆ : ರೂ. ೨೦೦
ಪ್ರಕಾಶನ : **ಶಾಂತಲಾ ಪ್ರಕಾಶನ**, ಶಿವಮೊಗ್ಗ.

**ಕ**ರ್ನಾಟಕದ ಸಂಸ್ಕೃತಿಯು ಎಲ್ಲ ಕಾಲದಲ್ಲೂ ವಿಶಿಷ್ಟವಾಗಿಯೇ ಕಾಣುತ್ತದೆ. ಯಾವುದೇ ರಾಜಮನೆತನದ ಆಳ್ವಿಕೆಯಿದ್ದರೂ ಸಾಹಿತ್ಯ, ಕಲೆ ನಿರಂತರ ಪ್ರೋತ್ಸಾಹ ಪಡೆದಿವೆ. ರಾಜಮನೆತನ ಆಶ್ರಯಿಸಿದ್ದ ಧರ್ಮವನ್ನು ಆಧರಿಸಿ, ಇಡಿಯಾಗಿ ನಾಡಿನ ಧರ್ಮವನ್ನು ಗೊತ್ತುಪಡಿಸಲು ಸಾಧ್ಯವಿಲ್ಲ. ಗಂಗರು ಮತ್ತು ರಾಷ್ಟ್ರಕೂಟರು ಜೈನ ಧರ್ಮೀಯರಾದರೂ ಎಲ್ಲ ಧರ್ಮಗಳನ್ನು ಗೌರವಿಸಿದರು ಮತ್ತು ಪ್ರೋತ್ಸಾಹಿಸಿದರು. ವಾಸ್ತು ಮತ್ತು ಮೂರ್ತಿಶಿಲ್ಪಗಳ ಮೂಲಕ ನಮ್ಮ ಪ್ರಾಚೀನರು ಚಿರಂಜೀವಿಗಳಾಗಿದ್ದಾರೆ. ಆಸ್ತಿಕರನ್ನು ಮಾತ್ರವಲ್ಲದೆ ನಾಸ್ತಿಕರನ್ನೂ, ವಿಚಾರವಾದಿಗಳನ್ನೂ ಈ ಸಂಸ್ಕೃತಿ ಪೋಷಿಸಿದೆ; ಬೆಳೆಸಿದೆ. ಪ್ರಶ್ನೆ ಕೇಳುವ ಮನೋಧರ್ಮಕ್ಕೆ ಕರ್ನಾಟಕ ಸಂಸ್ಕೃತಿ ಎಂದೂ ಚ್ಯುತಿ ತಂದಿಲ್ಲ. ಇಲ್ಲದಿದ್ದರೆ ಈ ನೆಲದಲ್ಲಿ ಬಸವಣ್ಣ ಹುಟ್ಟುತ್ತಿರಲಿಲ್ಲ. ಇಂತಹ ನಾಡಿನ ಸಂಸ್ಕೃತಿಯನ್ನು ಐತಿಹ್ಯಗಳ ಸರಮಾಲೆಯಲ್ಲೇ ಕಟ್ಟಿಹಾಕುವುದು ಸರಿಯಲ್ಲ. ಐತಿಹ್ಯಗಳ ಬೆನ್ನುಹತ್ತಿ ಇತಿಹಾಸದ ಜಾಡನ್ನು ಪತ್ತೆಹಚ್ಚಿ ನಡೆದುಹೋಗಿರುವ ಘಟನೆಗಳು ಮತ್ತು ಈ ಮೂಲಕ ಅಂದಿನ ವಿಚಾರಧಾರೆಯನ್ನು ಕೇವಲ ವಿದ್ವಾಂಸರಿಗೆ ಮಾತ್ರವಲ್ಲದೆ, ತಮ್ಮನ್ನು ತಾವು ಸಾಮಾನ್ಯರು ಎಂದು ತಿಳಿದುಕೊಳ್ಳುವ ಪ್ರೀತಿ ಮತ್ತು ವಿಶ್ವಾಸಗಳನ್ನಷ್ಟೇ ನಂಬಿ ಬದುಕುವ ಜನರಿಗೂ ತಿಳಿಸಬೇಕಾದ್ದು ಧರ್ಮ. ಮೂಢನಂಬಿಕೆಗಳ ಕೆಸರಿನಿಂದ ರಾಡಿಯಾಗಿರುವ ತಿಳುವಳಿಕೆಗಳನ್ನು ಹಸನುಗೊಳಿಸಿ ಜನರಿಗೆ ತಿಳಿಸಿದರೆ, ಸತ್ಯದ ಶಿಲ್ಪದ ಮೇಲೆ ಹರಡಿಕೊಂಡಿರುವ ಪರದೆ ಮರೆಯಾಗುತ್ತದೆ. ಇಂತಹ ಕೆಲಸವನ್ನು ಇತಿಹಾಸ ಬಲ್ಲವರು ಮಾತ್ರವೇ ಮಾಡಬೇಕು ಎಂಬ ನಿಬಂಧನೆಯನ್ನು ಯಾವುದೇ ಸಂವಿಧಾನ ಹೇರಿಲ್ಲ. ಜನರಿಗೆ ಅವರವರ ನೆಲದ ಇತಿಹಾಸ ಮತ್ತು ಸಂಸ್ಕೃತಿಯ ಬಗ್ಗೆ ಸ್ಪಷ್ಟ ತಿಳುವಳಿಕೆ ನೀಡುವುದು ಯಾವುದೇ ಪ್ರಜ್ಞಾವಂತನ ಕರ್ತವ್ಯ. ಇತಿಹಾಸದ ಬಗ್ಗೆ ಇತಿಹಾಸಕಾರನೇ ತಿಳಿಸಬೇಕು; ಸಾಹಿತ್ಯದ ಬಗ್ಗೆ ತಿಳಿಸಲು ಸಾಹಿತ್ಯದ ಅಧ್ಯಾಪಕನೇ ಆಗಿರಬೇಕು; ವಿಜ್ಞಾನವು ಕೇವಲ ವಿಜ್ಞಾನಿಗಳ ಸ್ವತ್ತು ಎಂದೆಲ್ಲ ಭಾವಿಸುವುದು ಮೂರ್ಖತನ ಎನಿಸುತ್ತದೆ. ಪ್ರತಿಯೊಂದು ಒಳ್ಳೆಯ ವಿಷಯವನ್ನು ತಿಳಿಯಲು ಮತ್ತು ಅದನ್ನು ತಮ್ಮದನ್ನಾಗಿ ಮಾಡಿಕೊಳ್ಳಲು ಎಲ್ಲರಿಗೂ ಹಕ್ಕಿದೆ. ಸುಲಭವಾಗಿ ದಕ್ಕುತ್ತದೆ ಮತ್ತು ಅನುಸರಣೆಗೆ ಕಷ್ಟವಿಲ್ಲ ಎನಿಸುವ ಯಾವುದೇ ಕೆಟ್ಟದ್ದನ್ನು ನಿರಾಕರಿಸುವುದೂ ಸಂಸ್ಕೃತಿಯ ಒಂದು ಭಾಗ. ನಾಗರಿಕ ಬದುಕಿನಲ್ಲಿ ಸಂಸ್ಕೃತಿ ದಿಕ್ಕು ತಪ್ಪುತ್ತಿರುವ ವಿಚಾರ ಎಂತಹವರನ್ನಾದರೂ ಆತಂಕಕ್ಕೆ ಗುರಿ ಮಾಡುತ್ತದೆ. ಇಂತಹ ಸಂದರ್ಭದಲ್ಲಿ ನಮ್ಮ ಸಂಸ್ಕೃತಿಯ ಕುರುಹುಗಳನ್ನು ಪರಿಚಯಿಸಿಕೊಳ್ಳುವುದರ ಮೂಲಕ ಸಂಸ್ಕೃತಿಯು ಪೂರ್ಣ ಹಾಳಾಗದಂತೆ ಸಂರಕ್ಷಿಸಲು ಸಾಧ್ಯವಾಗುತ್ತದೆ. ಸಾಹಿತ್ಯ ಕೃತಿಗಳು, ವಾಸ್ತು ನಿರ್ಮಿತಿಗಳು, ಶಿಲ್ಪಗಳು, ಸಂಗೀತ, ಚಿತ್ರಕಲೆ, ನೃತ್ಯ ಇತ್ಯಾದಿ ಕಲಾಪ್ರಕಾರಗಳು ನಮ್ಮ ಪ್ರಾಚೀನರ ಆಸಕ್ತಿ ಮತ್ತು ಅಭಿರುಚಿಗಳ ಸಂಕೇತವಾಗಿವೆ. ಇವುಗಳ ಸಂರಕ್ಷಣೆಯತ್ತ ವರ್ತಮಾನದಲ್ಲಿ ಎಚ್ಚರ ವಹಿಸದಿದ್ದರೆ, ನಮ್ಮ ಮುಂದಿನ ಪೀಳಿಗೆಯ ತಿಳಿಸಲು ಏನೂ ಉಳಿದಿರುವುದಿಲ್ಲ. ಮುಂದಿನ ಪೀಳಿಗೆಯವರ ಮುಂದೆ ನಾವು ಅಪರಾಧಿ ಸ್ಥಾನದಲ್ಲಿ ನಿಲ್ಲಬೇಕಾಗುತ್ತದೆ. ಉಳಿದಿರುವ ಎಲ್ಲ ಒಳ್ಳೆಯ ವಿಚಾರಗಳನ್ನು ಉಳಿಸುವುದರ ಮೂಲಕ ಮುಂದಿನ ಪೀಳಿಗೆಯ ಆಯ್ಕೆಗೆ ಹಲವು ದಾರಿಗಳನ್ನು ಉಳಿಸ ಬಹುದು. ಒಳ್ಳೆಯದನ್ನು ಉಳಿಸಿಕೊಂಡು ಬೆಳೆಸಿದರೆ, ಭವಿಷ್ಯ ಸುಂದರವೂ, ಅರ್ಥಪೂರ್ಣವೂ ಆಗಿರುತ್ತದೆ. ಇಲ್ಲವಾದರೆ ಪಾತಾಳದತ್ತ ಇಣುಕಿ ನೋಡಬೇಕಾಗುತ್ತದೆ.

ಸ್ಮಾರಕಗಳ ಸಂರಕ್ಷಣೆಯತ್ತ ಕೆಲವರಿಗಾದರೂ ಪ್ರೀತಿ ಇದೆ ಎನ್ನುವುದು ಸಂತೋಷದ ವಿಷಯ. ಅಂತಹ ಒಬ್ಬ ಸ್ಮಾರಕಾಸಕ್ತರು ಶಿವಮೊಗ್ಗೆಯ ಜಯದೇವಪ್ಪ ಜೈನಕೇರಿ. ಈಗಾಗಲೇ ಒಂಭತ್ತು ಕೃತಿಗಳನ್ನು ಪ್ರಕಟಿಸಿ, ಈಗ ಹತ್ತನೆಯ ಕೃತಿಯನ್ನು ನಮ್ಮ ಮುಂದಿಟ್ಟಿದ್ದಾರೆ. ಪ್ರವಾಸಪ್ರಿಯರಾದ ಜಯದೇವಪ್ಪನವರಿಗೆ ತಮ್ಮ ಪ್ರವಾಸದ ಅನುಭವಗಳನ್ನು ಅಚ್ಚುಕಟ್ಟಾಗಿ ದಾಖಲಿಸಬಲ್ಲ ಸಾಮರ್ಥ್ಯವಿದೆ. ತಮ್ಮ ಪ್ರವಾಸ ಕಥನಗಳನ್ನು ದಿನಚರಿಯಂತೆ ದಾಖಲಿಸದೆ, ವಿವರಪೂರ್ಣ ಲೇಖನವಾಗಿ ಅಭಿವ್ಯಕ್ತಿಸುವ ಕ್ರತುಶಕ್ತಿ ಜಯದೇವಪ್ಪನವರಿಗಿದೆ. ಆದ್ದರಿಂದಲೇ ಅವರ ಈವರೆಗಿನ ಎಲ್ಲ ಕೃತಿಗಳೂ ಕೇವಲ ಓದಿಗಷ್ಟೇ ಸೀಮಿತಗೊಳ್ಳದೆ, ಅಧ್ಯಯನಕ್ಕೂ ಪ್ರೇರಣೆ ನೀಡುವ ಶಕ್ತಿ ಪಡೆದಿವೆ.

**ಡಾ|| ಎಚ್. ಎಸ್. ಗೋಪಾಲ ರಾವ್**

'ಕರ್ನಾಟಕ ಶಿಲ್ಪ - ಸಂಸ್ಕೃತಿ' (ನಾ ಕಂಡ ದೇಗುಲಗಳು) ಕೃತಿಯು ೫೩ ವಿವಿಧ ನೆಲೆಗಳಲ್ಲಿರುವ ದೇವಾಲಯಗಳು ಮತ್ತು ಅವುಗಳಿಗೆ ಹೊಂದಿಕೊಂಡಂತೆ ಇರುವ ಶಿಲ್ಪಗಳನ್ನು ಕುರಿತ ೪೪ ಲೇಖನಗಳ ಪರಿಚಯಾತ್ಮಕ ಲೇಖನಗಳ ಸಂಕಲನವಾಗಿದೆ. ಜೊತೆಗೆ ಸ್ಮಾರಕಗಳು, ಮತ್ತು ಸಂಶೋಧನೆಯನ್ನು ಕುರಿತಂತೆಯೂ ಮೂರು ಪ್ರತ್ಯೇಕ ಲೇಖನಗಳಿವೆ.

ಸ್ಮಾರಕಗಳ ಬಗ್ಗೆ ಜಯದೇವಪ್ಪನವರಿಗಿರುವ ಕಾಳಜಿಯು ಈ ಕೃತಿಯಲ್ಲಿಯ ಅವರದೇ ಒಂದು ಲೇಖನದಿಂದ ತಿಳಿಯುತ್ತದೆ. ಸ್ಮಾರಕಗಳ ಶೋಚನೀಯ ಸ್ಥಿತಿ ಎಂಬ ಲೇಖನದಲ್ಲಿ **'ಕೆಲವು ದೇವಾಲಯಗಳ ಸಮುಚ್ಚಯಗಳು ಸಂಪೂರ್ಣ ನಿರ್ಲಕ್ಷಿಸಲ್ಪಟ್ಟು ಕಸಕಡ್ಡಿಗಳಿಂದ ಮಲಮೂತ್ರಗಳಿಂದ ಆವೃತವಾಗಿವೆ. ಸ್ಮಾರಕಗಳ ಗೋಡೆಗಳು, ನೆಲ, ಗರ್ಭಗುಡಿಗಳು ಸ್ವಚ್ಛತೆ ಇಲ್ಲದೆ ಭಯಾನಕವಾಗಿ, ಪ್ರವಾಸಿಗರ ವೀಕ್ಷಣೆಗೂ ಅವಕಾಶವಿಲ್ಲದಂತಾಗಿದೆ. ವಿಶಾಲವಾದ ದೇವಾಲಯದ ಪ್ರಾಚೀನ ಸ್ಮಾರಕಗಳ ಅಂಗಳಗಳು, ಸ್ಥಳೀಯ ಕ್ರಿಕೆಟ್ ಆಟದ ಮೈದಾನವಾಗಿ ಅಕ್ರಮ ಕಟ್ಟೋಣಗಳಿಂದ ಅನೈತಿಕ ಚಟುವಟಿಕೆಗಳ ತಾಣವಾಗುತ್ತಿರುವುದು ನಮ್ಮ ಕಾಲಘಟ್ಟದ ಒಂದು ವಿಪರ್ಯಾಸ'** ಎಂದು ದಾಖಲಿಸಿದ್ದಾರೆ. ಇದು ಕನ್ನಡಿಗರ ನಿರ್ಲಕ್ಷ್ಯ, ನಿರಾಸಕ್ತಿ, ಅಜ್ಞಾನ, ಅಭಿಮಾನ ಶೂನ್ಯತೆಗಳಿಂದಾಗಿ ಎನ್ನುವುದು ಜಯದೇವಪ್ಪನವರ ಅಳಲು. ಈ ಮಾತು ಕೇವಲ ಕನ್ನಡಿಗರಿಗಷ್ಟೇ ಅಲ್ಲ, ಇಡೀ ಮಾನವ ಕುಲಕ್ಕೇ ಅನ್ವಯಿಸುವಂತಹುದು. ಪ್ರಾಚೀನವಾದ ಎಲ್ಲವೂ ಶ್ರೇಷ್ಠ ಪವಿತ್ರ ಎನ್ನುವ ವೈಭವೀಕರಣದ ಮಾತು ಒಂದೆಡೆಯಾದರೆ, ಮತ್ತೊಂದೆಡೆ ಹಳೆಯದೆಲ್ಲ ವ್ಯರ್ಥ, ಅರ್ಥ ಕಳೆದುಕೊಂಡಿವೆ ಎನ್ನುವ ನಿರಾಸಕ್ತಿಯ ಮಾತೂ ಕೇಳಿಬರುತ್ತದೆ. ಈ ಎರಡೂ ಅಭಿಪ್ರಾಯಗಳು ತಪ್ಪು; ನಮ್ಮ ಪ್ರಾಚೀನರ ಸಾಧನೆಯ ಗುರುತಾಗಿ ಸ್ಮಾರಕಗಳು ಉಳಿದಿವೆ. ಅವು ಸಂಸ್ಕೃತಿಯ ಗುರುತುಗಳು; ನಮ್ಮ ಪ್ರಾಚೀನರು ನಮಗಾಗಿ ಉಳಿಸಿಹೋಗಿರುವ ಆಸ್ತಿ ಎಂದು ತಿಳಿದರೆ ಸಾಕು. ಆಗ ಅವುಗಳ ರಕ್ಷಣೆ ಮತ್ತು ಸಂರಕ್ಷಣಾಕಾರ್ಯ ಯಾವ ಆತಂಕವೂ ಇಲ್ಲದೆ ನಡೆಯುತ್ತದೆ. ಇನ್ನು ಮುಂದಾದರೂ ಸ್ಮಾರಕಗಳ ನಾಶವನ್ನು ತಡೆಯುವ ಕೆಲಸ ಆಗುತ್ತದೆ.

ದೇವಾಲಯಗಳನ್ನು ಕುರಿತು ಪರಿಚಯಾತ್ಮಕ

ಲೇಖನಗಳನ್ನು ಬಹುತೇಕ ಎಲ್ಲ ಪತ್ರಿಕೆಗಳೂ ಪ್ರಕಟಿಸುತ್ತಲೇ ಇರುತ್ತವೆ. ಇಂತಹ ಲೇಖನಗಳು ಅಂದಂದಿನ ಓದುಗರಿಗೆ ಒಂದಿಷ್ಟು ವಿಷಯ ತಿಳಿಸಿ ಮರೆಯಾಗುತ್ತವೆ. ವಿಷಯ ಪರಿಣತರಿಗೆ ಇಂತಹ ಲೇಖನಗಳು ಅಪಥ್ಯ. ಪರಿಣತರಲ್ಲದವರಿಗೆ ಏನೋ ಒಂದು ಕಥೆ. ಆದ್ದರಿಂದಲೇ ಕಥೆ, ಕಾದಂಬರಿಗಳಿಗಿರುವಷ್ಟು ಓದುಗರು ಇಂತಹ ಕೃತಿಗಳಿಗೆ ಇರುವುದಿಲ್ಲ. ಓದುವವರಿಲ್ಲ ಎಂದು ಪರಿಚಯವನ್ನೂ ಮಾಡದಿದ್ದರೆ ಬಲ್ಲವರ ಬೋಧವಾಗುತ್ತದೆ. ಬಲ್ಲವರು ಪರಿಚಯ ಮಾಡಿಸಬೇಕು. ಪರಿಣತರು ಚರ್ಚಿಸಿ, ವಿಶ್ಲೇಷಿಸಿ ಅಯಾ ಸ್ಮಾರಕಗಳ ಮಹತ್ವವನ್ನು ತಿಳಿಸಬೇಕು. ಆಗ ಕೈಬೆರಳುಗಳಲ್ಲಿ ಎಣಿಸಬಹುದಾದಷ್ಟು ಆಸಕ್ತರಿದ್ದರೂ ಸ್ಮಾರಕಗಳು ಉಳಿಯುತ್ತವೆ. ಈ ನಿಟ್ಟಿನಲ್ಲಿ ಜಯದೇವಪ್ಪ ಜೈನಕೇರಿಯವರ ಲೇಖನಗಳು ಸಫಲವಾಗುವ ಶಕ್ತಿ ಪಡೆದಿವೆ. ಪರಿಣತರಲ್ಲದ ಆಸಕ್ತರಿಗೆ ಹೊರೆ ಆಗದಂತೆ, ಆಸಕ್ತ ವಿದ್ವಾಂಸರ ಅಭಿಪ್ರಾಯಗಳಿಗೆ ಧಕ್ಕೆ ಬಾರದಂತೆ ವಿಷಯಗಳನ್ನು ನಿರೂಪಿಸಿರುವುದು ಜಯದೇವಪ್ಪನವರ ವೈಶಿಷ್ಟ್ಯ.

ಜಯದೇವಪ್ಪ ಜೈನಕೇರಿಯವರು ಪರಿಚಯಿಸಿರುವ ೫೩ ಸ್ಥಳಗಳ ಪೈಕಿ ಹೆಚ್ಚಿನ ಸಂಖ್ಯೆಯ ದೇವಾಲಯಗಳು ಶಿವಮೊಗ್ಗ ಜಿಲ್ಲೆಗೇ ಸೇರಿವೆ. ಇದು ಕಾಕತಾಳೀಯವಲ್ಲ. ಜಯದೇವಪ್ಪನವರಿಗೆ ಸಹಜವಾಗಿಯೇ ತಮ್ಮ ಜಿಲ್ಲೆಯ ಐತಿಹಾಸಿಕ ಸ್ಮಾರಕಗಳ ಬಗ್ಗೆ ವಿಶೇಷವಾದ ಆದರ ಮತ್ತು ಮಮತೆ ಇದೆ. ಜೊತೆಗೆ ಬಿಡುವು ದೊರೆತಾಗ ಸುಲಭವಾಗಿ ಕ್ಷೇತ್ರಕಾರ್ಯ ಮಾಡಿ ಮಾಹಿತಿಗಳನ್ನು ಸಂಗ್ರಹಿಸುವುದೂ ಸಾಧ್ಯ. ದೂರದ ಸ್ಥಳಗಳಿಗೆ ಹೋಗುವುದು ಸುಲಭವಲ್ಲವಾದರೂ ಅನಿವಾರ್ಯ. ಆದ್ದರಿಂದ ಸಹಜವಾಗಿಯೇ ಇಲ್ಲಿ ಶಿವಮೊಗ್ಗ ಜಿಲ್ಲೆಯ ಹೆಚ್ಚು ದೇವಾಲಯಗಳ ಪರಿಚಯ ಆಗಿದೆ. ಜಯದೇವಪ್ಪನವರು ಕ್ಷೇತ್ರಕಾರ್ಯ ಮಾಡದೆ ಯಾವುದೇ ದೇವಾಲಯ ಮತ್ತು ಅಲ್ಲಿನ ಶಿಲ್ಪಗಳನ್ನು ಪರಿಚಯಿಸಿಲ್ಲ. ಇದಕ್ಕೊಂದು ಉದಾಹರಣೆ ಇಲ್ಲಿದೆ: **'ಬಹುಪಾಲು ನಾಶವಾದ ದೇವಾಲಯವನ್ನು ಸೌಂದರ್ಯಪ್ರಜ್ಞೆ, ಕಲೆಯ ವಾಸ್ತುಶೈಲಿಯ ಪ್ರಜ್ಞೆ ಇಲ್ಲದವರಂತೆ ಸಂರಕ್ಷಣಾ ಕಾರ್ಯ ನಡೆಸಿರುವ ಕೇಂದ್ರ ಪುರಾತತ್ವ ಇಲಾಖೆಯವರು ನೀಲಿ ಬೋರ್ಡು ಸ್ಥಾಪಿಸಿ ಒಬ್ಬ ಕಾವಲುಗಾರನನ್ನು ನೇಮಿಸಿದ್ದಾರೆ.'** (ಪು. ೧೭೦). ಹಾಗೆಯೇ **'ಹೊರನೋಟಕ್ಕೆ ಇಲ್ಲಿನ ಶಿಲ್ಪಕಲಾ ನೈಪುಣ್ಯ ನಮ್ಮ ಆಸಕ್ತಿಯನ್ನು ಕೆರಳಿಸಿತು. ಮುಂಭಾಗ ತೆರೆದ ಮುಖಮಂಟಪದಲ್ಲಿ ಹಳ್ಳಿಯ ಹಲವರು ಅಲ್ಲಲ್ಲಿ ಬಿಸಿಲಿನ ತಾಪ ತಡೆಯಲಾರದೆ ನಿ ಮಾಡುತ್ತಿದ್ದರು. ಇನ್ನೂ ಕೆಲವರು ಇಸ್ಪೀಟು ಆಡುತ್ತಿದ್ದರು.'** (ಪು. ೧೬೬) ಇದರಿಂ ಲೇಖಕರು ವಿಷಯ ಸಂಗ್ರಹಣೆ ಮಾಡಿ, ಖುದ್ದು ಸಂದರ್ಶಿಸಿ ಲೇಖನಗಳ ಸಿದ್ಧಪಡಿಸಿದ್ದಾರೆ ಎಂಬುದು ಸ್ಪಷ್ಟವಾಗುತ್ತದೆ. ಕ್ಷೇತ್ರಕಾರ್ಯದ ಸಮಯದಲ್ಲಿ ಸ್ಥಳೀಯರ ಕಂಡ ಆಸಕ್ತಿ ಮತ್ತು ನಿರಾಸಕ್ತಿಯ ಬಗ್ಗೆಯೂ ಜೈನಕೇರಿ ತಿಳಿಸಿದ್ದಾರೆ.

ಇಂತಹ ಲೇಖನಗಳ ಪ್ರಾಬಲ್ಯ ಮತ್ತು ದೌರ್ಬಲ್ಯಗಳೆಂದರೆ ಅವು ದಾಖಲಿಸು ವಸ್ತುನಿಷ್ಠ ವಿಚಾರಗಳು ಮತ್ತು ವೈಭವೀಕರಿಸುವ ಐತಿಹ್ಯದ ಮಾತುಗಳು. ಈ ವಿಚಾರದ ಜೈನಕೇರಿಯವರು ಸಮತೋಲನ ಕಾಯ್ದುಕೊಂಡಿದ್ದಾರೆ. ದೇವಾಲಯಗಳನ್ನು ದೇ ಸನ್ನಿಧಿ ಇರುವ ಪೂಜಾ ಕೈಂಕರ್ಯದ ಸ್ಥಳಗಳನ್ನಾಗಿ ದಾಖಲಿಸದೆ, ಸ್ಮಾರಕಗಳನ್ನು ನಮ ಪ್ರಾಚೀನರ ಸಾಧನೆಯ ಪ್ರತೀಕಗಳಾಗಿ ಪರಿಚಯಿಸಿರುವುದು ವಿಶೇಷ.

ಜಯದೇವಪ್ಪ ಜೈನಕೇರಿಯವರ ಅಭಿಪ್ರಾಯಗಳಿಗೆ ನಾಡಿನ ಹಿರಿಯ ಪುರಾತತ್ವಜ್ಞ ಡಾ ಅ. ಸುಂದರ ಅವರ ಒಮ್ಮತ ಇದೆ. ಕರ್ನಾಟಕದ ದೇವಾಲಯಗಳನ್ನು ಪರಿಚಯಿಸು ಉದ್ದೇಶ ಹೊಂದಿರುವ ರಾಜ್ಯದ ಪ್ರವಾಸೋದ್ಯಮ ಇಲಾಖೆಯು ಇಂತಹ ಕೃತಿಗ ಮೂಲಕವೂ ವಿಷಯಗಳನ್ನು ಸಂಗ್ರಹಿಸಲು ಅವಕಾಶಗಳಿವೆ. ಕೇವಲ ಕೇಂದ್ರ ಮತ್ತ ರಾಜ್ಯ ಸರ್ಕಾರಗಳ ಪುರಾತತ್ವ ಇಲಾಖೆಗಳಿಂದ ಸಂರಕ್ಷಿತಗೊಂಡಿರುವ ದೇವಾಲಯಗಳ ಮತ್ತು ಮುಜರಾಯಿ ಇಲಾಖೆಯ ದೇವಾಲಯಗಳೇ ಅಲ್ಲದೆ, ಬೆಳಕಿಗೇ ಬಾರದ ಇನ್ ಅನೇಕ ದೇವಾಲಯಗಳು ಮತ್ತು ಶಿಲ್ಪಗಳನ್ನು ಜಯದೇವಪ್ಪನವರು ಅಥವಾ ಅವರಂತಹ ಆಸಕ್ತರು ಮಾಡಿದರೆ ಇತಿಹಾಸ ಮತ್ತು ಸಂಸ್ಕೃತಿಯ ಆಸಕ್ತರಿಗೆ ಮಾಹಿತಿ ಲಭ್ಯವಾಗುತ್ತದೆ.

**ಡಾ|| ಎಚ್. ಎಸ್. ಗೋಪಾಲ ರಾವ್**
೧೪೪, 'ಸ್ವಸ್ತಿಶ್ರೀ ಸ್ಕಂದ', ಐ.ವೈ.ಡಿ. ರಸ್ತೆ, ಅರಸಿನಕುಂಟೆ, ನೆಲಮಂಗಲ ತಾಲ್ಲೂಕು
ಬೆಂಗಳೂರು ಗ್ರಾಮಾಂತರ ಜಿಲ್ಲೆ - ೫೬೨ ೧೨೩

*(೪೭ನೇ ಪುಟದಿಂದ)* ***ಪ್ರಸಕ್ತ ಶಿಕ್ಷಣ ನೀತಿಯ ಹುಳುಕುಗಳು ಮತ್ತು ಭಾರತದ ಯುವಪೀಳಿಗೆ***

ರೀತಿಯಲ್ಲಿವೆ. ಮುಸ್ಲಿಂ ಲೀಗ್ ಒಂದು ಕೋಮುವಾದಿ ಸಂಘಟನೆಯೆಂದು ಸರಿಯಾಗಿ ಹೇಳುವ ಈ ಪಠ್ಯಪುಸ್ತಕಗಳು ಅದೇ ರೀತಿಯಲ್ಲಿ ಆರೆಸ್ಸೆಸ್ ಕೂಡ ಒಂದು ಕೋಮುವಾದಿ ಸಂಘಟನೆಯೆಂದು ಹೇಳುವುದೇ ಇಲ್ಲ. ಇತಿಹಾಸದ ವಿಷಯಗಳಲ್ಲಿ ಮತ್ತು ಹಿಂದಿ ಸಾಹಿತ್ಯದಲ್ಲಿ ಮುಸ್ಲಿಮರನ್ನು ಮತ್ತು ಕ್ರೈಸ್ತರನ್ನು ಋಣಾತ್ಮಕವಾಗಿ ಚಿತ್ರಿಸಲಾಗಿದೆ. ಬ್ರಾಹ್ಮಣ ಸಮುದಾಯಕ್ಕೆ ಅನಗತ್ಯ ಪ್ರಾಮುಖ್ಯತೆಯನ್ನು ನೀಡಲಾಗಿದೆ.

ಜಾತಿ ತಾರತಮ್ಯ, ವರ್ಗಭೇದಗಳ ವಿಷಯಕ್ಕೆ ಬಂದರೆ ರಾಜ್ಯ ಸರಕಾರಗಳ ಪುಸ್ತಕಗಳೂ ಸೇರಿದಂತೆ ಯಾವೊಂದು ಪಠ್ಯಪುಸ್ತಕವೂ ಸರಿಯಾಗಿಲ್ಲ. ಇವುಗಳಲ್ಲಿ ಅನುಚಿತ, ಅಸಭ್ಯ ಹಾಗೂ ಕೆಲವೊಮ್ಮೆ ಅವಮಾನಕರ ಅಂಶಗಳೂ ಕಂಡುಬಂದಿವೆ. ಶ್ರೇಷ್ಠ ವರ್ಗಗಳ ಮತ್ತು ಪುರುಷಪ್ರಧಾನ ದೃಷ್ಟಿಕೋನದಿಂದ ಬರೆದಂತಹ ಈ ಪುಸ್ತಕಗಳಲ್ಲಿ ಭಾರತದ ಗ್ರಾಮಗಳು, ದಲಿತರು, ಆದಿವಾಸಿಗಳು, ಕಾರ್ಮಿಕರು, ಮಹಿಳೆಯರು ಮುಂತಾದ ವಿಷಯಗಳ ಕುರಿತು ಸಾಕಷ್ಟು ಪ್ರಾಮುಖ್ಯತೆಯನ್ನು ನೀಡಲಾಗಿಲ್ಲ. ಸರಕಾರಿ ಪಠ್ಯಪುಸ್ತಕಗಳು ಕೂಡ ಧಾರ್ಮಿಕ, ಪ್ರಾದೇಶಿಕ ಮತ್ತು ಲಿಂಗ ಪಕ್ಷಪಾತಗಳನ್ನು ಒಂದು ಸೂಕ್ಷ್ಮವಾದ ರೀತಿಯಲ್ಲಿ ಮುಂದುವರಿಸಿಕೊಂಡು ಹೋಗುತ್ತಿವೆ.

ಇಂತಹ ಕೊಳಕು ಪಠ್ಯಪುಸ್ತಕಗಳು ಅಸಂಬದ್ಧ ಮತ್ತು ನಿರಾಧಾರ ವಿಷಯಗಳನ್ನು, ಅಲ್ಲಲ್ಲಿ ಹೆಸರಿಗೆ ಮಾತ್ರ ಕೆಲವೊಂದು ಸತ್ಯಾಂಶಗಳನ್ನು ಸೇರಿಸಿ ವೈಜ್ಞಾನಿಕ ಗುಣಮಟ್ಟವನ್ನೂ ಶಿಕ್ಷಣದ ಪಾಂಡಿತ್ಯದ ಮಟ್ಟವನ್ನೂ ತಗ್ಗಿಸುವುದರಿಂದ ಅಂತಿಮವಾಗಿ ದೇಶದ ಭವಿಷ್ಯಕ್ಕೆ ಅಪಾರ ಹಾನಿ ಸಂಭವಿಸುತ್ತದೆ. ಸಂವಿಧಾನದ ಆಶಯವಾಗಿರುವ ಸಾರ್ವಭೌಮ, ಸಮಾಜವಾದಿ, ಜಾತ್ಯತೀತ, ಗಣತಾಂತ್ರಿಕ ಭಾರತವನ್ನು ನಾಶಪಡಿಸುವಂತಹ ಈ ಅತ್ಯಂತ ಅಪಾಯಕಾರಿ ಬೆಳವಣಿಗೆಗಳನ್ನು ಸಾಧ್ಯವಾದಷ್ಟು ಶೀಘ್ರವಾಗಿ ತಡೆಗಟ್ಟಬೇಕಾಗಿದೆ.

ನಮ್ಮ ಮಕ್ಕಳಿಗಾಗಿ ಉತ್ತಮ ಪಠ್ಯಪುಸ್ತಕಗಳನ್ನು ತಯಾರಿಸುವ ಚಾರಿತ್ರಿಕ ಜವಾಬ್ದಾರಿ ನಮ್ಮದಾಗಿದೆ. ನಮ್ಮ ಮಕ್ಕಳ ಭವಿಷ್ಯ ನಿಂತಿರುವುದು ಸಾಂಸ್ಕೃತಿಕ ವೈವಿಧ್ಯತೆಗೆ ಗೌರವ ತೋರಿಸುವಲ್ಲಿ. ಈ ದೇಶದಲ್ಲಿರುವ ವಿವಿಧ ಸಾಮಾಜಿಕ, ಆರ್ಥಿಕ ಮತ್ತು ಭಾಷಿಕ ಗುಂಪುಗಳು ರಾಷ್ಟ್ರದ ಬಳುವಳಿಯನ್ನು ಸಮಾನವಾಗಿ ಹಂಚಿಕೊಳ್ಳುವವರೆಂಬುದನ ಗುರುತಿಸಿ ಅದಕ್ಕೆ ಬದ್ಧರಾಗುವಲ್ಲಿ ನಮ್ಮ ಪಠ್ಯಪುಸ್ತಕಗಳು ಈ ಬಹುಮುಖ್ಯ ಅಂಶವನ ಮತ್ತೊಮ್ಮೆ ಖಡಾಖಂಡಿತವಾಗಿ ದೃಢೀಕರಿಸಬೇಕು. ಭಾರತೀಯ ಸಮಾಜದ ಸಮ್ಮಿಳಿ ಮತ್ತು ಬಹುತ್ವ ಸಂಸ್ಕೃತಿಯ ಸ್ವಭಾವವನ್ನು ಬಹಳ ದೃಢವಾಗಿ, ಶಕ್ತಿಯುತವಾಗಿ ಒ ಹೇಳಬೇಕು. ಮತ್ತು ಭಾರತದ ವಿವಿಧ ಸಂಸ್ಕೃತಿಗಳ, ಸಂಪ್ರದಾಯಗಳ ನಡುವಿನ ಕೊಡುಕೊಳ್ಳುವಿಕೆಗಳು, ಅದರ ಬಹು ಜನಾಂಗ, ಬಹು ಧರ್ಮಗಳ ಗುಣ ಅದರಲ್ಲಿರುವಂತಹ ಧಾರ್ಮಿಕ ಮತ್ತಿತರ ಬಿರುಕುಗಳು ಮತ್ತು ಅದರ ವೈಜ್ಞಾನಿಕ ವೈಚಾರಿಕ, ಆಧ್ಯಾತ್ಮಿಕ ಹಾಗೂ ಧಾರ್ಮಿಕ ಸಂಪ್ರದಾಯಗಳ ಕುರಿತು ತಿಳಿಸಬೇಕು.

ಭಾರತೀಯ ಸಮಾಜದಲ್ಲಿ, ವಿಶೇಷವಾಗಿ ಕರಾವಳಿ ಜಿಲ್ಲೆಗಳಲ್ಲಿ ಕಂಡುಬರುತ್ತಿರುವ ಇತ್ತೀಚಿನ ಸಮಸ್ಯೆಗಳ ಒಂದು ಪ್ರಧಾನ ಮೂಲ ಇಂತಹ ದೋಷಯುಕ್ತ ಪಠ್ಯಕ್ರಮ ಮತ್ತು ಪಠ್ಯಪುಸ್ತಕಗಳಲ್ಲಿದೆಯೆಂದು ದೃಢವಾಗಿ ನಿಸ್ಸಂದೇಹವಾಗಿ ಹೇಳಬಹುದು. ನಮ್ಮ ಸಂಸದರು ಭವಿಷ್ಯದ ಪೀಳಿಗೆಗಳ ಕುರಿತು ಆಳವಾಗಿ ಚಿಂತಿಸಬೇಕಾಗಿದೆ. ಕೇಂದ್ರ ಶಿಕ್ಷಣ ಸಲಹಾ ಮಂಡಳಿಯ ಸಮಿತಿ ೨೦೦೫ರಲ್ಲಿ ನೀಡಿರುವ ಶಿಫಾರಸುಗಳನ್ನು ಅತ್ಯಂತ ತುರ್ತಾಗಿ ಅನುಷ್ಠಾನಕ್ಕೆ ತರಬೇಕಾಗಿದೆ. ಪ್ರಪ್ರಥಮವಾಗಿ ಕೇಂದ್ರದಲ್ಲಿ 'ರಾಷ್ಟ್ರೀಯ ಪಠ್ಯಪುಸ್ತಕ ಮಂಡಳಿ' ಮತ್ತು ರಾಜ್ಯಗಳಲ್ಲಿ 'ರಾಜ್ಯ ಪಠ್ಯಪುಸ್ತಕ ಮಂಡಳಿ' ಎನ್ನುವ ನಿಯಂತ್ರಣ ಪ್ರಾಧಿಕಾರಗಳನ್ನು ರಚಿಸಿ ಅವಕ್ ಸೂಕ್ತ ಅಧಿಕಾರ ನೀಡಬೇಕಾಗಿದೆ. ೨೦೦೯ರ ಮಹಾಚುನಾವಣೆಗಳ ಸಂದರ್ಭದ ದೇಶದ ತುರ್ತು ಅಗತ್ಯಗಳಲ್ಲೊಂದಾದ ದೋಷಯುಕ್ತ ಶಿಕ್ಷಣನೀತಿಯ ಬಗ್ಗೆ ಕನಿಷ ಒಬ್ಬ ರಾಜಕಾರಣಿಯ ಕ್ಷೀಣ ಧ್ವನಿಯಾದರೂ ಕೇಳಿಸಿದೆಯೇ ?

ಆಧಾರ : ಕೇಂದ್ರ ಶಿಕ್ಷಣ ಸಲಹಾ ಮಂಡಳಿಯ ವರದಿ-೨೦೦೫, 'ಕಮ್ಯೂನಲಿಸಂ ಕಾಂಬ್ಯಾಟ್', ಏಪ್ರಿಲ್, ೨೦೦೯

**ಸುರೇಶ್ ಭಟ್ ಬಾಕ್ರಬೈಲ್**
೨-೧೦--೭೭೬, ಬಿಜೈ, ಮಂಗಳೂರು - ೫೭೫ ೦೦೪

# ಭಾಗವತ ಸಂಪ್ರದಾಯ ಮತ್ತು ಹೆಳವನಕಟ್ಟೆ ಗಿರಿಯಮ್ಮ

**ಹೆಳವನಕಟ್ಟೆ ಗಿರಿಯಮ್ಮನ ಹಾಡು ಹಾಗೂ ರಚನೆಗಳು ಪಾರಮಾರ್ಥ ಎನ್ನುವ ಅಲೌಕಿಕ ಪರಿಕಲ್ಪನೆಗಳಿಗಿಂತ ಭಿನ್ನವಾದ ತಳಹದಿಯನ್ನು ಹೊಂದಿವೆ. ರಚನೆಗಳಲ್ಲಿ ಕಾಣುವ ವರ್ಣನೆಗಳೆಲ್ಲ ಕಾಲ್ಪನಿಕವಾಗದೆ, ಪೌರಾಣಿಕವಾಗದೆ ಸಜೀವ ಸಾಂಸಾರಿಕ ಚಿತ್ರಗಳಾಗಿರುವುದು ಅವುಗಳ ವೈಶಿಷ್ಟ್ಯವಾಗಿದೆ. ಪ್ರತಿಯೊಂದು ರಚನೆಯಲ್ಲೂ ಕಾಣುವ ವಿರಹ-ಸಂಕಷ್ಟ, ರತಿ-ವ್ಯಥೆ, ವಾದ-ಸಂವಾದ, ಜಾತಿ-ವಿಜಾತಿಗಳು ಒಂದು ವಿಶಾಲ ಅರ್ಥವನ್ನು ಪಡೆದುಕೊಳ್ಳುತ್ತವೆ. ಶೃಂಗಾರ-ಭೋಗಗಳು ಕಂಡರೂ ಅವು ಸ್ವಾರ್ಥವಾಗದ ನಿಷ್ಕಾಮ ನೆಲೆಗಟ್ಟಿನ ಮೇಲೆ ನಿಲ್ಲುತ್ತವೆ.**

## ಡಾ॥ ಡಿ. ಮೀನಾಕ್ಷಿ

ಭಕ್ತಿ ಪಂಥಕ್ಕೆ ಸೇರಿದ ಕನ್ನಡ ಕವಯಿತ್ರಿಯರಲ್ಲಿ ಹೆಳವನಕಟ್ಟೆ ಗಿರಿಯಮ್ಮನಿಗೆ ಪ್ರಮುಖ ಸ್ಥಾನವಿದೆ. ಆಕೆಯ ಹುಟ್ಟೂರು ಧಾರವಾಡ ಜಿಲ್ಲೆಯ ರಾಣೆಬೆನ್ನೂರು. ತಂದೆ ಬಿಷ್ಟಪ್ಪ ಜೋಯಿಸ. ದಾವಣಗೆರೆ ಜಿಲ್ಲೆಯ ಹರಿಹರ ತಾಲ್ಲೂಕಿನ ಮಲೆಬೆನ್ನೂರು ಶ್ಯಾನುಭೋಗ ತಿಪ್ಪರಸನೊಡನೆ ಆಕೆಯ ವಿವಾಹವಾಗಿತ್ತು. ಆಕೆ ಯಾವಾಗಲೂ ದೈವೋನ್ಮಾದ ಸ್ಥಿತಿಯಲ್ಲಿರುತ್ತಿದ್ದ ಭಾವುಕಳಾದ್ದರಿಂದ ಸಾಮಾನ್ಯ ಸ್ತ್ರೀಯರಂತೆ ಸಂಸಾರದ ಸುಖವನ್ನು ಬಯಸದೆ ದೇವರನಾಮ ಸಂಕೀರ್ತನೆ ಮತ್ತು ಕಾವ್ಯರಚನೆಯಲ್ಲಿ ತನ್ನ ಜೀವನಸಾರ್ಥಕ್ಯವನ್ನು ಕಂಡುಕೊಂಡಳು. ಗಿರಿಯಮ್ಮನ ಜೀವಿತ ಕಾಲವನ್ನು ಖಚಿತವಾಗಿ ತಿಳಿಸುವ ದಾಖಲೆಗಳಾವುವೂ ಇಲ್ಲ. ಪ್ರಮುಖ ಹರಿದಾಸರಲ್ಲಿ ಒಬ್ಬರಾದ ಗೋಪಾಲದಾಸರು ಮತ್ತು ಮಂತ್ರಾಲಯ ಮಠದ ಸುಮತೀಂದ್ರಸ್ವಾಮಿಗಳು ಗಿರಿಯಮ್ಮನ ಹಿರಿಯ ಸಮಕಾಲೀನರಾಗಿದ್ದರು ಎಂದು ತಿಳಿಸುವ ಐತಿಹ್ಯಗಳಿವೆ. ಈಕೆಯ ಕೃತಿಗಳ ಮೇಲೆ ಲಕ್ಷ್ಮೀಶ ಕವಿಯ ಪ್ರಭಾವ ವಿರುವುದು ಸ್ಪಷ್ಟವಿದೆ. ಈ ಆಧಾರಗಳಿಂದ ಹೆಳವನಕಟ್ಟೆ ಗಿರಿಯಮ್ಮ ಕ್ರಿ.ಶ. ೧೭೦೦-೫೦ರ ಸುಮಾರಿನಲ್ಲಿ ಜೀವಿಸಿದ್ದಿರಬಹುದೆಂದು ಹೇಳಬಹುದು.

ಗಿರಿಯಮ್ಮ ಭಾಗವತ ಸಂಪ್ರದಾಯದ ಒಂದು ಮನೆತನಕ್ಕೆ ಸೇರಿದವಳು. ಆಕೆ ಹರಿದಾಸ ಪಂಥಕ್ಕೆ ಸೇರಿದ ಸಂತಳಾದರೂ ಹರಿಹರ ಪ್ರಾಂತದ ವೈಶಿಷ್ಟ್ಯವೋ ಎಂಬಂತೆ ಹರಿ-ಹರರಲ್ಲಿ ಭೇದವನ್ನೆಣಿಸದ ಸದ್ಭಕ್ತೆ. ಆಕೆ ಹೆಳವನಕಟ್ಟೆಯ ರಂಗನಾಥನಲ್ಲದೆ ತನ್ನ ತವರೂರಿನ ಮನೆದೇವರಾದ ಮೈಲಾರಲಿಂಗ, ಹರಿಹರ ತಾಲ್ಲೂಕು ಕೊಕ್ಕನೂರು ಆಂಜನೇಯ, ಶಿವಮೊಗ್ಗ ಜಿಲ್ಲೆಯ ಹಿಳ್ಳಂಗಿರಿಯ ರಂಗನಾಥ, ದಾಗಿನಕಟ್ಟೆಯ ನರಸಿಂಹಸ್ವಾಮಿ ದೇವರುಗಳನ್ನು ಕುರಿತು ಸಹ ಕೀರ್ತನೆಗಳನ್ನು ರಚಿಸಿದ್ದಾಳೆ. ಭಕ್ತಿ, ತಪಸ್ಸುಗಳಿಂದ ಪರಿಪಕ್ವಗೊಂಡ ಆಕೆಯ ಹೃದಯದಿಂದ ಕಾವ್ಯದೇವಿ ಪ್ರಕಟವಾದಳು. ಆಕೆಯ ವಾಣಿಯಿಂದ ಸುಮಧುರ ದೇವರನಾಮಗಳು, ಸರಸ ಕವಿತೆಗಳು ಸತತವಾಗಿ ಹೊರಹೊಮ್ಮಿದವು. ಉದ್ದಾಳಿಕನ ಕಥೆ, ಬ್ರಹ್ಮ ಕೊರವಂಜಿ, ಶಂಕರ ಗಂಡನ ಹಾಡು, ಚಂದ್ರಹಾಸನ ಕಥೆ, ಲವ-ಕುಶರ ಕಾಳಗ, ಕೃಷ್ಣ-ಕೊರವಂಜಿ ಇವು ಗಿರಿಯಮ್ಮನಿಂದ ರಚಿತವಾದ ಕಥನಕಾವ್ಯಗಳು. ಕೊನೆಯ ಎರಡು ಕಾವ್ಯಗಳು ಈವರೆಗೆ ಅಪೂರ್ಣವಾಗಿ ಮಾತ್ರ ಲಭ್ಯವಿವೆ. 'ಸೀತಾಕಲ್ಯಾಣ' ಮದುವೆ ಸಮಾರಂಭಗಳಲ್ಲಿ ಹಾಡುವ ಉರುಟಣೆ ಪದಗಳ ಸಂಗ್ರಹ. ಇವಲ್ಲದೆ ಹೆಳವನಕಟ್ಟೆ ರಂಗ ಎಂಬ ಹೆಸರಿನಲ್ಲಿ ಆಕೆ ಅನೇಕ ಕೀರ್ತನೆಗಳನ್ನು ರಚಿಸಿದ್ದಾಳೆ.

ಇಡೀ ದಾಸ ಪರಂಪರೆಯಲ್ಲಿ ತುಂಬಾ ವಿಭಿನ್ನವಾದ ವ್ಯಕ್ತಿತ್ವ ಗಿರಿಯಮ್ಮನದು. ಭಕ್ತಿಪಂಥದ ಮಹಿಳೆಯರ ಬಗ್ಗೆ ಎರಡು ರೀತಿಯ ವ್ಯಾಖ್ಯಾನಗಳು ಸಾಮಾನ್ಯವಾಗಿ ದೊರೆಯುತ್ತವೆ. ಒಂದು, ಪತಿವ್ರತೆ ಮತ್ತು ಮಹಾತ್ಯಾಗಿ ಎನ್ನುವ ವೈಭವೀಕೃತ ವ್ಯಾಖ್ಯಾನ. ಇನ್ನೊಂದು, ಮಹಿಳೆಯರು ತುಂಬಾ ಬಂಡಾಯಗಾರ್ತಿಯರು ಎನ್ನುವುದು. ಈ ಎರಡೂ ನೆಲೆಗಳಿಗಿಂತ ಭಿನ್ನವಾದ ನಡವಳಿಕೆ ಹೆಳವನಕಟ್ಟೆ ಗಿರಿಯಮ್ಮನದು. ಸಾಂಪ್ರದಾಯಿಕ ಕುಟುಂಬಗಳಲ್ಲಿ ಪ್ರತಿಭಟನೆ ಹಾಗೂ ಪ್ರತ್ಯೇಕತೆಗಳಿಗಿಂತ ಅನಿವಾರ್ಯ ಹೊಂದಾಣಿಕೆಗಳು ಮುಖ್ಯವಾಗುತ್ತವೆ. ತನ್ನತನವನ್ನು ಉಳಿಸಿಕೊಳ್ಳಲು ಗಿರಿಯಮ್ಮ ಇಂಥ ಹೊಂದಾಣಿಕೆಯನ್ನು ಮಾಡಿಕೊಂಡು ವಿಶಿಷ್ಟವಾಗಿ ಉಳಿಯುತ್ತಾಳೆ. ಅವಳ ಕುರಿತ ಅಧ್ಯಯನವೆಂದರೆ ಅದೊಂದು ಭಾಗವತ ಪರಂಪರೆಯ ಬಹುಳತೆಯ ಅಧ್ಯಯನವಾಗಿದೆ ಎನ್ನುವುದು ವಿಶೇಷ.

ಗಿರಿಯಮ್ಮನ ಕಾವ್ಯನಿರ್ಮಿತಿ ಶಕ್ತಿಗೆ ಬದುಕಿನ ವಿವಿಧ ಸ್ತರಗಳ ಗಟ್ಟಿಗೊಂಡ ಜೀವನಾನುಭವವೇ ಪ್ರಮುಖವಾದದ್ದು. ಹರಿಹರರಲ್ಲಿ ಭೇದವೆಣಿಸದ ಗಿರಿಯಮ್ಮ ತನ್ನ ಸುತ್ತಣ ಪರಿಸರದ ಬಹುತ್ವ ಸಂಸ್ಕೃತಿಯನ್ನು ಮೈಗೂಡಿಸಿಕೊಂಡಾಕೆ. ವೈಷ್ಣವ ಧರ್ಮದ ಆಚಾರ-ವಿಚಾರಗಳೊಂದಿಗೆ ಅನ್ಯಧರ್ಮದ ದೇವರು ಹಾಗೂ ಅನುಭವಗಳನ್ನು ಪ್ರತ್ಯಕ್ಷವಾಗಿ ಪಡೆದಾಕೆ.

ಕನ್ನಡದ ದಾಸ ಪರಂಪರೆಯಲ್ಲಿ ಕನಕ-ಪುರಂದರರ ಬಗ್ಗೆ ಹೆಚ್ಚಿನ ಅಧ್ಯಯನಗಳು ನಡೆದಿವೆ. ಆದರೆ ಹೆಳವನಕಟ್ಟೆ ಗಿರಿಯಮ್ಮ, ಹರಪನಹಳ್ಳಿ ಭೀಮವ್ವ, ಗಲಗಲಿ ಅವ್ವ ಇಂಥ ಮಹಿಳಾ ದಾಸಕಾರ್ತಿಯರ ಬಗ್ಗೆ ಗಂಭೀರ ಅಧ್ಯಯನ ನಡೆದಿಲ್ಲವೆಂದೇ ಹೇಳಬೇಕು. ಗಿರಿಯಮ್ಮ ಗಂಭೀರ ಅಧ್ಯಯನಕ್ಕೊಳಪಡಬೇಕಾದ ಕೀರ್ತನಕಾರ್ತಿಯಾಗಿದ್ದಾಳೆ. ಆಕೆ ಕೀರ್ತನಕಾರ್ತಿ ಮಾತ್ರವಲ್ಲ, ಅವಳ ಬದುಕಿನಲ್ಲಿ ನಡೆದ ಘಟನೆಗಳು, ರಚಿಸಿದ ಕೃತಿಗಳು, ವೈವಿಧ್ಯಗಳು ಅವಳೊಬ್ಬ ಧೀಮಂತ ಹಾಗೂ ಸಾತ್ವಿಕ ಮೌನ ಪ್ರತಿಭಟನಾಕಾರ್ತಿ ಎಂಬುದನ್ನು ಸಾಬೀತು ಪಡಿಸುತ್ತವೆ. ಗಿರಿಯಮ್ಮನ ಕೀರ್ತನೆಗಳಲ್ಲಿ ಭಕ್ತಿ ನೀತಿ ಆತ್ಮೋನ್ನತಿಯಂಥ ಆಧ್ಯಾತ್ಮ ವಿಚಾರಗಳಿವೆ. ಆತ್ಮಶೋಧನೆಯೊಂದಿಗೆ ಆತ್ಮನಿವೇದನೆಯೂ ಎದ್ದುಕಾಣುತ್ತದೆ.

ಗಿರಿಯಮ್ಮನಲ್ಲಿ ತತ್ವ ಜಡವಾದ ಭಕ್ತಿಯ ಆವೇಗಕ್ಕಿಂತ ಕ್ರಿಯಾಶೀಲವಾದ ಸಾರ್ವಕಾಲಿಕ ಜೀವನ ಮೌಲ್ಯಗಳ ಸ್ಫುಟವಿವೆ. ಸಾಂಸಾರಿಕ ಕಾಳಜಿ, ಕೂಡುಕುಟುಂಬದ ಸಂವೇದನೆಗಳು. ಆದರ್ಶ ಎನ್ನುವುದಕ್ಕಿಂತ ಪ್ರಾಯೋಗಿಕ ಹಾಗೂ ಸಮಕಾಲೀನವಾದ ಹೆಣ್ತನದ ಸಾತ್ವಿಕತೆಗಳನ್ನು ಕಾಣುತ್ತೇವೆ. ವೈದಿಕ ಪರಂಪರೆಯಲ್ಲಿ ಅಪರೂಪ ಎನ್ನಬಹುದಾದ ವ್ಯಕ್ತಿತ್ವ ಗಿರಿಯಮ್ಮನದಾಗಿದೆ. ಬದುಕಿನ ಬಗೆಗಿನ ಗಂಭೀರ ಜಿಜ್ಞಾಸೆ ಆಕೆಯ ಎಲ್ಲ ಕೃತಿಗಳಲ್ಲೂ ಎದ್ದು ಕಾಣುತ್ತದೆ. ಸಾಂಪ್ರದಾಯಿಕ ಮೌಢ್ಯ, ಜಾತಿ ಪದ್ಧತಿ, ಮೂಢ ನಂಬಿಕೆಗಳು ಮುಂತಾದ ಜಡ ಆಚಾರಗಳನ್ನು ಮೀರಿ ಹಾಗೂ ಅವುಗಳನ್ನು ಮುರಿದು ಕಟ್ಟುವಲ್ಲಿ ಗಿರಿಯಮ್ಮ ವಿಶೇಷವಾಗಿ ಕಾಣುತ್ತಾಳೆ. ತನ್ನ ಸಾಧನೆಗೆ ಕಾಲ್ತೊಡರಾಗುವ ಸಾಂಪ್ರದಾಯಿಕ ಸಾಂಸಾರಿಕ ನೆಲೆಗಳನ್ನು ಧಿಕ್ಕರಿಸುವ ಅವಳ ಸಾತ್ವಿಕ ಸಿಟ್ಟು ಯಾವತ್ತೂ ಒಣ ಅಹಂಕಾರವಾಗಿ ಕಾಣುವುದಿಲ್ಲ. ಅದು ಬೊಬ್ಬಿಡುವ ಬಂಡಾಯವೂ ಅಲ್ಲ, ಒಪ್ಪಿಕೊಳ್ಳುವ ಹತಾಶೆಯೂ ಅಲ್ಲ, ಅವೆರಡನ್ನೂ ಮೀರಿದ ಸಾಧಕ ನೆಲೆಯದ್ದು.

**ಕೃತಿಗಳ ಅಂತರಾಳ**

ಗಿರಿಯಮ್ಮನ ಕೃತಿ ಹಾಗೂ ಹಾಡುಗಳ ಮುಖ್ಯ ಭಾವ ಭಾಗವತ. ಹಾಗಂತ ಇದು ಬರೀ ತತ್ವ ಜಡವಾದ, ತೀರ ಸಾಂಪ್ರದಾಯಿಕವಾದ್ದೂ ಅಲ್ಲ; ತುಂಬಾ ಪ್ರಗತಿಪರ ಎನಿಸುವ ಪ್ರಾಯೋಗಿಕ ಸ್ವರೂಪದ್ದು. ಅವು ಸಿದ್ಧಾಂತಗಳಿಗಿಂತ ಜೀವನಾನುಭವ ಪ್ರಧಾನವಾದ ರಚನೆಗಳಾಗಿವೆ. ಗಿರಿಯಮ್ಮನ ರಚನೆಗಳಲ್ಲಿ ಕಾಣುವ ಮುಖ್ಯ ಶಕ್ತಿ ಕೃಷ್ಣಭಕ್ತಿ, ಅದೂ ಕೃಷ್ಣನ ಶೃಂಗಾರ ಪ್ರಧಾನ ನಡವಳಿಕೆಗಳು. ರುಕ್ಮಿಣಿ-ಸತ್ಯಭಾಮೆಯೊಂದಿಗಿನ ಸಾಂಸಾರಿಕ ತೊಡಕುಗಳು, ಗಿರಿಯಮ್ಮನ ರಚನೆಗಳ ಹಿಂದಿನ ಮುಖ್ಯ ನೆಲೆಗಳಾಗಿವೆ.

ಕೃಷ್ಣ-ಕೊರವಂಜಿ ಕುರಿತು ಭಾಗವತ ಭಕ್ತಿ ಸಂಪ್ರದಾಯದಲ್ಲಿ ಬಹುಶಃ ಗಿರಿಯಮ್ಮನಷ್ಟು ಹಾಡಿದವರು ಬೇರೊಬ್ಬರಿಲ್ಲ ಎನಿಸುತ್ತದೆ. ಬ್ರಹ್ಮ-ಕೊರವಂಜಿ, ಪಾರಿಜಾತದ ಕಥೆ, ಅಜಾಮಿಳನ ಕಥೆ, ಕೃಷ್ಣ-ಕೊರವಂಜಿ ಇಂಥ ಭಾಗವತ ಸಂಪ್ರದಾಯದ ಪ್ರಮುಖ ಕಥೆಗಳೆಲ್ಲವೂ ಗಿರಿಯಮ್ಮನಲ್ಲಿ ಬರೀ ಭಕ್ತಿ ಅಥವಾ ಪೌರಾಣಿಕ ಸಂಗತಿಗಳಾಗದೆ ನಿಜ ಬದುಕಿನ ಬೇಗುದಿಗಳಾಗಿ ಮೂಡಿಬಂದಿವೆ. 'ಕೊರವಂಜಿ' ಎನ್ನುವ ಪಾತ್ರವೇ ಸ್ವಭಾವತಃ ಅಲೆಮಾರಿ ಹಾಗೂ ಜಾತಿಶ್ರೇಣಿಯಲ್ಲಿ ಕೀಳು ಕುಲವನ್ನು ಪ್ರತಿನಿಧಿಸುವಂಥದ್ದು. ಭಾಗವತ ಸಂಪ್ರದಾಯದ ಶ್ರೀ ಕೃಷ್ಣ ಪಾರಿಜಾತದಲ್ಲಿ ಕಾಣುವ ಕೊರವಂಜಿ ಕೀಳು



# ಸಂಡೂರಿನ ಬೆಟ್ಟಗಳಲ್ಲಿ

'ಅವರು'..............
ಹೋಗಿ ಇನ್ನೂ ಬಹಳ ಹೊತ್ತಾಗಿಲ್ಲ
ಮೂಡಿಬಿಟ್ಟಿವೆ ಆಗಲೇ
ಹೆಜ್ಜೆ ಗುರುತುಗಳ ಮೇಲೆ
ರಕ್ಕಸ ಯಂತ್ರಗಳ ಚಕ್ರಗಳು
ಉರುಳಿದ ಗುರುತು !!

ಉಸುರಿದ ಮನುಜ ಪ್ರೇಮದ
ನಾದ ಪ್ರತಿಧ್ವನಿಸುವ ಮುನ್ನ
ಸಿಡಿದುಬಿಟ್ಟಿವೆ
ಅಪ್ಪ-ಅವ್ವನೆದೆಯ ಬಂಡೆಗಲ್ಲುಗಳು !!

ತಿರುಗುವ ಯಂತ್ರಗಳ ಚಕ್ರಗಳಿಗೆ
ಹರಕು ಸೀರೆ - ಪಂಚೆಗಳು ಸಿಕ್ಕು
ರಕ್ತ ಕಾರಿ ಪ್ರಾಣಬಿಟ್ಟವರು
ಎಷ್ಟೋ ಜನ : ನಿನ್ನೆ, ಮೊನ್ನೆ
ಮತ್ತು ಇವತ್ತು ಬೆಳಿಗ್ಗೆ !!

ಬೆಟ್ಟಗಳ ಮೇಲಿಂದ
ಬುದ್ಧನ ನಗೆಯ ಕದ್ದುಬರುವ
ಚುಕ್ಕಿ ಚಂದ್ರಮರಿಗೂ ಟಿ.ಬಿ.ಕಾಯಿಲೆ
ಕೆಮ್ಮಿ ಕೆಮ್ಮಿ ಉದುರಿದವರೆಷ್ಟೋ
ಊರುಬಿಟ್ಟು, ಕೇರಿಬಿಟ್ಟು
ದೇಶಬಿಟ್ಟು, ಲೋಕಬಿಟ್ಟವರೆಷ್ಟೋ !!

ಕೊರೆವ ಚಳಿಗೆ
ಮೈ ಕಾಯಿಸಿಕೊಳ್ಳುತಿಹರು
ಯಾರೋ
ಒಲೆಗೆ ಹಾಕಿ ಚರಕ ಕೋಲು !!
ಕೆಮ್ಮುವ ಬಾಯಿ,
ಕೂಗು ಹಾಕುವ ಬಾಯಿಗಳಲ್ಲಿ
ಯಾರೋ ತುರುಕಿದ ರೊಕ್ಕ
ಉಸಿರುಗಟ್ಟಿ ಸತ್ತವರೆಷ್ಟೋ

ನಗ್ಗಿ ನಗ್ಗಾದ ಸಿಲವಾರ ತಾಟಿನ
ತುಂಬ ಗರಿ ಗರಿ ನೋಟು
ಹಸಿದ ಒಡಲುಗಳ ಮುಂದೆ !
ಹಸಿವು
ಕಡಲಾಗಿ
ತೇಲಿಹೋದವರೆಷ್ಟೋ

ಸುರಿದ ಮಳೆಗೆ ಇಳೆಯು ನಾಚಿ
ಕೆಂಪಾಗಿ ಹರಿದುಬಂದ
ರಂಗುರಂಗಿನ ನೀರಲ್ಲವದು
ತಾಯಿ ಪಾರ್ವತಿ ತನ್ನೊಡಲ
ರಕ್ತ ಕೇಳಿದಳೆಂದು
'ಕುಮಾರ' ಕಾರಿದ
ರಕುತವಲ್ಲವದು

ಅದಿರು
ಅಗೆದ ನನ್ನವರ ಬೆವರು
ನೆತ್ತರು
ಹರಿದುಬಂದ ಪರಿಯಿದು !!

ಹಸಿದ ಒಡಲು
ಉಕ್ಕುತಿರಲು
ಕುರುಡನಾದನೆ ದೇವ ?

ಭುವಿಯ ಒಡಲು
ಸಿಡಿಯುತಿರಲು
ಕಿವುಡನಾದನೆ ಗಂಡಿ ನರಸಿಂಹ ?

ಕಣ್ಣು - ಮೂಗು - ಬಾಯಿ - ಕಿವಿ
ತುಂಬಾ ರೊಕ್ಕ
ಮಾತು ಹೋಗಿ - ಮೌನವಾಗಿ
ದೇವಾನುದೇವರೆಲ್ಲಾ
ಕಲ್ಲಾದವೋ !!

ತೆರೆದ ಕಣ್ಣಿಗೆ ಮಣ್ಣು ತೂರಿ
ಕಾಣದಾಯಿತೋ ಊರು ಕೇರಿ !!

ಯಾವ ಕಲ್ಲು ಬೇಡಲಿ ನಾನು
ನನ್ನವರ ಉಸಿರಿಗಾಗಿ ?

ಯಾವ ಗಣಿಯ ಅಗೆಯಲಿ ನಾನು
ನನ್ನವರ ಜೀವ ಉಳಿಸಲು ?

ಯಾವ ಗಣಿಯ ಎದೆಯ ಬಗೆಯಲಿ ನಾನು
ನನ್ನವರ ಜೀವ ಉಳಿಸಲು ?

**ಬಿ. ಶ್ರೀನಿವಾಸ**
ಶಿರಸ್ತೇದಾರ್, ಜಿಲ್ಲಾ ನ್ಯಾಯಾಲಯ, ಹಾವೇರಿ

ಕುಲದವಳಾದರೂ ವಿದ್ಯೆ ಬುದ್ಧಿಯಲ್ಲಿ ಅಸಾಮಾನ್ಯಳು, ಲೋಕಜ್ಞಾನಿ; ರುಕ್ಮಿಣಿ- ಕೃಷ್ಣ-ಸತ್ಯಭಾಮೆಯರ ನಡುವೆ ಹುಟ್ಟಿದ ಸಾಂಸಾರಿಕ ಬಿಕ್ಕಟ್ಟುಗಳನ್ನು ಉಪಾಯವಾಗಿ ಬಗೆಹರಿಸುವಂಥವಳು. ದೇವಪುರುಷನಾದ ಕೃಷ್ಣನ ದಾಂಪತ್ಯದ ತಲ್ಲಣಗಳನ್ನು ಊರಾಡುವ ಕೊರವಿಯೊಬ್ಬಳು ಸಮರ್ಥವಾಗಿ ನಿಭಾಯಿಸುವ ರೀತಿ ವಿಸ್ಮಯವಾದದ್ದು.

ಕೊರವಿ ಹುಟ್ಟಿನಕೂಟ ಧರೆಗೆ ಚಾಪದ ನೋಟ
ಗುಲಗಂಜಿ ಸರಗಳು ಎದೆಯಲ್ಲಿ ಅಲೆಯುತ
ಮಲಿಗಂಟ ಬಿಗುದಾಳ ಮಲುಹಾಕಿ
....................................
ಏಯವ್ವಾ ಏಯಕ್ಕಾ ಏಯಮ್ಮಾ ಬಾರೆಂದು
ಸಾರುತ ನಡೆದಾಳ ಕೊರವಂಜಿ
................................
ಅಂಜದಿರು ಅಂಜದಿರು ಕುಂಜಲೋಚನಿ
ಮಂಜು ತಿಳಿದಂತೆ
ನಿನ್ನಂಜಿಕೆ ಪರಿಹಾರ ....

– ಕೊರವಂಜಿಯ ವೇಷಭೂಷಣ ಹಾಗೂ ಸ್ವಭಾವವನ್ನು ಹೇಳುವ ಈ ಹಾಡು ಗಮನಾರ್ಹವಾದುದು. ಕೊರವಿಯ ಕುಲ-ಜಾತಿ ಹಾಗೂ ವೃತ್ತಿಯನ್ನು ಯಾವುದೇ ಅತಿಶಯಗಳಿಲ್ಲದಂತೆ ಗಿರಿಯಮ್ಮ ಕಟ್ಟಿಕೊಡುತ್ತಾಳೆ. 'ಬ್ರಹ್ಮ-ಕೊರವಂಜಿಯಲ್ಲಿ' ಕಾಣುವ ಕೊರವಂಜಿ ಕೂಡ ಇದಕ್ಕೆ ಭಿನ್ನಳಲ್ಲ. ಇಲ್ಲಿನ ಕೊರವಂಜಿ ಕಂಸನ ಸೆರೆಮನೆಯಲ್ಲಿದ್ದ ದೇವಕಿಗೆ ಕೃಷ್ಣ ಕಥೆಯನ್ನು ಹೇಳುತ್ತಾಳೆ. ಅವಳು ಕೂಡ :

ಮನೆ ಬಾಗಿಲುಗಳ ಮುಂದೆ ನಿಂತು
ವನದ ಕೋಗಿಲೆಯಂತೆ ಯವ್ವಾ ಯವ್ವಾ ಎನುತ
ವಿನಯದ ಸ್ವರಗೈವ ಕೊರವಿಯ ಕಂಡು
ವನಿತೆ ದೇವಕಿ ಸನ್ನೆಮಾಡಿ ಕರೆದಳು.

ಕೇವಲ ಇಪ್ಪತ್ತೊಂದು ಪದ್ಯಗಳಲ್ಲಿ ಇಡೀ ಭಾಗವತವನ್ನೇ ಗಿರಿಯಮ್ಮ ಕಣ್ಣಿಗೆ ಕಟ್ಟುವಂತೆ ಬ್ರಹ್ಮ-ಕೊರವಂಜಿಯಲ್ಲಿ ಚಿತ್ರಿಸಿಕೊಟ್ಟಿದ್ದಾಳೆ. ಈ ಹಾಡುಗಬ್ಬದ ಕೊನೆಯ ಪದ್ಯ ತುಂಬ ಕುತೂಹಲಕರವಾದ್ದು :

ಹಿತದವರ್‍ಯಾರಿಲ್ಲ ಎನಗಿಂತ ಹಿರಿಯರು ಸತಿಯರು
ಕೊರಮಗುಂಟು
ಮತಿವಂತೆ ನೀ ಎನ್ನ ಮನ್ನಿಸಿ ಕಳುಹವ್ವ
ಪತಿಯಾಜ್ಞೆಗಳುಂಟು
ಬಹಳ ಹೊತ್ತಾಯಿತು. ಬೈದಾಳು ಸವತಿಯ ಆಳುವ
ಕೊರವನ ಹೀನ
ಬಾಲನ ನೆತ್ತಿಗೆ ಎಣ್ಣೆಯ ನೆರೆಯವ್ವ ವೀಳ್ಯವ
ಕೊಡುಯೆನಗೆ.

ಗಿರಿಯಮ್ಮ ಮುಖ್ಯವಾಗಿ ಕಾಣುವುದೇ ಇಂಥ ಅಂತಃಕರಣಯುಕ್ತ ನೆಲೆಗಳಲ್ಲಿ. ಊರಾಡುವ ಕೊರವಿಗೂ ಗಂಡ-ಮಕ್ಕಳು ಹಾಗೂ ಸಮಯದ ಬಗೆಗಿರು ಕಾಳಜಿಗಳು ಕುತೂಹಲಕರವಾಗಿವೆ. ಬದುಕಿಗಾ ಬೀದಿಗಿಳಿದ ಹೆಣ್ಣನ್ನು ಅದೂ ಭಿಕ್ಷೆ ಎತ್ತುವ ಕೆಳಕುಲ ಸ್ತ್ರೀಯರನ್ನು ವ್ಯಭಿಚಾರಿಗಳನ್ನಾಗಿ ಕಾಣುವ ಸಾಮಾಜಿ ಸನ್ನಿವೇಶದಲ್ಲಿ ವೃತ್ತಿನಿರತ ಹೆಣ್ಣುಗಳ ಬದುಕಿನ ತಲ್ಲ ಹಾಗೂ ಬದ್ಧತೆಗಳನ್ನು ಇಷ್ಟೊಂದು ಸೊಗಸಾ ಕಟ್ಟಿಕೊಟ್ಟವರಿಲ್ಲ ಎನಿಸುತ್ತದೆ.

ಕಥೆ ಕೃಷ್ಣನದಾದರೂ, ಸಂಪ್ರದಾ ಭಾಗವತದ್ದಾದರೂ, ಗಿರಿಯಮ್ಮ ಕಟ್ಟಿಕೊಡುವ ಸ್ಥಳೀ ಸಾಂಸ್ಕೃತಿಕ ಸೊಗಡು ಅನುಪಮವಾದ್ದು. ''ಬಾಲನ ನೆತ್ತಿ ಎಣ್ಣೆಯನೆರೆಯವ್ವ ವೀಳ್ಯೆವ ಕೊಡುಯೆನಗೆ'' ಎನ್ನು ಪದ್ಯದ ಕೊನೆಯ ಸಾಲಂತೂ ಇಂದಿ ನವನಾಗರಿಕತೆಯಲ್ಲಿ ಕಳೆದುಕೊಂಡು ಹುಡುಕುತ್ತಿರು ಊನಗೊಂಡ ಸಾಂಸ್ಕೃತಿಕ ನೆಲೆಗಳನ್ನು ಗ್ರಹಿಕೆಗೆ ತರುತ್ತ

ಬಾಲನ ನೆತ್ತಿಗೆ ಎಣ್ಣೆ ಎರೆಯುವ, ವೀಳ್ಯೆ ಕೊಡು ಸಂಗತಿಗಳು ಸಾಂಸ್ಕೃತಿಕವಾಗಿ ಅಪಾರ ಕ್ರಿಯಾತ್ಮಕ ಅರ್ಥವ ಹೊಂದಿದಂಥವು. ಸಂಸ್ಕೃತಿ ಸಂವರ್ಧನಾ ಕ್ರಿಯೆ ಬಹುಮುಖ್ಯ ಸಂಗತಿಗಳಿವು. ಕೂಸಿನ ನೆತ್ತಿಗೆ ಎಣ್ಣೆ ಉಣಿಸು ಸಂಗತಿ ಕೂಸಿನ ಸದೃಢ ಬೆಳವಣಿಗೆ ದೃಷ್ಟಿಯಿ ಪ್ರಮುಖವಾದದು. ಎಣ್ಣೆ ಕಾಣದ ಶಿಶುವಿನ ನೆತ್ತಿಗೆ ಎ ಕೇಳುವ ಕೊರವಂಜಿ, ಬಾಯಿಚಪಲಕ್ಕೆ ವೀಳ್ಯೆ ಕೇಳು

ಕೊರವಂಜಿ, ಬೆಳ್ಳಿ-ಬಂಗಾರ-ಹಣ-ವಸ್ತ್ರ-ಒಡವೆಯಂಥ ಶ್ರೀಮಂತಿಕೆಯ ಯಾವ ವಸ್ತುಗಳನ್ನೂ ಕೇಳುತ್ತಿಲ್ಲ.

ಅಂದರೆ ಉಪಭೋಗ ಪ್ರಧಾನವಾದ ಸಾಮಾಜಿಕ ನೆಲೆಗಿಂತ ಭಿನ್ನವಾದ ಬದುಕು ದುಡಿವ ವರ್ಗದ್ದು. ಸರಳ ಹಾಗೂ ಸುಸಂಸ್ಕೃತ ಸ್ವಭಾವದ ಗಿರಿಯಮ್ಮನ ಇಲ್ಲಿನ ಆಲೋಚನೆಗಳು ಭೋಗ ಪ್ರಧಾನ ಹಾಗೂ ಅನೈಸರ್ಗಿಕ ಅಭಿವೃದ್ಧಿಯ ಸಾಮಾಜಿಕ ಚಲನೆಗಳನ್ನು ನಿರಾಕರಿಸುತ್ತವೆ. ಶ್ರಮಪ್ರಧಾನ ಸರಳ ಹಾಗೂ ನೈಸರ್ಗಿಕ ಬೆಳವಣಿಗೆಯ ಸ್ವಾನುಭವ ಸಮಾಜವೊಂದನ್ನು ನಿರ್ಮಿತಿಗೊಳಿಸಲು ಹವಣಿಸುತ್ತವೆ. ಕೊರವಿ, ಕೃಷ್ಣ ಕಥೆಯಲ್ಲಿ ಎಲ್ಲಿಯೂ ಜಾತಿಮೂಲ ಗುಣದಿಂದಾಗಿ ತಿರಸ್ಕಾರಕ್ಕೆ ಒಳಗಾಗುವುದಿಲ್ಲ ಮತ್ತು ಎಲ್ಲೂ ಕೂಡ ಅವಳ ಸಂಚಲನೆಗೆ ಅದು ಅಡ್ಡಿಪಡಿಸುವುದಿಲ್ಲ ಎನ್ನುವುದು ವಿಶೇಷ.

ಜಾತಿ ಹಾಗೂ ಜೈವಿಕ ಭೇದ ಇತ್ಯಾದಿ ಕಾರಣಗಳಿಂದಾಗಿ ಹೆಣ್ಣು ಅನಾದರಕ್ಕೆ ಭಾಜನವಾಗಿದ್ದನ್ನು ಚರಿತ್ರೆಯಲ್ಲಿ ಕಾಣುತ್ತೇವೆ. ಹಾಗೆ ಮನುಸ್ಮೃತಿಯಂಥ ವೈದಿಕ ರಚನೆಗಳನ್ನು ಮುಂದಿಟ್ಟುಕೊಂಡು ಹೆಣ್ಣು ಹಾಗೂ ಕೆಳವರ್ಗಗಳನ್ನು ತುಚ್ಛವಾಗಿ ಕಾಣಲಾಯಿತು ಎನ್ನುವ ವಾದಗಳಿವೆ. ಇಂಥ ಹೊತ್ತಲ್ಲಿ ಗಿರಿಯಮ್ಮನ ಇಂಥ ಜಾತ್ಯತೀತ ಹಾಗೂ ಲಿಂಗಾತೀತ ಆಲೋಚನೆಗಳು ಪಡೆದುಕೊಳ್ಳುವ ಅರ್ಥಗಳೇನು, ಸಾಂಪ್ರದಾಯಿಕ ನೆಲೆಗಳಿಂದ ಎದುರಿಸಿದ ಆತಂಕಗಳೇನು, ಎನ್ನುವ ಪ್ರಶ್ನೆಗಳು ಬಹು ಮುಖ್ಯವಾದಂಥವು.

ಸ್ವಭಾವತಃ ಕೊರವಂಜಿ. ಗಂಡ ಮತ್ತು ಕೈಕೂಸು (ಬಗಲಲ್ಲಿ ಕೂಸು ಹೊತ್ತ ಕೊರವಂಜಿ) ಇದ್ದ ಹೀನಕುಲದ ಹೆಣ್ಣು, ಅವಳ ವ್ಯವಹಾರಗಳು ನಡೆಯುವುದು ಹೆಂಗಸರು ಹಾಗೂ ಆ ಪ್ರವೃತ್ತಿಯ ವ್ಯಕ್ತಿಗಳೊಂದಿಗೆ. ದೇವಕಿ, ರುಕ್ಮಿಣಿ, ಸತ್ಯಭಾಮೆ ಮುಂತಾದವರು ತಮ್ಮ ವಿವಿಧ ಆತಂಕ ಹಾಗೂ ಸಮಸ್ಯೆಗಳಿಗಾಗಿ ಕೊರವಿಯನ್ನು ಆಶ್ರಯಿಸುತ್ತಾರೆ. ರುಕ್ಮಿಣಿ-ಸತ್ಯಭಾಮೆಯರಂಥ ಅರಸುಪುತ್ರಿಯರು ಹಾಗೂ ಪರಮಾತ್ಮನ ಪತ್ನಿಯರು ಗಂಡಹೆಂಡಿರ ಮಧ್ಯದ ಸೂಕ್ಷ್ಮ ಸಂಬಂಧಗಳ ಸಮಸ್ಯೆಗಳ ನಿವಾರಣೆಗೆ ಆಶ್ರಯಿಸುವುದು ಕೊರವಂಜಿಯನ್ನು –

ಮಾರನಟ್ಟು ತಾಳಲಾರೆನೆ ಮುಖದೋರನೆ ಇನ್ನೇಸು ತೆರನೆ
ತೋರಿಸಿ ಕೃಷ್ಣನ ಅಮ್ಮಯ್ಯ ಕೇಳು ದಮ್ಮಯ್ಯ ಕಂತು ಕಮಲಜನಯ್ಯ
ಬಾರದಿದ್ದರೆ ಪ್ರಾಣ ಉಳಿಯದು ಮತ್ತೆ ಅಳಿವುದು ಏನೆಂದು ತಿಳಿಯದು
(ಪದ್ಯ-೬.)

ಪಾರಿಜಾತ ಪುಷ್ಪದ ನೆಪದಿಂದ ಸತ್ಯಭಾಮೆಯಲ್ಲಿ ಹುಟ್ಟುವ ಈ ಕಳವಳ ತೀವ್ರವಾದಂಥದ್ದು. ಸಾಮಾನ್ಯವಾಗಿ ಲೌಕಿಕಾರ್ಥದಲ್ಲಿಯೂ ಹೆಣ್ಣು ತನಗಾಗುವ ತಾಪಗಳನ್ನು ಹೇಳಿಕೊಳ್ಳುವುದು ಸಮಮನಸ್ಕ ಹೆಣ್ಣಿನಲ್ಲಿಯೇ ಹೊರತು ಗಂಡಿನಲ್ಲಲ್ಲ. ಅವಳು ಗೆಳತಿ, ಸೇವಕಿ, ತಾಯಿ, ತಂಗಿ, ಯಾರ ರೂಪದಲ್ಲಾದರೂ ಇರಬಹುದು. ಅಂದಿನ ಸಾಮಾಜಿಕ ಸಂದರ್ಭದಲ್ಲಿ ದೊಡ್ಡಮನೆತನದ ಹೆಣ್ಣಿಗೆ ಹತ್ತಿರ ಇರುವ ಮನಸ್ಸುಗಳೆಂದರೆ ಸೇವಾನಿರತರಾದ ಇಂಥ ಹೆಣ್ಣುಗಳು. ಕಾದ ಕೂಡ ಅವಳ ಅನುತಾಪಕ್ಕೆ ಆಗಲಾರ.



ನವಕರ್ನಾಟಕ ಪ್ರಕಟಿಸಿರುವ ಶ್ರೀ ಶ್ಯಾಮಸುಂದರ ಶರ್ಮಾ ಅವರ 'ನಮ್ಮ ಪುಟ್ಟ ಪ್ರಯೋಗ ಶಾಲೆ' ಕೃತಿಗೆ ಕನ್ನಡ ಪುಸ್ತಕ ಪ್ರಾಧಿಕಾರ 'ಕನ್ನಡ ಪುಸ್ತಕ ಸೊಗಸು ೨೦೦೭' ಪ್ರಶಸ್ತಿ ನೀಡಿದೆ. ಉಡುಪಿಯಲ್ಲಿ ನಡೆದ ಸಮಾರಂಭದಲ್ಲಿ ನವಕರ್ನಾಟಕ ಮಂಗಳೂರು ಶಾಖೆಯ ವ್ಯವಸ್ಥಾಪಕ ಶ್ರೀ ಹರೀಶ್ ಕುಮಾರ್ ಪ್ರಶಸ್ತಿ ಸ್ವೀಕರಿಸಿದರು.

ಸ್ವಭಾವತಃ ಸಾತ್ವಿಕ ಹೆಣ್ಣಾದ ಗಿರಿಯಮ್ಮನ ಮನಸ್ಸಿಗೆ ಕೊರವಂಜಿಯಂಥ ಸಾಮಾನ್ಯ ಹೆಣ್ಣು ಆಪ್ತಳಾದ ಕಾರಣಗಳು ಗಮನಾರ್ಹ. ಸಾಧನೆಗಾಗಿ ಗಂಡ ಹಾಗೂ ಮನೆಯನ್ನೇ ತ್ಯಜಿಸುವ ಅವಳ ಧೋರಣೆಗೆ ಸಹಜವಾಗಿ ಕೌಟುಂಬಿಕ ಹಾಗೂ ಸಾಂಪ್ರದಾಯಿಕ ಪ್ರತಿಷ್ಠೆಗಳು, ಕಟ್ಟಳೆಗಳು, ಸಿಡಿಮಿಡಿಗೊಂಡಿದ್ದಿರಬಹುದು. ಏಕಾಂಗಿ ಹೆಣ್ಣಿಗೆ ಆಗಿನ ಕಾಲದಲ್ಲಿ ಸಿಗಬೇಕಾದ ಸಾಂತ್ವನಗಳು ದೊರೆತಿರಲಿಕ್ಕಿಲ್ಲ. ಸಹಜವಾಗಿ, ಕೌಟುಂಬಿಕ ವಾತಾವರಣದ ಆಚೆಗಿನ ಜಾತ್ಯತೀತ ಪರಿಸರದಿಂದ ನೋವಾದ ಅವಳ ಮನಸ್ಸಿಗೆ ಆಪ್ತತೆ ದೊರೆತಿರಬಹುದು. ಹೀಗಾಗಿ ಹಳ್ಳಿ ಬದುಕಲ್ಲಿ ಸಿಕ್ಕ ವಿಶಾಲ ಅಂತಃಕರಣ ಅವಳ ಅಭಿವ್ಯಕ್ತಿ ಹಾಗೂ ಆಲೋಚನೆಗಳನ್ನು ರೂಪಿಸುವಲ್ಲಿ ಪ್ರಧಾನ ಪಾತ್ರ ವಹಿಸಿದೆ.

ಧಗೆಯಾಗಿ ದ್ರವಗುಂದಿ ಇರುವ ಬಾವಿಯ ನೀರ
ಮೊಗೆಮೊಗೆದು ಪಾತ್ರೆಯಲಿ ನಾರಿಯರು
ಹಗಲೆಲ್ಲ ತರುತಿಹರು ಯೋಚನೆಯ ಮಾಡುತ್ತ
ಬೇಗದಿಂದಲಿ ತರಿಸೊ ವೃಷ್ಟಿಯನು ಹರಿಯೆ (ಪದ್ಯ ೨.)

– ಸಂಸಾರದ ಜವಾಬ್ದಾರಿಯಲ್ಲಿ ಹೆಣ್ಣು ವಹಿಸುವ ಪಾತ್ರ ಹಾಗೂ ಅನುಭವಿಸುವ ಸಂಕಟವನ್ನು ಈ ಪದ್ಯ ತುಂಬ ಮಾರ್ಮಿಕವಾಗಿ ಧ್ವನಿಸುತ್ತದೆ. 'ಮಳೆಯ ದಯಮಾಡೋ ರಂಗ' ಹಾಡಿನ ಈ ಸಾಲುಗಳು ಹೆಣ್ಣಿನ ಸಂಕಟ ಹೆಣ್ಣಿಗೇ ಅರ್ಥವಾಗುವ ನೆಲೆಯನ್ನು ಪ್ರತೀಕಿಸುತ್ತವೆ.

ಉದ್ದಾಳಿಕನ ಕಥೆ, ಚಂದ್ರಹಾಸನ ಕಥೆ, ಅಜಾಮಿಳನ ಕಥೆ ಮುಂತಾದ ರಚನೆಗಳು ಗಿರಿಯಮ್ಮನ ಪ್ರಬುದ್ಧ ರಚನೆಗಳಾಗಿವೆ. ಇಲ್ಲಿ ಅಸಾಂಪ್ರದಾಯಿಕ ಸಂತಾನ, ವಿಧಿಬರಹ, ವಿಲೋಮವಿವಾಹ ಮುಂತಾದ ಸಾಂಪ್ರದಾಯಿಕ ಪರಿಕಲ್ಪನೆಗಳ ಮತಿಯನ್ನು ಕಟ್ಟಿಕೊಡುತ್ತಾಳೆ.

ಒಟ್ಟಿನಲ್ಲಿ ಹೇಳವನಕಟ್ಟೆ ಗಿರಿಯಮ್ಮನ ಹಾಡು ಹಾಗೂ ರಚನೆಗಳು ಪಾರಮಾರ್ಥ ಎನ್ನುವ ಅಲೌಕಿಕ ಪರಿಕಲ್ಪನೆಗಳಿಗಿಂತ ಭಿನ್ನವಾದ ತಳಹದಿಯನ್ನು ಹೊಂದಿವೆ. ರಚನೆಗಳಲ್ಲಿ ಕಾಣುವ ವರ್ಣನೆಗಳೆಲ್ಲ ಕಾಲ್ಪನಿಕವಾಗದೆ, ಪೌರಾಣಿಕವಾಗದೆ ಸಜೀವ ಸಾಂಸಾರಿಕ ಚಿತ್ರಗಳಾಗಿರುವುದು ಅವುಗಳ ವೈಶಿಷ್ಟ್ಯವಾಗಿದೆ. ಪ್ರತಿಯೊಂದು ರಚನೆಯಲ್ಲೂ ಕಾಣುವ ವಿರಹ-ಸಂಕಷ್ಟ, ರತಿ-ವ್ಯಥೆ, ವಾದ-ಸಂವಾದ, ಜಾತಿ-ವಿಜಾತಿಗಳು ಒಂದು ವಿಶಾಲ ಅರ್ಥವನ್ನು ಪಡೆದುಕೊಳ್ಳುತ್ತವೆ. ಶೃಂಗಾರ-ಭೋಗಗಳು ಕಂಡರೂ ಅವು ಸ್ವಾರ್ಥವಾಗದ ನಿಷ್ಕಾಮ ನೆಲೆಗಟ್ಟಿನ ಮೇಲೆ ನಿಲ್ಲುತ್ತವೆ.

ಗಿರಿಯಮ್ಮನ ಸ್ವತಂತ್ರ ಚಿಂತನಶೀಲತೆ, ಸಾಂಸ್ಕೃತಿಕ ಎಚ್ಚರ, ಸಾತ್ವಿಕ ಹಾಗೂ ಸಮಕಾಲೀನ ಪ್ರಜ್ಞೆಗಳಿಂದಾಗಿ ಕ್ರಿಯಾಶೀಲ ವ್ಯಕ್ತಿಯಾಗಿ ಗಿರಿಯಮ್ಮ ಕಾಣುತ್ತಾಳೆ. ಹೆಣ್ಣು ಮೋಕ್ಷಕ್ಕೆ ಅನರ್ಹಳು, ಧಾರ್ಮಿಕವಾದಂಥ ಯಾವ ಆಚರಣೆಗಳಲ್ಲೂ ಅವಳು ಸ್ವೀಕಾರಾರ್ಹಳಲ್ಲ ಎನ್ನುವ ಸನಾತನ ಪರಿಸರದಲ್ಲಿ ಬೆಳೆದ ಗಿರಿಯಮ್ಮ ಅವನ್ನೆಲ್ಲ ನೀಗಿಕೊಂಡು ಸಾಧಕಳಾದ ಸಂಗತಿಗಳು ಕುತೂಹಲಕಾರಿಯಾಗಿವೆ. ದಾಸಸಾಹಿತ್ಯದ ಪಾರಂಪರಿಕ ಅಧ್ಯಯನ ನೆಲೆಗಳಲ್ಲಿಟ್ಟು ಪುರುಷದಾಸರಿಗೆ ಅನ್ವಯಿಸುವ ಅಧ್ಯಯನ ಮಾದರಿಗಳನ್ನಿಟ್ಟುಕೊಂಡು ಗಿರಿಯಮ್ಮನನ್ನು ಅಧ್ಯಯನಮಾಡಲು ಹೋದರೆ ಅವಳ ಇಂಥ ಹೋರಾಟದ ಬದುಕು ಕ್ಷೀಣವಾಗಿ ಕಾಣುತ್ತದೆ. ಹಾಗೆ ಭಾಗವತದ ತೀರ ಸಾಂಪ್ರದಾಯಿಕ ತಾತ್ವಿಕತೆಯಲ್ಲಿಟ್ಟು ನೋಡಿದಾಗಲೂ ಅವಳ ವ್ಯಕ್ತಿತ್ವ ಮಂಕಾಗುತ್ತದೆ. ಬದಲಾಗಿ ಅವಳ ರಚನೆಗಳನ್ನು ಅವು ರೂಪಗೊಂಡ ಸಾಂಸ್ಕೃತಿಕ ಪರಿಸರದಲ್ಲಿಟ್ಟುಕೊಂಡು ಅಧ್ಯಯನ ಮಾಡಿದರೆ ಗಿರಿಯಮ್ಮನ ಕುರಿತ ಹೊಸ ವ್ಯಾಖ್ಯಾನಗಳಿಗೆ ಮುಖಾಮುಖಿಯಾಗಬಹುದಾಗಿದೆ. ದಾಸಪರಂಪರೆಯಲ್ಲಿ ಸ್ವತಂತ್ರವಾಗಿ ಕಾಣುವ ಆಕೆಯ ವ್ಯಕ್ತಿತ್ವಕ್ಕೆ ಒಂದು ಹೊಸ ಮಜಲನ್ನು ನೀಡಿದಂತಾಗುತ್ತದೆ.

ಡಾ॥ ಡಿ. ಮೀನಾಕ್ಷಿ
ಸಹಾಯಕ ನಿರ್ದೇಶಕರು, ಮಾಹಿತಿ ಕೇಂದ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

ದೃಶ್ಯ - ೧

ಭೈರಾಪುರದ ಜಾಮಿಯಾ ಹೊಂದಿದ ರೂಪಾಂಗಳು ಮತ್ತು ವೈದಿಕ ಸಂಸ್ಕೃತಿಯ ತತ್ವಗಳಾಗಿ ಎನ್ನಲಾಗುವ, ಧೃಢಕಾಯರಾದ ಸ್ವಾಮೀಜಿ ಮತ್ತು ಠಾಕೂರ್ ಮದಾನಂದಮೂರ್ತಿ ಎಂಬುವರನ್ನು, ಮಹಾ ಆರೋಪಿಗಳನ್ನಾಗಿ ಬಂಧಿಸಿರುವ ಭೈರಾಪುರ ಪೊಲೀಸರು, ಅವರಿಬ್ಬರನ್ನೂ ವಶಕ್ಕೆ ತೆಗೆದುಕೊಂಡಿರುತ್ತಾರೆ. ಆದರೆ, ವಿಚಾರಣೆ ಇನ್ನೂ ಆರಂಭವಾಗಿರುವುದಿಲ್ಲ. ಆಗ ಪೊಲೀಸ್ ಠಾಣೆಯೊಳಗೆ ಕೂತು ಕೂತು ತಲೆಚಿಟ್ಟುಹಿಡಿದುಹೋಗಿದ್ದ ಎರಡನೆ ಆರೋಪಿಯಾದ ಮದಾನಂದಮೂರ್ತಿ, ಪೊಲೀಸ್ ಅಧಿಕಾರಿ ಕುಳಿತಿದ್ದಲ್ಲಿಗೆ ಬಂದು,

**ಮಮೂ** : ಸಾಹೇಬ್ರೇ... ಈ ಪೊಲೀಸ್ ಠಾಣೆ ಕಟ್ಟೋ ಮೊದಲು, ಈ ಜಮೀನಿನ ಸರ್ವೇ ನಂಬರ್ ಎಷ್ಟು?

(ಪೊಲೀಸ್ ಅಧಿಕಾರಿ : ಉತ್ತರವಿಲ್ಲ)

**ಮಮೂ** : ಅಥವಾ, ಅದರ ಸರ್ವೇ ನಂಬರ್ ಎಷ್ಟಾದ್ರೂ ಆಗಿರ್ಲಿ... ಆ ಜಮೀನು ಯಾರಿಗ್ ಸೇರಿದ್ದು?

**ಪೊ ಅ** : ಮೌನ

**ಮಮೂ** : ಅಥವಾ ಆ ಜಮೀನು ಹಿಂದೂಗಳಿಗ್ ಸೇರಿದ್ದ? ಅಥವಾ, ಮುಸ್ಲಿಮರಿಗೆ ಸೇರಿದ್ದ? ಅಥವಾ ಕ್ರಿಶ್ಚಿಯನ್ನರಿಗೆ ಸೇರಿದ್ದ?

(ಮಮೂ ಪ್ರಶ್ನೆಗಳಿಂದ ಭಯಂಕರ ಸಿಟ್ಟು ಬಂದು ಕ್ರಾಂತಿಕಾರಿಯೇ ಆಗಿಹೋದ ಪೊಲೀಸ್ ಅಧಿಕಾರಿ ಬಸವಣ್ಣ...)

**ಬಸವಣ್ಣ** : ಅಕ್ಕಮ .... (ಆಕ್ರೋಶದಿಂದಲೇ ಕೂಗಿದ ಪೊಲೀಸ್ ಅಧಿಕಾರಿ ಬಸವಣ್ಣನ ಕೋಪಾವತಾರದ ಕೂಗನ್ನು ಕೇಳಿ, ದಡದಡನೆ ಓಡಿಬಂದ ಹೆಡ್‌ಕಾನ್‌ಸ್ಟೇಬಲ್ ಅಕ್ಕಮಹಾದೇವಿ ಪೊಲೀಸ್ ಮೇಲಧಿಕಾರಿ ಬಸವಣ್ಣನ ಎದುರಿಗೆ ನಿಂತು ಸೆಲ್ಯೂಟ್ ಮಾಡಿ ....)

**ಅಕ್ಕಮ** : ಎಸ್ ಸಾರ್ ...

**ಬಸವಣ್ಣ**: ಈ ಆರೋಪಿನಾ ಲಾಕಪ್ಪಗ್ ತಳ್ಳು.

**ಮಮೂ** : ಸಾಹೇಬ್ರೇ .... ನೀವು ನನ್ನನ್ನ ಲಾಕಪ್ಪಿಗ್ ಹಾಕೋವಂತ ಅಪರಾಧವನ್ನೇನು ನಾನ್ ಮಾಡಿಲ್ಲ, ಭಯೋತ್ಪಾದಕರ ಹಾವಳಿಯಿಂದ ದೇಶಾನ ರಕ್ಷಣೆ ಮಾಡ್ಲಿಕ್ಕೆ, ನಾನು ಯಾವ್‌ದೇ ಬಲಿದಾನಕ್ಕೂ ತಯಾರಾಗಿದೀನಿ ....

**ಬಸವಣ್ಣ** : ಅ್ಞSSS.... ಏನಂದೆ? ಭಯೋತ್ಪಾದಕ್ರಿಂದ ದೇಶಾ ರಕ್ಷಣೆ ಮಾಡ್ತೀಯಾ? ನೀನು? ನೀನೇ ಭಯೋತ್ಪಾದಕ, ಇನ್ನು ನೀನ್ಯಾವ್ ದೇಸಾನ್ ರಕ್ಷಣೆ ಮಾಡ್ತೀಯಾ?

**ಅಕ್ಕಮ** : ಏSSS ನಡಿಯಪ್ಪಾ ... ಸಾಹೆಬ್ರ ಹತ್ರ ಹೀಗೆಲ್ಲ ಮಾತಾಡಿದ್ರೆ, ಲಾಠಿ ಪ್ರಯೋಗ ಮಾಡ್‌ಬೇಕಾಗ್ತದ (ಎಂದು ಲಾಠಿ ತುದಿಯಿಂದ ನೂಕುವಳು. ಇದರಿಂದ ಮಮೂ ಕೊಂಚ ಕುಪಿತನಾಗುವನು ....)

**ಮಮೂ** : ಏನ್ ಮೇಡಂ ...? ಅಕ್ಕಮಹಾದೇವಿ ಅಂತ ಒಂದು ಶ್ರೇಷ್ಠವಾದ್ ಹೆಸರಿಟ್ಕೊಂಡು, ನೀವು ಹಿಂಗೆ ಮಾತಾಡ್ತಿದ್ದೀರಲ್ಲ, ಇದರಿಂದ ನನಗಲ್ಲ, ಸ್ವತಃ ಅಕ್ಕಮಹಾದೇವಿಗೆ ಅವಮಾನ

**ಬಸವಣ್ಣ** : ಸುಮ್ ಕೂತ್ಗಳಯ್ಯ ಕಂಡಿದೀನಿ ... ಬಸವಣ್ಣನಾ ತತ್ವ, ಅಕ್ಕಮಾದೇವಿ [illegible] [illegible]SS ಮುಕ್ಕುಟ್ಹೋಗಿರೋದೆ ನಿನ್ನಂತವ್ರಿಂದ.

ಪೊಲೀಸ್ ಅಧಿಕಾರಿ ಬಸವಣ್ಣ, ಹೆಡ್ ಕಾನ್‌ಸ್ಟೇಬಲ್ ಅಕ್ಕಮಹಾದೇವಿ ಮತ್ತು ಎರಡನೆ ಆರೋಪಿಯಾದ ಮಮೂ ನಡುವೆ ಹೀಗೆ ಮಾತಿನ ಚಕಮಕಿ ನಡೆಯುತ್ತಿರುವ ಆ ವೇಳೆಗಾಗಲೇ ಸಂಜೆಯಾಗುತ್ತಿರುತ್ತದೆ. ಆ ಮಾತುಗಳ ನಡುವೆಯೂ ಮರೆಯದೆ ಹೆಡ್ ಕಾನ್‌ಸ್ಟೇಬಲ್ ಅಕ್ಕಮಹಾದೇವಿಯು ಠಾಣೆಯ ಲೈಟ್ ಸ್ವಿಚ್‌ಗಳನ್ನು ಆನ್ ಮಾಡಿದಳು. ಅದೇ ಸಮಯಕ್ಕೆ ಸರಿಯಾಗಿ ಪೊಲೀಸ್ ಅಧಿಕಾರಿ ಬಸವಣ್ಣನವರ ಕಡೆಗೆ ಬೆನ್ನು ತಿರುಗಿಸಿ ಗೋಡೆಯ ಕಡೆಗೆ ಮುಖ ಮಾಡಿ ಪದ್ಮಾಸನವನ್ನೇ ಹಾಕಿ ಕುಳಿತ ಮೊದಲ ಆರೋಪಿ ಭೈರಾನಂದ ಸ್ವಾಮೀಜಿ, ಜಪಾ ಮಾಡಲು ಆರಂಭಿಸಿದರು. ಪ್ರಾಯಶಃ, ಅದು ಸ್ವಾಮೀಜಿ ಅವರ ಸಂಧ್ಯಾವಂದನೆ ಸಮಯವಿರಬೇಕೆಂದು ಭಾವಿಸಿ ಪೊಲೀಸರು ಸುಮ್ಮನಾದರು. ಆದರೆ, ಮಮೂವನ್ನ ಮಾತ್ರ, ಪಕ್ಕದ ಲಾಕಪ್ಪಿಗೆ ನೂಕಲಾಗಿತ್ತು. ಲಾಕಪ್ಪಿನೊಳಗಿದ್ದ ಅವರು, ಕಂಬಿಗಳನ್ನು ಹಿಡಿದು ನಿಂತು, ಪೊಲೀಸ್ ಅಧಿಕಾರಿ ಬಸವಣ್ಣನನ್ನೂ ಹೆಡ್ ಕಾನ್‌ಸ್ಟೇಬಲ್ ಅಕ್ಕಮಹಾದೇವಿಯನ್ನೂ ಸಾಕಷ್ಟು ಅಸಮಾಧಾನದಿಂದಲೇ ನೋಡುತ್ತಿದ್ದರು. ಆದರೂ, ಎರಡನೆ ಆರೋಪಿಯಾದ ಮಮೂ ತನ್ನ ವಕೀಲರ ಆಗಮನವನ್ನು ಎದುರು ನೋಡುತ್ತಿರಬೇಕೆಂದು ಭಾವಿಸಿದ ಪೊಲೀಸರು ಸಹ ಅಷ್ಟಕ್ಕೆ ಸುಮ್ಮನಾದರು. ಆ ವೇಳೆಗೆ ಸರಿಯಾಗಿ ಆ ಪ್ರದೇಶದ ಕರೆಂಟ್ ಹಾರಿಹೋಗಿಬಿಟ್ಟಿತು. ಕರೆಂಟ್‌ನ ಈ ಮಾಮೂಲು ಮಾಯದ ಬಗ್ಗೆ ಮಾಮೂಲಾಗಿಯೇ ಸಿಟ್ಟು ಮಾಡಿಕೊಂಡ ಪೊಲೀಸ್ ಅಧಿಕಾರಿ ....

**ಬಸವಣ್ಣ**: ಅಕ್ಕಮ .... ಆ ಲ್ಯಾಂಟರ್ನ್ ಹಚ್ಚು

**ಅಕ್ಕಮ**: ಎಸ್ ಸಾರ್ ....

ಅಲ್ಲಿಂದ ಇನ್ನೊಂದು ಪಕ್ಕದ ಕೊಠಡಿಗೆ ತೆರ... ಹೆಡ್ ಕಾನ್‌ಸ್ಟೇಬಲ್ ಅಕ್ಕಮಹಾದೇವಿಯು... ಲ್ಯಾಂಟರ್ನ್‌ಅನ್ನು ತಂದು, ಮೇಲಧಿಕಾರಿ ಬಸವಣ್ಣ... ಟೇಬಲ್ ಮೇಲಿಟ್ಟು ಹಚ್ಚಿದಳು. ಅದರಿಂದ ಕೊಂ... ಬೆಳಕೇನೋ ಠಾಣೆಯೊಳಗೆ ಹರಡಿತು. ಆದರೆ, ಆ ಕ್ಷ... ಅಲ್ಲಿದ್ದವರಿಗೆಲ್ಲಾ ಪರಮಾಶ್ಚರ್ಯವೇ ಆಗಿಹೋಗಿತು... ಗೋಡೆಯ ಕಡೆ ಮುಖ ಮಾಡಿ ಕುಳಿತು, ಜಪ ಮಾಡು... ಧ್ಯಾನಮಗ್ನರಾಗಿದ್ದ, ಮೊದಲ ಆರೋಪಿಯಾ... ಭೈರಾನಂದ ಸ್ವಾಮೀಜಿ, ಲೈಟ್ ಹಾರಿಹೋದ ಕೆಲವ... ಕ್ಷಣಗಳಲ್ಲಿ, ಠಾಣೆಯಿಂದ ಪರಾರಿಯಾಗಿಬಿಟ್ಟಿದ್ದರು.

ದೃಶ್ಯ - ೨

ಮೊದಲ ಆರೋಪಿಯಾದ ಭೈರಾನಂದ ಸ್ವಾಮೀ... ಪೊಲೀಸ್ ಠಾಣೆಯಿಂದ ಪರಾರಿಯಾಗಿ ಇಲ್ಲಿಗೆ ಒಂದು ವರ್ಷದ ಮೇಲಾಗಿಹೋಗಿತ್ತು. ಪೊಲೀಸ್ ಅಧಿಕಾ... ಬಸವಣ್ಣನನ್ನೂ ಹೆಡ್ ಕಾನ್‌ಸ್ಟೇಬಲ್ ಅಕ್ಕಮಹಾದೇ... ಯನ್ನೂ ಕರ್ತವ್ಯಲೋಪದ ಆರೋಪದ ಮೇಲೆ ಸೇವೆ... ಯಿಂದ ಅಮಾನತ್ತುಗೊಳಿಸಲಾಗಿತ್ತು. ಎರಡನೆ ಆರೋ... ಯಾದ ಮದಾನಂದಮೂರ್ತಿಗೆ ನ್ಯಾಯಾಲಯವ... ಜಾಮೀನು ನೀಡಿ ಬಿಡುಗಡೆಗೆ ಆದೇಶವನ್ನು ನೀಡಿತ್ತು.

ಏತನ್ಮಧ್ಯೆ, ಪೊಲೀಸ್ ಇಲಾಖೆಯ ವಿಚಾರಣೆಗ... ಹಾಜರಾದ ಅಧಿಕಾರಿ ಬಸವಣ್ಣ ಮತ್ತು ಹೆಡ್... ಕಾನ್‌ಸ್ಟೇಬಲ್ ಅಕ್ಕಮಹಾದೇವಿ ಇಬ್ಬರೂ, ನಾ...

# ಭೈರಾನಂದ ಮಠ

(ಏಕಾಂಕ ನಾಟಕ)

ಮ. ನ. ಜವರಯ್ಯ





ಕರ್ತವ್ಯಲೋಪವನ್ನು ಎಸಗಿಲ್ಲವೆಂದು ಬಲವಾಗಿ ವಾದಿಸಿದರು. ಪೊಲೀಸ್ ಅಧಿಕಾರಿ ಬಸವಣ್ಣನನ್ನು ಕುರಿತು ವಿಚಾರಣಾಧಿಕಾರಿಯು ಕೇಳಿದ ಮೊಟ್ಟಮೊದಲ ಪ್ರಶ್ನೆ :

**ವಿಚಾರಣಾಧಿಕಾರಿ :** ನೀವು ಕರ್ತವ್ಯಲೋಪ ಎಸಗಿಲ್ಲವೆಂದು ಹೇಗೆ ಹೇಳುತ್ತೀರಿ ?

**ಬಸವಣ್ಣ :** ನಾವು ಕರ್ತವ್ಯಲೋಪ ಎಸಗಿಲ್ಲ ಅನ್ನೋದಕ್ಕೆ, ಏನೇನೋ ಪ್ರಶ್ನೆ ಕೇಳಿ, ಕರ್ತವ್ಯನಿರತರಾಗಿದ್ದ ನಮ್ಮನ್ನೆಲ್ಲಾ ದಾರಿ ತಪ್ಪಿಸಲಿಕ್ಕೆ ಯತ್ನಿಸಿದ ಎರಡನೆ ಆರೋಪಿಯಾದ ಮದಾನಂದಮೂರ್ತಿಯನ್ನು ಆ ಕ್ಷಣವೇ ಲಾಕಪ್ಪಿಗೆ ತಳ್ಳಿದ್ದೇ ಸಾಕ್ಷಿ.

**ವಿಚಾರಣಾಧಿಕಾರಿ :** ಅಕ್ಕಮಹಾದೇವಿ, ನೀವೇನ್ ಹೇಳ್ತೀರಾ ?

**ಅಕ್ಕಮ :** ಸಾರ್, ಧ್ಯಾನಾ ಮಾಡ್ತೀವಿ, ಜಪಾ ಮಾಡ್ತೀವಿ, ಸಂಧ್ಯಾವಂದ್ನೇ ಮಾಡ್ತೀವಿ ಅಂತ, ಧರ್ಮದ ಹೆಸರ್‌ನಲ್ಲಿ, ಸಂಸ್ಕೃತಿ ಹೆಸರ್‌ನಲ್ಲಿ ಇಡೀ ದೇಶಕ್ಕೇ ದ್ರೋಹ ಮಾಡ್ತಿರೋ ಇಂತ ದೇಶದ್ರೋಹಿಗಳ ಪಿತೂರಿ ಕುತಂತ್ರಗಳಿಗೆಲ್ಲಾ, ಪೊಲೀಸ್ ಇಲಾಖೆ, ನಮ್ಮನ್ಯಾಕ್ ಬಲಿಪಶು ಮಾಡ್‌ಬೇಕು ? ನಮ್ಮಿಂದ ಯಾವ್‌ದೇ ರೀತಿಯಲ್ಲೂ ಕರ್ತವ್ಯಲೋಪ ಆಗಿಲ್ಲ ಸಾರ್ ....

**ವಿಚಾರಣಾಧಿಕಾರಿ :** ವಿಚಾರಣೇನ ಮುಂದಕ್ ಹಾಕಿದೆ. ವಿಚಾರಣೆ ದಿನಾಂಕಾನ ಮುಂದೆ ತಿಳಿಸ್‌ಲಾಗುತ್ತೆ ....

### ದೃಶ್ಯ - ೩

ಭೈರಾನಂದ ಸ್ವಾಮೀಜಿ ಅವರ 'ಭೈರಾನಂದಮಠ' ಎಂಬ ಕಾದಂಬರಿ ಹೊರಬಂದ ಕೇವಲ ಆರೇಳು ತಿಂಗಳಲ್ಲಿ, ಭೈರಾಪುರದಾದ್ಯಂತವೂ ಅದರ ಬಗೆಗೆ ವಿವಿಧ ರೀತಿಯ ಭಾರಿ ಭಾರಿ ಚರ್ಚೆಗಳೇ ಆರಂಭವಾಗಿದ್ದುವು. ಕೆಲವರಂತೂ ಇದೊಂದು ಜಾತಿವಾದಿ ಕಾದಂಬರಿ ಎಂಬುದಾಗಿ ಟೀಕಿಸಿದ್ದರು. ಮತ್ತೆ ಕೆಲವರು ಭೈರಾನಂದಮಠದ ಸ್ವಾಮೀಜಿಯವರ ಈ 'ಭೈರಾನಂದಮಠ' ಕಾದಂಬರಿಯು, ಸಮಾಜದ ಸ್ವಾಸ್ಥ್ಯಕ್ಕೆ ಅಪಾಯಕಾರಿಯಾದುದು ಎಂಬುದಾಗಿ ವಾದಿಸಿದರು. ಆ ಊರಿನ ಪ್ರಗತಿಪರ ಚಿಂತಕರಂತೂ, ಈ ಕಾದಂಬರಿಯು ಸಮಾಜದೊಳಗಿನ ಜಾತಿ ಜಾತಿಗಳ ನಡುವೆ ಅನಗತ್ಯವಾದ ಅನುಮಾನ ಮತ್ತು ದ್ವೇಷಗಳನ್ನು ಬಿತ್ತುತ್ತದೆ ಎಂದು ಸಾಕಷ್ಟು ತೀವ್ರವಾಗಿಯೇ ಟೀಕಿಸಿದ್ದರು. ಹಾಗಾಗಿ, ಈ ಕಾದಂಬರಿಯನ್ನು ನಿಷೇಧಿಸಬೇಕೆಂದು ಸಹ ಸರ್ಕಾರವನ್ನು ಒತ್ತಾಯಿಸತೊಡಗಿದ್ದರು. ಅದೇ ಪ್ರಗತಿಪರರ ನಡುವೆ, ಆ ಕಾದಂಬರಿಗೆ ಅಷ್ಟೊಂದು ಮಹತ್ವ ನೀಡಬಾರದೆಂದು, ಆ ಕಾದಂಬರಿಯನ್ನು ಉಪೇಕ್ಷಿಸಬೇಕೆಂದು ಬಲವಾದ ಭಿನ್ನಾಭಿಪ್ರಾಯವನ್ನೇ ವ್ಯಕ್ತಪಡಿಸಿದರು. ಅಲ್ಲದೆ, ಆ ಕಾದಂಬರಿಯನ್ನು ನಿಷೇಧಿಸಬೇಕೆಂದು ಸರ್ಕಾರವನ್ನು ಒತ್ತಾಯಪಡಿಸುವುದರಿಂದ, ಅದು ಮರುಮುದ್ರಣವಾಗಲು ಪರೋಕ್ಷವಾಗಿ ನಾವೇ ಕಾರಣವಾಗುವುದು ಮಾತ್ರವಲ್ಲದೆ, ಅದರ ಬಗೆಗೆ ಇಷ್ಟೊಂದು ಚರ್ಚೆ ನಡೆಯುತ್ತಿರಬೇಕಾದರೆ, ಅದರಲ್ಲೇನೋ ಇರಲೇಬೇಕೆಂದು ಭ್ರಮಿಸಿ, ಜನ ಅದನ್ನು ಕದ್ದು ಮುಚ್ಚಿ ಓದಲೂ ಕಾರಣವಾಗಿಬಿಡಬಹುದೇತಲೂ ಅನುಮಾನಿಸಿದರು. ಇಷ್ಟೇ ಅಲ್ಲದೆ, ಬೇರೊಂದು ರೀತಿಯ ಅಭಿಪ್ರಾಯವೂ ವ್ಯಕ್ತವಾಯಿತು. 'ಭೈರಾನಂದಮಠ' ಕಾದಂಬರಿಯನ್ನು ನಿಷೇಧಿಸುವುದರಿಂದ ಸಂವಿಧಾನದತ್ತ ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೇ ಧಕ್ಕೆ ಉಂಟಾಗಬಹುದೆಂದು ಒಂದು ಗುಂಪಿನವರು ವಾದಿಸಿದರೆ, ಮತ್ತೊಂದು ಗುಂಪಿನವರು, 'ಭೈರಾನಂದಮಠ' ಕಾದಂಬರಿಯಂಥ ಬರವಣಿಗೆಯಿಂದ, ಅದೇ ಸಂವಿಧಾನದತ್ತ ಅಭಿವ್ಯಕ್ತಿ ಸ್ವಾತಂತ್ರ್ಯದ ದುರುಪಯೋಗ ಮಾತ್ರವಲ್ಲದೆ, ಇಂತಹ ಬರವಣಿಗೆಗಳಿಂದ ಸಮಾಜದೊಳಗೆ ಶಾಂತಿ ಕಾನೂನು ಮತ್ತು ಸುವ್ಯವಸ್ಥೆ ಹದಗೆಡುತ್ತದೆ ಎಂದು ಭವಿಷ್ಯವನ್ನೇ ನುಡಿದರು.

ಹೀಗೆ 'ಭೈರಾನಂದಮಠ' ಕಾದಂಬರಿಯ ಬಗೆಗೆ, ಇಷ್ಟೆಲ್ಲಾ ವಾದ-ವಿವಾದಗಳು, ಟೀಕೆ-ಟಿಪ್ಪಣಿಗಳು, ಪರ-ವಿರೋಧಗಳೇ ಮುಂತಾಗಿ ರಣರಂಪ ರಾದ್ಧಾಂತವೇ ನಡೆದಿದ್ದರೂ, ಆ ಕಾದಂಬರಿಯ ಕರ್ತೃವಾದ ಭೈರಾನಂದಮಠದ ಸ್ವಾಮಿಗಳು ಮಾತ್ರ ಎಲ್ಲಿ ಅಡಗಿದ್ದಾರೆ ಎಂಬುದನ್ನು ಯಾರೂ ಊಹಿಸುವುದಾಗಲಿ ಪತ್ತೆ ಹಚ್ಚುವುದಾಗಲಿ ಯಾರಿಂದಲೂ ಸಾಧ್ಯವಾಗಲಿಲ್ಲ. ಭೈರಾಪುರ ಬಾಂಬ್‌ಸ್ಫೋಟದ ಭಯೋತ್ಪಾದನೆಯ ಆರೋಪದಡಿಯಲ್ಲಿ ಬಂಧಿತರಾಗಿದ್ದಂತಹ ಭೈರಾನಂದಮಠದ ಸ್ವಾಮೀಜಿಗಳು ಭೈರಾಪುರ ಪೊಲೀಸ್ ಠಾಣೆಯಿಂದ ಅಂದು ಪರಾರಿಯಾದ ನಂತರ, ಅವರನ್ನು ಪತ್ತೆ ಹಚ್ಚಿ ಮತ್ತೆ ಬಂಧಿಸುವುದು ಇಡೀ ಪೊಲೀಸ್ ಇಲಾಖೆಗೇ ಒಂದು ದೊಡ್ಡ ತಲೆಶೂಲೆಯಾಗಿಹೋಗಿತ್ತು.

ಈ ರಣರಂಪ ಹೀಗೆ ನಡೆದು ಸಾಗಿರಬೇಕಾದರೆ, ಆ ದಿನದ ಪತ್ರಿಕೆಗಳಲ್ಲೆಲ್ಲಾ ಒಂದು ಅನಿರೀಕ್ಷಿತ ಸುದ್ದಿ ಪ್ರಕಟವಾಗಿತ್ತು. ಅದರ ಮಾರನೆಯ ದಿನ 'ಭೈರಾನಂದಮಠ' ಕಾದಂಬರಿಯ ಸುತ್ತಲೂ ಎದ್ದಿರುವ ವಾದ-ವಿವಾದ ಮತ್ತು ಸಮಸ್ಯೆಗಳ ಬಗೆಗೆ ಆ ಊರಿನ 'ಪತ್ರಕರ್ತರ ಭವನ'ದಲ್ಲಿ ಸ್ವತಃ ಭೈರಾನಂದಮಠದ ಸ್ವಾಮಿಗಳೇ ಪತ್ರಿಕಾಗೋಷ್ಠಿಯನ್ನು ಕರೆದಿರುವುದಾಗಿ ಸುದ್ದಿಯಾಗಿತ್ತು. ಆ ಊರಲ್ಲಿ ಆ ವೇಳೆಗಾಗಲೇ ಪ್ರಮುಖ ರಾಜಕೀಯ ಘಟನೆಯೊಂದು ನಡೆದೇಹೋಗಿತ್ತು. ಅವರೆಗೂ ಅಧಿಕಾರದಲ್ಲಿದ್ದ ಜಾತ್ಯತೀತವೆಂಬ ಒಂದು ಪಕ್ಷವು ಅಧಿಕಾರವನ್ನು ಕಳೆದುಕೊಂಡು, 'ಭಜನೆರಾಮ್ ಪಾರ್ಟಿ' ಎಂಬ ಇನ್ನೊಂದು ರಾಜಕೀಯ ಪಕ್ಷವು ಅಧಿಕಾರವನ್ನು ಹಿಡಿದಾಗಿತ್ತು. ತದನಂತರ ತೀರಾ ಅನತಿಕಾಲದಲ್ಲೇ ಆ ಅಧಿಕಾರಸ್ಥ ಪಕ್ಷವು ಭೈರಾನಂದಮಠದ ಸ್ವಾಮೀಜಿಗಳು ಮತ್ತು ಡಾಕ್ಟರ್ ಮದಾನಂದಮೂರ್ತಿಗಳ ಮೇಲೆ ಹಿಂದಿನ ಸರ್ಕಾರವು ಹೂಡಿದ್ದ ಮೊಕದ್ದಮೆಯೂ ನಿರಾಧಾರವೆಂದು ತೀರ್ಮಾನಿಸಿ, ಆ ಮೊಕದ್ದಮೆಯನ್ನು ಹಿಂತೆಗೆದುಕೊಂಡಿತ್ತು. ಅಷ್ಟೆಲ್ಲದರ ಪರಿಣಾಮವಾಗಿ, ಭೈರಾನಂದಮಠದ ಸ್ವಾಮಿಗಳು ಅಂದು ಭೈರಾಪುರದ ಪತ್ರಕರ್ತರ ಭವನದಲ್ಲಿ ಹಾಜರಾಗಿದ್ದರು. ಅಂದು ಪತ್ರಕರ್ತರ ಭವನವಂತೂ ಕಿಕ್ಕಿರಿದು ತುಂಬಿಹೋಗಿತ್ತು. ಪತ್ರಕರ್ತರ ಮೊದಲ ಪ್ರಶ್ನೆ :

**ಪತ್ರಕರ್ತರು :** ಸ್ವಾಮೀಜಿ, ಇಪ್ಪತ್ತನೇ ಶತಮಾನದ ಕೊನೆಗಾಲದಲ್ಲಿ ನೀವು ರಚಿಸಿರುವ ನಿಮ್ಮ ಈ 'ಭೈರಾನಂದಮಠ' ಕಾದಂಬರಿಯ ಮೂಲ ಪ್ರೇರಣೆ ಯಾವುದು ?

**ಭೈರಾಜಿ :** ಹತ್ತೊಂಬತ್ತನೆ ಶತಮಾನದ ಕೊನೆಗಾಲದಲ್ಲಿ, ಬಂಗಾಳಿ ಭಾಷೆಯಲ್ಲಿ ಪ್ರಕಟವಾಗಿ, ಆನಂತರ ಅದರ ಕನ್ನಡ ಭಾಷಾಂತರವೂ ಪ್ರಕಟವಾದ ಬಂಕಿಮಚಂದ್ರ ಚಟರ್ಜಿಯವರ 'ಆನಂದಮಠ' ಕಾದಂಬರಿಯೇ ನನ್ನ ಮೂಲ ಪ್ರೇರಣೆ.

**ಪತ್ರಕರ್ತರು :** ಆದರೆ, ಬಂಕಿಮಚಂದ್ರರು 'ಆನಂದಮಠ' ಕಾದಂಬರಿ ಬರೆದದ್ದು, ಬ್ರಿಟಿಷರ ವಿರುದ್ಧವಾಗಿ ಭಾರತೀಯರಲ್ಲಿ ಸ್ವಾತಂತ್ರ್ಯ ಸಂಗ್ರಾಮವನ್ನು ಸಂಘಟಿಸುವ ಸಲುವಾಗಿ. ಅಂದಮೇಲೆ ನಿಮ್ಮ 'ಭೈರಾನಂದಮಠ' ಕಾದಂಬರಿಯ ಉದ್ದೇಶವೇನು ?

**ಭೈರಾಜಿ :** ಬ್ರಿಟಿಷರು ಈ ದೇಶದಲ್ಲಿ ಹುಟ್ಟುಹಾಕಿರುವ ಮತ್ತು ಬಿಟ್ಟುಹೋಗಿರುವ ಪಿತೂರಿ ಮತ್ತು ಕುತಂತ್ರಗಳನ್ನೆಲ್ಲಾ ನಿರ್ಮೂಲ ಮಾಡಿ ಹಿಂದೂ ಧರ್ಮದ ಸಂರಕ್ಷಣೆ ಮಾಡುವುದು ನಮ್ಮ 'ಭೈರಾನಂದಮಠ'ದ ಕಥೆಯ ಧ್ಯೇಯವಾಗಿದ್ದು, ನಮ್ಮ ಮಠದ ಎಷ್ಟೋ ಮಂದಿ ಯೋಗಿ ಬ್ರಹ್ಮಚಾರಿಗಳು ಹಿಂದೂಧರ್ಮದ ರಕ್ಷಣೆಗಾಗಿ

**ಅಲ್ಲಾ !**

ಎಡವಿದ
ಹೆಜ್ಜೆ
ಸರಿ ಹೋದೀತು
ಎಡವಿ ಹೋದ
ಮನಕ್ಕೆಲ್ಲಿದೆ ದಾರಿ ?

ಸಂತೇಬೆನ್ನೂರು ಫೈಜ್ನಟ್ರಾಜ್
ಕಣವೆ ಬಿಳಚಿ

ಯಾವುದೇ ತ್ಯಾಗ ಮತ್ತು ಬಲಿದಾನಗಳಿಗೂ ಸಿದ್ಧರಾಗಿದ್ದಾರೆ. ಅವರೆಲ್ಲರೂ ಈ ಕಾದಂಬರಿಯಲ್ಲಿ ಕೇವಲ ಸಾಮಾನ್ಯ ಪ್ರಜೆಗಳಂತೆ ವರ್ತಿಸುತ್ತಾರೆ, ಅಷ್ಟೆ. ಇದೊಂದು ವಿಶಿಷ್ಟವಾದ ತಂತ್ರವೆನಿಸಿದ್ದು ಇಡೀ ಕನ್ನಡ ಸಾಹಿತ್ಯದಲ್ಲೇ ಇಂತಹ ಶ್ರೇಷ್ಠ ಸೃಜನಶೀಲ ತಂತ್ರವನ್ನು ಕಾಣಲಾಗದು.

**ಪತ್ರಕರ್ತರು:** ಇಂದಿಗೂ ನಾವು ಎಲ್ಲದಕ್ಕೂ ಬ್ರಿಟಿಷರನ್ನೇ ದೂರುವುದು ಎಷ್ಟರ ಮಟ್ಟಿಗೆ ಸರಿ ?

**ಬೈರಾಜಿ :** ಕೇವಲ ನಮ್ಮೂರಿನಲ್ಲಿ ಮಾತ್ರವಲ್ಲದೆ, ಇಂದಿನ ಇಡೀ ಭರತಖಂಡದ ನೂರಾರು ವಿಶ್ವವಿದ್ಯಾನಿಲಯಗಳಲ್ಲೇ ನಡೆದಿರುವುದು ಎಂತಹ ಶಿಕ್ಷಣ ? ನಿಃಸಂದೇಹವಾಗಿ ಅದು ಬ್ರಿಟಿಷರು ಜಾರಿಗೆ ತಂದಿಟ್ಟ ಶಿಕ್ಷಣ. ಆ ಶಿಕ್ಷಣ ಇಂದು ನಮ್ಮ ಹಿಂದೂ ಧರ್ಮಕ್ಕೆ ಅತ್ಯಂತ ಗಂಡಾಂತರಕಾರಿ ಎಂದೆನಿಸಿದೆ.

**ಪತ್ರಕರ್ತರು :** ನೀವು ಮತ್ತು ನಿಮ್ಮ 'ಬೈರಾನಂದಮಠ' ಹಿಂದೂ ಧರ್ಮದ ಹೆಸರಿನಲ್ಲಿ ಪುರೋಹಿತ ಧರ್ಮದ ಸಂರಕ್ಷಣೆ ಮಾಡುತ್ತಿದ್ದೀರಿ ಎಂಬುದು ಪ್ರಗತಿಪರರ ಮತ್ತು ಬುದ್ಧಿಜೀವಿಗಳ ಅನುಮಾನವಾಗಿದೆ, ಈ ಬಗ್ಗೆ ನೀವೇನು ಹೇಳುತ್ತೀರಿ ?

**ಬೈರಾಜಿ :** ಈ ಪ್ರಗತಿಪರರು ಮತ್ತು ಬುದ್ಧಿಜೀವಿಗಳು ಎಂದರೆ ಯಾರು ? ಇವರೆಲ್ಲ ಆ ಬ್ರಿಟಿಷರ ಏಜೆಂಟ್‌ಗಳು. ಇವರೆಲ್ಲಾ ಹಿಂದೂ ಧರ್ಮದ ನಿತ್ಯ ಶತ್ರುಗಳು.

**ಪತ್ರಕರ್ತರು :** ಕೊನೆಯ ಪ್ರಶ್ನೆ ಸ್ವಾಮೀಜಿ; ಮತಾಂತರದ ಬಗೆಗೆ ನಿಮ್ಮ 'ಬೈರಾನಂದಮಠ' ಕಾದಂಬರಿಯಲ್ಲಿ ಹೇಳಿರುವುದಕ್ಕಿಂತ ಭಿನ್ನವಾದ ಅಭಿಪ್ರಾಯವೇನಾದರೂ ಉಂಟೆ ?

**ಬೈರಾಜಿ :** ಕೇವಲ ಮತಾಂತರ ಆದವರನ್ನು ಮಾತ್ರ ವಲ್ಲದೆ ಮತಾಂತರ ಮಾಡಿಸಿದವರನ್ನೂ ದೇಶದಿಂದ ಗಡಿಪಾರು ಮಾಡಬೇಕು. ಅದಕ್ಕೂ ಮೊದಲಾಗಿ ಮತಾಂತರದ ಹಿಂದಿರುವ ಪಿತೂರಿಯೇ ಮೀಸಲಾತಿ. ಮೀಸಲಾತಿಯನ್ನು ಮೊದಲು ಕಿತ್ತುಹಾಕಿ ಸಮಾನತೆ ಮ... ಪ್ರತಿಭೆಗಳನ್ನು ಬೆಳೆಸಬೇಕು.

**ಪತ್ರಕರ್ತರು :** ಮತಾಂತರ ಮತ್ತು ಮೀಸಲಾ... ಎರಡೂ ಸಂವಿಧಾನದ ಹಕ್ಕುಗಳಲ್ಲವೆ ?

**ಬೈರಾಜಿ :** ಅದ್ಕೇನೇ ಹೇಳ್ತೀರೋದು. ಸಾ... ಸಂವಿಧಾನವನ್ನು ಎಲ್ಲಿಯವರೆಗೆ ಬದಲಾಯಿಸುವುದಿಲ್ಲವೋ ಅಲ್ಲಿಯವರೆಗೂ, ಮತಾಂತರ ನಿಲ್ಲುವುದೂ ಇಲ್ಲ ಹಿಂದೂ ಧರ್ಮಕ್ಕೆ ಗಂಡಾಂತರ ತಪ್ಪಿದ್ದೂ ಅಲ್ಲ.


**ಮ. ನ. ಜವರಯ್ಯ**

ನಂ. ೭-೧೨., ೨ನೇ ಮುಖ್ಯರಸ್ತೆ, ೨ನೇ ಅಡ್ಡರಸ್ತೆ, ೨ನೇ ಹಂತ
'ಇ' ಮತ್ತು 'ಎಫ್' ಬ್ಲಾಕ್, ರಾಮಕೃಷ್ಣನಗರ
ಮೈಸೂರು - ೫೭೦ ೦೨೨





ಚಾಳೀಸು ಕಣ್ಣೊಳಗೆ ಹೂವು ಬಿದ್ದು
ಪಳಗದ ಪ್ರಾಣಿಪಕ್ಷಿಗಳ ಬೆದರಿಸಲು ಬಡಿಗೆ ಒಡೆದು
ಕೊಳಚೆಕೇರಿಯ ಪಾಯಿಖಾನೆಗಳನ್ನು ಗಂಭೀರವಾಗಿ
ವ್ರತದಂತೆ ತೊಳೆಯುತ್ತಾ
ಸಮಾಜದ ಸ್ವಾಸ್ಥ್ಯಕ್ಕೆ ಗುಳಿಗೆಗಳನ್ನು ನುಂಗುತ್ತ
ಬತ್ತಲೆ ಮುದುಕನ ಚರಕ
ನಮ್ಮ ನರನಾಡಿಗಳನ್ನು ಬೆಸೆಯುವ ಕಾಲ ಈಗುಳಿದಿಲ್ಲ
ಪಾದದಡಿ ಧರಿಸಿಕೊಂಡ ಚಮ್ಮಾಳಿಗೆ
ಜನಸಾಮಾನ್ಯರ ಹೈಸಿಯತ್ತಿಗೆ ಎಟುಕಲಿಲ್ಲ

ಬಾಚಣಿಗೆ ಹಲ್ಲುಗಳ ನಡುವೆ ಸಿಗೆಹಾಕಿಕೊಂಡು
ಒದ್ದಾಡುವ ಹೇನುಗಳ ಹಾಗೆ
ಮಂಗಗಳಿಗೀಗಾಗಲೇ ಮದುವೆಯಾಗಿದೆ ಮರಿಗಳಾಗಿವೆ ದಫನೂ ಆಗಿದೆ
ಬಾಕಿ ಔಷಧೋಪಚಾರಗಳ ಸಹಿಸಿಕೊಂಡು
ಅಂಗಗಳಿಗೆ ಬೇರು ಮೂಡದಂತೆ
ಕಾಗೆಗಳು ಮಾತನಾಡದಂತೆ
ಉಗುರು ಕೂದಲುಗಳ ಬಿಟ್ಟು ಮೂಕ ಪ್ರತಿಭಟನೆಗಾಗಿ
ಸುಮ್ಮನೆ ಉಳಿಯಲಿವೆ

ತಾತನ ಮೂರು ಮಂಗಗಳಲ್ಲೊಂದು
ಕರೇವು ಅಂದರೆ ಮೂರಲ್ಲ ಒಂದು
ಸಂತೆಯ ತೊಟ್ಟಿಲಲಿ ಸಮಾಧಾನವಾಗಿ ಪವಡಿಸಿದ್ದು
ಬಾಲ ಸುಟ್ಟುಕೊಂಡು ಮಹಾನುಭಾವರ ಸನ್ನಿಧಿಗೆ ಸಾಷ್ಟಾಂಗ ಎರಗಿದ್ದು

ಕೋತಿಗಳು ಚಳಿಕಾಯಿಸಿಕೊಳ್ಳುತ್ತಾ ಚರ್ಚಿಸಿವೆ
ಗಾಳಿಯಲಿ ಬಿಟ್ಟ ಬಾಣಗಳ ಹಾಗೆ
ಹಿಂಸೆಗೆ ಹೊಸಭಾಷ್ಯ ಬರೆದು ಪ್ರಭುತ್ವದ ದರ್ವಿಗೆ ನರಳಿಕೊಂಡು

ನಮ್ಮ ಸರಕಾರಿ ಶಾಲೆಯ ಪ್ರಥಮ ತರಗತಿಯ ವಿದ್ಯಾರ್ಥಿಗಳು ಹೇಳುವುದು
ಆತ ಯಾ ಮಂದಿ ಏನೋ
ಎಲ್ಲ ಫೋಟೋಗಳಲ್ಲೂ ನಗುತ್ತಲೇ ಇರುತ್ತಾನೆ
ಎಲ್ಲರಿಗೂ ರೊಕ್ಕ ಆತನೇ ಕೊಡುತ್ತಾನೆ ಮತ್ತು ಯಾಕೇನು ಬರೆ ನಮಗೇ ನೋಡುತ್ತಾನೆ

ಕಡೆಯದಾಗಿ
ನಮ್ಮ ಊರಿನ ಮುಖ್ಯ ರಸ್ತೆಯಲಿ
ಬಂದೂಕು ಹಿಡಿದ ಪ್ರತಿಮೆಯೊಂದು ಅನಾವರಣಗೊಂಡಿದೆ
ನೋಟಿನ ತಾತನ ಆಧುನಿಕ ಮೂರ್ತಿಶಿಲ್ಪವೆಂದು
ಹೊಸ ವಿವಾದವೆದ್ದಿದೆ
ಗಾಂಧೀಗಿರಿಯ ಆಧುನೀಕರಣವೆಂದರೆ ಇದೇ ಇದ್ದಿರಬಹುದು
ಎಂದು ಬುದ್ಧಿಜೀವಿಗಳಿಗೆ ತಲೆಕೆಡುತ್ತಿದೆ


**ಆರಿಫ್ ರಾಜಾ**

ಸಾ.ಪೊ. ಅರಕೇರಾ - ೫೮೪ ೧೧೧, ರಾಯಚೂರು ಜಿಲ್ಲೆ

# ಬೇಟೆ ವೀರಗಲ್ಲು



ಹಂದಿ ನಾಯಿಯ ಹೋರಾಟದ ಚಿತ್ರ

ಪ್ರಾಚೀನ ಕಾಲದಲ್ಲಿ ಪ್ರಾಣಿಬೇಟೆಯು ಮಾನವನ ಆಹಾರ ಪದ್ಧತಿಯ ಒಂದು ವಿಧಾನವಾಗಿತ್ತು. ತದನಂತರ ಆತ ನಾಗರಿಕತೆಯ ಕಡೆ ಮುಖ ಮಾಡಿದಂತೆ ತನಗೆ ಹಾಗೂ ತಾನು ಬೆಳೆದ ಬೆಳೆಗಳಿಗೆ ಹಾನಿಯನ್ನುಂಟು ಮಾಡುತ್ತಿದ್ದ ಪ್ರಾಣಿಗಳನ್ನು ಬೇಟೆಯಾಡುವುದಕ್ಕೆ ಪ್ರಾರಂಭಿಸಿದ. ಆದಿಮಾನವನ ಬೇಟೆಗೆ ಸಂಬಂಧಿಸಿದ ಚಿತ್ರಗಳನ್ನು ಇಂದಿಗೂ ಈಜಿಪ್ಟ್ ಮುಂತಾದ ದೇಶಗಳ ಬಂಡೆ ಮತ್ತು ಕಲ್ಲಾಸರೆಗಳಲ್ಲಿ ಕಾಣಬಹುದಾಗಿದೆ.

ಕರ್ನಾಟಕಕ್ಕೆ ಸಂಬಂಧಿಸಿದಂತೆ ಅನೇಕ ವೀರಗಲ್ಲುಗಳು ಉಪಲಬ್ಧವಿದ್ದು ನಾಡಿನ ಸಂಸ್ಕೃತಿಯ ಅಧ್ಯಯನದ ಸಂದರ್ಭದಲ್ಲಿ ಹೊಸ ರೀತಿಯ ಬೆಳಕನ್ನು ಚೆಲ್ಲುತ್ತವೆ. ವೀರಗಲ್ಲುಗಳು ಒಂದು ಘಟನೆಯ ವಿವರಗಳನ್ನು ಒಂದು ಚಿತ್ರಣದ ಮೂಲಕ ತಿಳಿಸುವ ಸಂವಹನ ಮಾಧ್ಯಮವಾಗಿದ್ದು ಪ್ರಾಣಿಬೇಟೆಯ ಸಂದರ್ಭದಲ್ಲಿ ಹೋರಾಡಿ ಮಡಿದ ವೀರನ ವೀರಾವೇಶದ ಚಿತ್ರದ ಜೊತೆಗೆ ಪ್ರಾಣಿಯು ತನ್ನ ಪ್ರಾಣದ ಉಳಿವಿಗಾಗಿ ಹೋರಾಡುವ ಚಿತ್ರ ಮನಮೋಹಕ.



ಹುಲಿಬೇಟೆ, ಬೆಂಗಳೂರು ಕೋಟೆ

ಬೇಟೆಯಲ್ಲಿ ಪ್ರಮುಖವಾಗಿ ಕಂಡುಬರುವುದು ಹಂದಿಬೇಟೆ, ಹುಲಿಬೇಟೆ, ಆನೆಬೇಟೆ, ಜಿಂಕೆಬೇಟೆ, ಮೊಸಳೆಯ ಬೇಟೆ, ಕಾಡುಕೋಣನಬೇಟೆ ಮೊದಲಾದುವು.

ಮಾನವ ಬೆಳೆದ ಬೆಳೆಗಳಿಗೆ ಹೆಚ್ಚು ಹಾನಿಯನ್ನುಂಟು ಮಾಡುತ್ತಿದ್ದ ಪ್ರಾಣಿ ಹಂದಿ. ಹಂದಿ ಬೇಟೆಯ ಸಂದರ್ಭದಲ್ಲಿ ಮಡಿದ ವೀರರ ಬಗ್ಗೆ ತಿಳಿಸುವ ಅನೇಕ ವೀರಗಲ್ಲುಗಳು ಲಭ್ಯವಿದ್ದು, ತಿಪ್ಪೂರು, ಆತಕೂರು, ಬಳ್ಳಿಗಾವೆ, ಬೆಂಗಳೂರಿನ ಯಲಹಂಕ, ಆಲದಗೇರಿ, ನೆಲವಾಗಿಲು, ಕೋಡಿಹಳ್ಳಿ ಮುಂತಾದ ಕಡೆಗಳಲ್ಲಿ ಹಂದಿಬೇಟೆಗೆ ಸಂಬಂಧಿಸಿದ ವೀರಗಲ್ಲುಗಳಿವೆ. ಹಂದಿಬೇಟೆಯ ಸಂದರ್ಭದಲ್ಲಿ ಬೇಟೆಗಾರನಿಗೆ ಹೆಚ್ಚು ಸಹಾಯ ಮಾಡುತ್ತಿದ್ದ ಪ್ರಾಣಿ ಎಂದರೆ ನಾಯಿ. ಆತಕೂರು ಶಾಸನದಲ್ಲಿನ ಶಿಲ್ಪದಲ್ಲಿ ಮಣಲೆರನ ಪ್ರೀತಿಯ ನಾಯಿ ಕಾಳಿ ಮತ್ತು ಕಾಡುಹಂದಿಯ ವೀರಾವೇಶದ ಹೋರಾಟದ ಚಿತ್ರವನ್ನು ಗಮನಿಸಬಹುದಾಗಿದೆ.

ಹಂದಿಬೇಟೆಗೆ ಸಂಬಂಧಿಸಿದಂತೆ ಹೆಚ್ಚಿನ ಮಾಹಿತಿಯನ್ನು ಸಾಹಿತ್ಯ ಕೃತಿಗಳಲ್ಲಿಯೂ



ಹುಲಿಬೇಟೆ, ಬೆಂ.ವಿ.ವಿ.

ಕಾಣಬಹುದಾಗಿದೆ. ವ್ಯಾಸಭಾರತದ ಅರಣ್ಯಪರ್ವದಲ್ಲಿ ಕಿರಾತಾರ್ಜುನೀಯ ಪ್ರಸಂಗದಲ್ಲಿ ಶಿವ ಮತ್ತು ಅರ್ಜುನರು ಹಂದಿಯನ್ನು ಬೇಟೆಯಾಡುವ ಕಥೆಯನ್ನು ಚಿತ್ರಿಸಲಾಗಿದೆ. ರಾಘವಾಂಕನ ಹರಿಶ್ಚಂದ್ರ ಕಾವ್ಯದಲ್ಲಿ ಹರಿಶ್ಚಂದ್ರನು ಬೇಟೆಗೆ ಹೋದಾಗ ವಿಶ್ವಾಮಿತ್ರ ಸೃಷ್ಟಿಸಿದ ಮಾಯಾವರಾಹದ ಬೇಟೆಯ ವರ್ಣನೆ ವಿಶೇಷವಾಗಿರುವುದನ್ನು ಗಮನಿಸಬಹುದಾಗಿದೆ.

ಹಂದಿಯ ನಂತರ ಮಾನವ ಹಾಗೂ ಆತ ಸಾಕಿದ ಪ್ರಾಣಿಗಳ ಪ್ರಾಣಕ್ಕೆ ಕಂಟಕ ತರುತ್ತಿದ್ದ ಪ್ರಾಣಿ ಎಂದರೆ ಹುಲಿ. ಹುಲಿಬೇಟೆಗೆ ಸಂಬಂಧಿಸಿದ ವೀರಗಲ್ಲು ಬಹಳ ವಿಶೇಷತೆಯಿಂದ ಕೂಡಿದ್ದು ತಮಗೆ ತೊಂದರೆ ಕೊಡುತ್ತಿದ್ದ ಹುಲಿಯ ವಿರುದ್ಧ ಹೋರಾಡಿ ವೀರಮರಣ ಹೊಂದಿದ ವೀರರ ನೆನಪನ್ನು ತರುವಂತಹ ಕಲ್ಲುಗಳಿದ್ದುವು. ಮೂರು ಮತ್ತು ನಾಲ್ಕು ಹಂತಗಳುಳ್ಳ ವೀರಗಲ್ಲುಗಳು ಸಹ ಇವೆ. ಈ ರೀತಿಯ ವೀರಗಲ್ಲುಗಳು ಕುಪ್ಪಮಾರು, ಬಳ್ಳಿಗಾವೆ, ಎಡೆಯೂರು, ತಿಮ್ಮೋಜನ ಹಳ್ಳಿ, ಬೂದಿಗುಪ್ಪೆ, ಎಡಮಾರನಹಳ್ಳಿ, ನಿಜಗಲ್ ಕೆಂಪೋಹಳ್ಳಿ, ಕಲ್ಯ ಮುಂತಾದ ಕಡೆಗಳಲ್ಲಿ ಲಭ್ಯವಿವೆ.



ಹಾವಿನ ಬೇಟೆ, ದೊಡ್ಡ ಹುಲ್ಲೂರು

ಕಲ್ಯದಲ್ಲಿರುವ ವೀರಗಲ್ಲೊಂದು ಮೂರು ಹಂತಗಳಲ್ಲಿದ್ದು, ಹುಲಿಬೇಟೆಯ ಸ್ಪಷ್ಟ ಚಿತ್ರಣವಿದೆ. ಹುಲಿಯು ವೀರನ ಮೇಲೆ ಎರಗಿದ್ದು, ವೀರನು ಹೆದರದೆ ಧೈರ್ಯದಿಂದ ಹುಲಿಯನ್ನು ಒಂದು ಕೈಯಲ್ಲಿ ಹಿಡಿದಿದ್ದು, ಮತ್ತೊಂದು ಕೈಯಲ್ಲಿ ಈಟಿಯಿಂದ ಹುಲಿಯನ್ನು ಕೊಲ್ಲುತ್ತಿದ್ದಾನೆ. ಗಮನಿಸಬಹುದಾದ ಅಂಶವೆಂದರೆ ವೀರನ ಹಿಂಭಾಗದಲ್ಲಿ ಹಸುವಿದ್ದು, ಬಹುಶಃ ಹಸುವಿನ ರಕ್ಷಣೆಗೆ ಬಂದು ವೀರಮರಣ ಹೊಂದಿರಬಹುದು. ಉಳಿದ ಹಂತಗಳಲ್ಲಿ ವೀರನ ಸ್ವರ್ಗಾರೋಹಣದ ಚಿತ್ರಣವಿದೆ.

ಬೆಂಗಳೂರು ಕೋಟೆಯಲ್ಲಿರುವ ಮತ್ತೊಂದು ವೀರಗಲ್ಲು ವಿಶೇಷತೆಯಿಂದ ಕೂಡಿದೆ. ಈ ವೀರಗಲ್ಲಿನಲ್ಲಿ ವೀರನು ಹುಲಿಯೊಂದಿಗೆ ಹೋರಾಟ ನಡೆಸುತ್ತಿರುವ ಚಿತ್ರವಿದೆ. ಇಲ್ಲಿ ವೀರ ಮಂಡಿಯೂರಿ ಕುಳಿತಿದ್ದು, ಬಲಗೈಯಲ್ಲಿನ ಆಯುಧವನ್ನು ಎದೆಯ ಭಾಗಕ್ಕೆ ಚುಚ್ಚಿದ್ದು, ಆಯುಧದ ಮೊನೆ ಹೊರಬಂದಿರುವ ಅಂಶವನ್ನು ಗಮನಿಸಬಹುದು. ಮತ್ತೊಂದು ಕೈಯಲ್ಲಿನ ಆಯುಧವನ್ನು ಹುಲಿಯ ಬಾಯಿಗೆ ಚುಚ್ಚಿದ್ದಾನೆ. ಹಿಂಬದಿಯಲ್ಲಿ ನಾಯಿಯು ಹುಲಿಯ ಮೇಲೆ ಎರಗಿದೆ.

ಈ ಶಿಲ್ಪದಲ್ಲಿ ಪ್ರಾಣಿಯ ಆಕಾರವು ದೊಡ್ಡದಾಗಿದ್ದು



ಮೊಸಳೆ ಬೇಟೆ, ಮುತ್ತತ್ತಿ

— ನಾಗೇಂದ್ರ —

ಹುಲಿಯೋ ಅಥವಾ ಸಿಂಹವೋ ಎಂಬುವ ಸಂಶಯವನ್ನು ತರುವ ರೀತಿಯಲ್ಲಿದೆ.

ಹಾವಿನ ಬೇಟೆಗೆ ಸಂಬಂಧಿಸಿದಂತೆ ದೊಡ್ಡ ಹುಲ್ಲೂರಿನಲ್ಲಿರುವ ವೀರಗುಡಿಯಲ್ಲಿ ದೊರೆತಿರುವ ಒಂದು ವೀರಗಲ್ಲಲ್ಲಿ ವೀರನೊಬ್ಬ ಕತ್ತಿಯನ್ನು ಹಿಡಿದುನಿಂತಿದ್ದು, ಮತ್ತೊಬ್ಬ ಹಾವನ್ನು ಕೊಲ್ಲುತ್ತಿರುವ ಶಿಲ್ಪವಿದೆ. ಇದು ಹಾವಿನ ಬೇಟೆಗೆ ಸಂಬಂಧಿಸಿದ ಶಿಲ್ಪವೆಂಬುದಾಗಿ ಕೆಲವು ವಿದ್ವಾಂಸರು ಅಭಿಪ್ರಾಯಪಟ್ಟರೆ, ಮತ್ತೆ ಕೆಲವು ವಿದ್ವಾಂಸರು ಇದು ಬೇಟೆಗೆ ಸಂಬಂಧಿಸಿದ ವೀರಗಲ್ಲಲ್ಲ ಎಂದು ಅಭಿಪ್ರಾಯ ಪಡುತ್ತಾರೆ. ಈ ರೀತಿಯ ಶಿಲ್ಪವನ್ನು ಸರ್ಪಗೋತ್ರದ ಜನರು ತಮ್ಮ ಹರಕೆಗಳನ್ನು ತೀರಿಸಿಕೊಳ್ಳಲು ಹಾಕುತ್ತಿದ್ದರು. ಜೊತೆಗೆ ಅಲ್ಲಿರುವ ಬೇರೆ ವೀರಗಲ್ಲುಗಳೂ ಸಹ ಬೇರೆ ಬೇರೆ ಗೋತ್ರದ ಜನರು ಹಾಕಿಸಿರುವ ಕಲ್ಲುಗಳಾಗಿದ್ದು, ಆ ಗೋತ್ರದ ಜನ ಇಂದಿಗೂ ಅಕ್ಕಪಕ್ಕದ ಹಳ್ಳಿಗಳಲ್ಲೇ ವಾಸವಿರುವುದು ತಿಳಿದುಬರುತ್ತದೆ. ಬೆಂಗಳೂರು ಸಮೀಪದ ಕಲ್ಲೂರಿನಲ್ಲಿರುವ ವರದರಾಜಸ್ವಾಮಿ ದೇವಾಲಯದಲ್ಲಿನ ಒಂದು ಶಿಲ್ಪವು ಹಾವಿನ ಬೇಟೆಗೆ ಸಂಬಂಧಿಸಿದ್ದಾಗಿದೆ. ವೀರ ಇಲ್ಲಿ ಸಾಮಾನ್ಯ ವೇಷಧಾರಿಯಾಗಿದ್ದು, ಕೈಯಲ್ಲಿ ಕುಡುಗೋಲನ್ನು ಹಿಡಿದಿದ್ದು, ಅಕ್ಕಪಕ್ಕದಲ್ಲಿ ಎರಡು ಹಾವಿನ ಶಿಲ್ಪವಿದೆ. ಬಹುಶಃ ವೀರ ಕೃಷಿಕ ವೃತ್ತಿಯವನಾಗಿರಬಹುದು.



*ಜಿಂಕೆ ಬೇಟೆ, ಬನಶಂಕರಿ ೨ನೇ ಹಂತ*

ಮುತ್ತತ್ತಿಯಲ್ಲಿ ದೊರೆತಿರುವ ವೀರಗಲ್ಲು ಮೊಸಳೆ ಬೇಟೆಗೆ ಸಂಬಂಧಿಸಿದಂತಹ ವೀರಗಲ್ಲಾಗಿದೆ. ಇಲ್ಲಿ ವೀರನ ಕಾಲಿಗೆ ಮೊಸಳೆಯು ಬಾಯಿ ಹಾಕಿದ್ದು, ಮತ್ತೊಬ್ಬ ವೀರ ಅವನ ರಕ್ಷಣೆಗೆ ಧಾವಿಸಿದ್ದು, ಇಬ್ಬರೂ ನಿರಾಯುಧರಾಗಿರುವುದನ್ನು ಕಾಣಬಹುದಾಗಿದೆ. ಜೊತೆಗೆ ನಾಯಿಗಳು ನಿಸ್ಸಹಾಯಕವಾಗಿವೆ. ಇಲ್ಲಿ ತಮಿಳು ಲಿಪಿಯಲ್ಲಿ ಕೆತ್ತಲ್ಪಟ್ಟಿರುವ ಶಾಸನವೂ ಇದೆ.

ಜಿಂಕೆಬೇಟೆಗೆ ಸಂಬಂಧಿಸಿದ ಶಿಲ್ಪ ಬೆಂಗಳೂರಿನ ಬನಶಂಕರಿಯಲ್ಲಿ ದೊರೆತಿದ್ದು, ವೈಶಿಷ್ಟ್ಯಪೂರ್ಣವಾಗಿದೆ. ಜೊತೆಗೆ ಹೊಸರೀತಿಯ ಅನ್ವೇಷಣೆಗಳಿಗೆ ಅವಕಾಶ ಮಾಡಿಕೊಟ್ಟಿದೆ. ವೀರ ಇಲ್ಲಿ ಬೇಡರ ವೇಷದಲ್ಲಿರುವುದನ್ನು ಕಾಣಬಹುದು. ಬೇಟೆಗೆ ಹೋದಾಗ ವಿರುದ್ಧ ಗುಂಪಿನವರ ಬಾಣ ತಾಗಿ ವೀರ ಮಡಿದಿರಬಹುದು. ಇದು ಜಿಂಕೆಯನ್ನು ರಕ್ಷಿಸಿದ ಸ್ಮಾರಕ ಶಿಲ್ಪವಿರಬಹುದು. ಇಲ್ಲಿ ವೀರನನ್ನು ಅಪ್ಸರೆಯರು ಸ್ವರ್ಗಕ್ಕೆ ಕರೆದೊಯ್ಯುವ ಶಿಲ್ಪವೂ ಇದೆ.

ಹೀಗೆ ಕರ್ನಾಟಕದಲ್ಲಿ ವಿವಿಧ ರೀತಿಗಳಾದ ಹಂದಿಬೇಟೆ, ಹುಲಿಬೇಟೆ, ಹಾವಿನಬೇಟೆ, ಜಿಂಕೆಬೇಟೆ, ಮೊಸಳೆಬೇಟೆಗಳಿಗೆ ಸಂಬಂಧಿಸಿದ ವಿಷಯುಗಳನ್ನು ಶಾಸನಗಳಲ್ಲಿ ಅಥವಾ ವೀರಗಲ್ಲುಗಳಲ್ಲಿ ಗುರುತಿಸಬಹುದಾಗಿದೆ.

ನಾಗೇಂದ್ರ
[illegible], ಮಾಗಡಿ ಮುಖ್ಯರಸ್ತೆ, ಬೆಂಗಳೂರು - [illegible]



ತುಮಕೂರಿನ ಶ್ರೀಮತಿ ಸರೋಜಮ್ಮ ಮತ್ತು ಶ್ರೀ ಟಿ. ಆರ್.ರೇವಣ್ಣ ಚಾರಿಟಬಲ್ ಟ್ರಸ್ಟ್ (ರಿ) ಆಗಸ್ಟ್, ೨೦೦೯ರಲ್ಲಿ ಅಸ್ತಿತ್ವಕ್ಕೆ ಬಂದಿತು. ಪ್ರತಿ ವರ್ಷವೂ ಅದು ಎರಡು ಪ್ರಶಸ್ತಿಗಳನ್ನು ನೀಡಲಿದೆ: (ಅ) ಶ್ರಮಜ್ಯೋತಿ (ಅಸಂಘಟಿತ ದುಡಿಯುವ ಮಹಿಳೆಯರ ಮಧ್ಯೆ ಪೂರ್ಣಾವಧಿಯ ಮಹಿಳಾ ಕಾರ್ಯಕರ್ತೆಗೆ ಮಾರ್ಚ್ ೮ರಂದು); (ಆ) ಮೇ ಡೇ (ಅದೇ ರೀತಿ ಪುರುಷ ಕಾರ್ಯಕರ್ತರಿಗೆ ಮೇ ೧ರಂದು). ಈ ವರ್ಷ ಶ್ರೀಮತಿ ರಾಧಾ ಸುಂದರೇಶ್ ಮತ್ತು ಶ್ರೀ ಮಹಮದ್ ದಸ್ತಗಿರ್ ಪ್ರಶಸ್ತಿ ಪಡೆದಿದ್ದಾರೆ. ಟ್ರಸ್ಟಿನ ಇನ್ನೊಂದು ಸ್ವಾಗತಾರ್ಹ ಕಾರ್ಯಕ್ರಮ : ತುಮಕೂರು ನಗರಸಭೆಯ ಪೌರಕಾರ್ಮಿಕರೊಬ್ಬರ ಮಗಳೊಬ್ಬಳಿಗೆ ೧೦ನೆಯ ತರಗತಿಯವರೆಗೆ ವ್ಯಾಸಂಗ ಮಾಡಲು ವೆಚ್ಚ ಭರಿಸುವುದು.

(ಚಿತ್ರ : ಟ್ರಸ್ಟಿನ ಉದ್ಘಾಟನೆ)

## ನವಕರ್ನಾಟಕದ ಹೊಸ ಪ್ರಕಟಣೆಗಳು

**ನವೆಂಬರ್ ೨೨, ೨೦೦೯ರಂದು ಬೆಳಿಗ್ಗೆ ೧೦ ಗಂಟೆಗೆ ಅನಾವರಣ**

ಸ್ಥಳ : ನಯನ ಸಭಾಂಗಣ, ಕನ್ನಡ ಭವನ, ಬೆಂಗಳೂರು

* ಬಾಯಿಯಿದ್ದವರು ಬರದಲ್ಲಿ ಬದುಕುತ್ತಾರೆ — ಬಿ. ಎಸ್. ರುಕ್ಕಮ್ಮ, (ಮಧ್ಯಕಾಲೀನ ಭಾರತದ ಜನಪದ ಕಥೆಗಳು) — ಎಸ್. ಆರ್. ರಂಗಮಣಿ
* ಅಧಿಕಾರದ ಕುರುಡು — ಬಿ. ಎಸ್. ರುಕ್ಕಮ್ಮ, ಎಸ್. ಆರ್. ರಂಗಮಣಿ (ಮಧ್ಯಕಾಲೀನ ಭಾರತದ ಜನಪದ ಕಥೆಗಳು)
* ಚಿಟ್ಟೆಹಾಡು ಮತ್ತು ಇರುವೆ ಮದುವೆ (ಸಂಗ್ರಹ) — ಶಾಂತಾರಾಮ ಸೋಮಯಾಜಿ
* ದೇಶವಿದೇಶಗಳ ವಿನೋದ ಕತೆಗಳು (ಸಂಗ್ರಹ) — ಶಾಂತಾರಾಮ ಸೋಮಯಾಜಿ
* ನೀತಿ ನಡತೆಯ ಕಥೆಗಳು — ವಿವಿಧ ಲೇಖಕರು
* ಸರ್ವರಿಗೂ ಸಮಪಾಲು (ಸಂಗ್ರಹ) — ಬೇದ್ರೆ ಮಂಜುನಾಥ
* ಚೀನಾದ ಚಿಟ್ಟೆ ಕಥೆಗಳು (ಸಂಗ್ರಹ) — ಬೇದ್ರೆ ಮಂಜುನಾಥ
* ಪುಟಾಣಿ ಪದ್ಯಗಳು — ಡಾ|| ಪಿ. ನಾರಾಯಣ ಭಟ್
* ಜೀವಜಗತ್ತಿನ ಕೌತುಕಗಳು - ನಿದ್ರೆ ವಿಶ್ರಾಂತಿ — ಡಾ|| ಎನ್. ಎಸ್. ಲೀಲಾ
* ಜೀವಜಗತ್ತಿನ ಕೌತುಕಗಳು - ಹುಟ್ಟು ಸಾವು — ಡಾ|| ಎನ್. ಎಸ್. ಲೀಲಾ



# ಬದ್ಧತೆಗೆ, ಸರಳತೆಗೆ ಮತ್ತೊಂದು ಹೆಸರು ಡಾ॥ ಬಾಲಗೋಪಾಲ್

## (ಜೂನ್ ೧೦, ೧೯೫೨ – ಅಕ್ಟೋಬರ್ ೮, ೨೦೦೯)

ಜನಸಾಮಾನ್ಯರಿಗೆ ಕಾನೂನು ಹೋರಾಟದಲ್ಲಿ ನೆರವಾಗಲು ಬೆಂಗಳೂರು ವಿಶ್ವವಿದ್ಯಾಲಯದಿಂದ ಕಾನೂನು ಪದವಿ ಪಡೆದು 'ಗರೀಬರ ವಕೀಲ' ರಾದರು. ತಮ್ಮ ಆದಾಯಕ್ಕೆ ಒಂದು ಮಿತಿಯನ್ನು ವಿಧಿಸಿ ಕೊಂಡು ಅವರು ವಾದಿಸುತ್ತಿದ್ದ ಹಲವು ಕೇಸುಗಳು ವಕೀಲರ ಶುಲ್ಕವನ್ನು ಕೊಡಲಾರದ ಸ್ಥಿತಿಯಲ್ಲಿನ ಜನರವೇ. ಇವರ ವಾದವನ್ನು ಕೇಳುವುದಕ್ಕಾಗಿಯೇ ನ್ಯಾಯಮೂರ್ತಿಗಳು ಆಸಕ್ತಿಯಿಂದ ಕಾಯುತ್ತಿದ್ದ ಪ್ರಕರಣಗಳು ಹಲವು.

**ನಗರಗೆರೆ ರಮೇಶ್**

ಪ್ರಮುಖ ವ್ಯಕ್ತಿಯೊಬ್ಬರು ಮರಣ ಹೊಂದಿದಾಗ 'ತುಂಬಲಾರದ ನಷ್ಟ'ವೆಂಬ ಮಾತು ಅತಿಯಾಗಿ ಬಳಕೆಯಾಗಿ ಈಗ ಅದೊಂದು ಕ್ಲೀಶೆಯಾಗಿದೆ. ಆದರೆ ಕೆಲವು ಪದಗಳು ಕ್ಲೀಶೆಗಳಾದರೂ ಕೆಲವು ಸಂದರ್ಭಗಳಲ್ಲಿಯಾದರೂ ಸತ್ಯವಾಗಿರುತ್ತವೆ. ೨೦೦೯, ಅಕ್ಟೋಬರ್ ೮ರಂದು ತಮ್ಮ ೫೭ನೆಯ ವಯಸ್ಸಿನಲ್ಲಿ ಅಲ್ಸರ್‌ನಿಂದಾಗಿ ನಿಧನರಾದ ಡಾ॥ ಬಾಲಗೋಪಾಲ್‌ರವರ ವಿಷಯದಲ್ಲಿಯಂತೂ 'ತುಂಬಲಾರದ ನಷ್ಟ'ವೆಂಬುದು ಸಂಪೂರ್ಣ ಸತ್ಯ.

ಕರ್ನಾಟಕದ ಸಾರಸ್ವತ ಲೋಕಕ್ಕೂ ಪರಿಚಯವಿರುವ ಶ್ರೀ ರಾಳ್ಳಪಲ್ಲಿ ಅನಂತಕೃಷ್ಣ ಶರ್ಮರವರ ಎಂಟನೆಯ ಮಗುವಾಗಿ ಜನಿಸಿದ ಬಾಲಗೋಪಾಲ್‌ನ ತಂದೆಯವರು ಉದ್ಯೋಗ ರೀತ್ಯಾ ಹೋದ ಕಡೆಗಳಲ್ಲೆಲ್ಲಾ ವಿದ್ಯಾಭ್ಯಾಸ ನಡೆಸಿ ವರಂಗಲ್‌ನ ರೀಜನಲ್ ಇಂಜನಿಯರಿಂಗ್ ಕಾಲೇಜಿನಲ್ಲಿ ಗಣಿತಶಾಸ್ತ್ರದಲ್ಲಿ ಎಂ.ಎಸ್ಸಿ. ಮತ್ತು ಪಿಎಚ್.ಡಿ. ಪದವಿ ಪಡೆದು ನವದೆಹಲಿಯ ಇಂಡಿಯನ್ ಸ್ಟಾಟಿಸ್ಟಿಕಲ್ ಇನ್‌ಸ್ಟಿಟ್ಯೂಟ್‌ನಲ್ಲಿ ಸಂಶೋಧನೆಗಾಗಿ ಸೇರಿ ಮತ್ತೆ ವರಂಗಲ್‌ನ ಕಾಕತೀಯ ವಿಶ್ವವಿದ್ಯಾಲಯದಲ್ಲಿ ಗಣಿತಶಾಸ್ತ್ರ ಅಧ್ಯಾಪಕರಾದರು. ವಿದ್ಯಾರ್ಥಿದೆಸೆಯಿಂದಲೂ ಅತ್ಯಂತ ಪ್ರತಿಭಾವಂತರಾಗಿದ್ದ ಅವರು, ಪಿಎಚ್.ಡಿ.ಗಾಗಿ ತಯಾರಿ ನಡೆಸುತ್ತಿದ್ದಾಗಲೇ ಒಂದು ಅಂತರರಾಷ್ಟ್ರೀಯ ಗಣಿತಶಾಸ್ತ್ರ ಪತ್ರಿಕೆಗೆ ಸಂಪಾದಕರಲ್ಲೊಬ್ಬರಾಗಿದ್ದರು. ತನ್ನ ಮೇಧಾಶಕ್ತಿ ಹಾಗೂ ಅಧ್ಯಾಪನ ಕೌಶಲ್ಯಗಳಿಂದಾಗಿ ವಿದ್ಯಾರ್ಥಿಗಳಿಗೆ ಅಚ್ಚುಮೆಚ್ಚಿನ ಅಧ್ಯಾಪಕರಾಗಿದ್ದರು.

ಇಪ್ಪತ್ತನೆಯ ಶತಮಾನದ ಎಂಬತ್ತನೆಯ ದಶಕದ ಆ ಕಾಲಘಟ್ಟದಲ್ಲಿ ತೆಲಂಗಾಣದಲ್ಲಿ ಊಳಿಗಮಾನ್ಯದ ವಿರುದ್ಧ ಜನರ ಹೋರಾಟ ಉಚ್ಛ್ರಾಯ ಸ್ಥಿತಿಯಲ್ಲಿತ್ತು. ಈ ಹೋರಾಟವನ್ನು ಹತ್ತಿಕ್ಕಲು ಆಂಧ್ರ ಸರ್ಕಾರ ತನ್ನ ಎಲ್ಲ ಪೊಲೀಸ್ ಶಕ್ತಿಯನ್ನು ಬಳಸುತ್ತಿತ್ತು. ಪೊಲೀಸರಿಂದ ಹತರಾಗುತ್ತಿದ್ದ ಹಾಗೂ ಭೂ ಮಾಲೀಕರ ದೌರ್ಜನ್ಯಕ್ಕೆ ಒಳಗಾಗುತ್ತಿದ್ದ ಜನರ ಮೂಲಭೂತಹಕ್ಕುಗಳ ರಕ್ಷಣೆಗಾಗಿ ಆಂಧ್ರ ಪ್ರದೇಶ್ ಸಿವಿಲ್ ಲಿಬರ್ಟೀಸ್ ಕಮಿಟಿಯ ಸ್ಥಾಪನೆಯಾಗಿತ್ತು. ಕೇವಲ ಅಕಡಮಿಕ್ ವಲಯಗಳಲ್ಲಿ ಇರುವಂಥ ವ್ಯಕ್ತಿಯಲ್ಲದ ಬಾಲಗೋಪಾಲ್ ತುಂಬ ಸಹಜವಾಗಿ ಈ ಮಾನವ ಹಕ್ಕು ಸಂಘಟನೆಯ ಸಕ್ರಿಯ ಕಾರ್ಯಕರ್ತರಾಗಿ, ೧೯೮೩ರಲ್ಲಿ ಆ ಸಂಸ್ಥೆಯ ಪ್ರಧಾನ ಕಾರ್ಯದರ್ಶಿಯಾದರು. ಹದಿನೈದು ವರ್ಷಗಳ ಕಾಲ ಅದೇ ಹುದ್ದೆಯಲ್ಲಿ ಮುಂದುವರೆದ ಅವರು ಎನ್‌ಕೌಂಟರ್‌ಗಳ ನಿಜಸ್ವರೂಪವನ್ನು ಬಯಲು ಮಾಡುವಲ್ಲಿ ತಮ್ಮೆಲ್ಲ ಶಕ್ತಿಯನ್ನು ಧಾರೆಯೆರೆದರು. ಅವರ ನಾಯಕತ್ವದಲ್ಲಿ ಎಪಿಸಿಎಲ್‌ಸಿ ಆಂಧ್ರದ ಉದ್ದಗಲಕ್ಕೂ ತನ್ನ ಘಟಕಗಳನ್ನು ಹೊಂದುವುದು ಸಾಧ್ಯವಾಯಿತು. ಈ ಸಂಘಟನೆಯ ಹಲವಾರು ನಾಯಕರು ಪೊಲೀಸರ, ಅವರ ಭಂಟರ ಕೈಯಲ್ಲಿ ಹತರಾದರು. ಡಾ॥ ಬಾಲಗೋಪಾಲ್‌ರವರ ಮೇಲೆಯೂ ಹತ್ಯಾ ಪ್ರಯತ್ನ ನಡೆದದ್ದು ಮಾತ್ರವಲ್ಲ, ಒಂದು ಬಾರಿ ಪೊಲೀಸರೇ ಅವರನ್ನು ಅಪಹರಿಸಿದ್ದರು. ೧೯೮೫ರಲ್ಲಿ ಟಾಡಾದಡಿಯಲ್ಲಿ ಮೂರು ತಿಂಗಳ ಜೈಲು ಶಿಕ್ಷೆಯನ್ನೂ ಅನುಭವಿಸಿದರು. ಆದರೆ ಇವು ಯಾವುವೂ ಅವರನ್ನು ತಾನು ಆಯ್ದುಕೊಂಡಿದ್ದ ಹಾದಿಯಿಂದ ತಪ್ಪಿಸುವಲ್ಲಿ ಯಶಸ್ವಿಯಾಲಿಲ್ಲ.

ತಾವು ಬಯಸಿದ್ದರೆ, ವಿಶ್ವವಿದ್ಯಾಲಯಗಳಲ್ಲಿ ಗಣಿತಶಾಸ್ತ್ರ ಅಧ್ಯಾಪಕರಾಗಿ ಇನ್ನೂ ಎತ್ತರದ ಹಂತಗಳನ್ನೂ ತಲುಪಿ ಅಂತರರಾಷ್ಟ್ರೀಯ ಖ್ಯಾತಿಯನ್ನೂ ಗಳಿಸಿ, ಸುಖಜೀವನ ನಡೆಸಬಹುದಾಗಿದ್ದರೂ ಬಾಲಗೋಪಾಲ್‌ರವರು ಆರಿಸಿಕೊಂಡಿದ್ದು ಮುಳ್ಳಿನ ಹಾದಿಯನ್ನು. ನಾವು ಮುಳ್ಳಿನ ಹಾದಿ ಎಂದು ಕರೆಯುವುದು ಅವರ ದೃಷ್ಟಿಯಲ್ಲಿ ಹಾಗಾಗಿರಲಿಲ್ಲ. ಅವರಿಗೆ ಅದೇ ಸರಿಯಾದ ಹಾದಿ. ಅವರ ಹೋರಾಟದ ಹಾದಿಯಲ್ಲಿ ಅವರು ಆಂಧ್ರ ರಾಜ್ಯದ ಮೂಲೆಮೂಲೆಯಲ್ಲಿಯೂ ಸಂಚರಿಸಿ ಮಾನವ ಹಕ್ಕುಗಳ ಉಲ್ಲಂಘನೆಯಾದಾಗಲೆಲ್ಲಾ ಅದರ ಮೂಲಗಳನ್ನು ಹೆಕ್ಕಿ ತೆಗೆಯುತ್ತಿದ್ದರು. ಈ ಉದ್ದೇಶ ಸಾಧನೆಗೆ ಅವರು ತಮ್ಮ ಅಧ್ಯಾಪಕ ವೃತ್ತಿಯನ್ನೂ ಬಿಟ್ಟು ಪೂರ್ಣಾವಧಿ ಕಾರ್ಯಕರ್ತರಾದರು.

ಬಾಲಗೋಪಾಲ್‌ರವರನ್ನು ಬಲ್ಲವರು ಅವರ ಬದ್ಧತೆಯ ಜತೆಗೆ ಅವರ ಸರಳ ಜೀವನವನ್ನೂ ಮರೆಯಲಾರರು. ತಮಗೆ ಅತ್ಯವಶ್ಯಕವಾಗಿ ಬೇಕಾಗುವ ವಸ್ತುಗಳಿಗಿಂತಲೂ ಹೆಚ್ಚಾಗಿ ಎಂದೂ ಏನನ್ನೂ ಹೊಂದಿರಬಾರದೆಂಬುದು ಅವರ ನಿಲುವು. ಅದನ್ನು ಅವರು ಅಕ್ಷರಶಃ ಪಾಲಿಸುತ್ತಿದ್ದರು. ರಾಜ್ಯಮಟ್ಟದ ಸಂಘಟನೆಯೊಂದರ ನಾಯಕರಾಗಿದ್ದ ಅವರು ಎಲ್ಲರಂತೆ ಕರಪತ್ರಗಳನ್ನು ಹಂಚುವುದು, ಪೋಸ್ಟರ್‌ಗಳನ್ನು ಹಚ್ಚುವುದು, ಸಂಘಟನೆಯ ಪ್ರಕಟಣೆಗಳನ್ನು ಮಾರುವುದು ಮುಂತಾದ ಎಲ್ಲ ಚಟುವಟಿಕೆಗಳಲ್ಲಿಯೂ ಪಾಲ್ಗೊಳ್ಳುತ್ತಿದ್ದರು.

೧೯೯೮ರಲ್ಲಿ ಹಿಂಸೆ, ಅಹಿಂಸೆ, ರಾಜ್ಯ ಹಿಂಸೆಗಳ ವಿಷಯದಲ್ಲಿ ಎಪಿಸಿಎಲ್‌ಸಿಯು ಇತರ ಸದಸ್ಯರ ಜತೆಗಿನ

ಭಿನ್ನಾಭಿಪ್ರಾಯಗಳಿಂದಾಗಿ ಅಲ್ಲಿಂದ ಹೊರಬಂದು ಹ್ಯೂಮನ್ ರೈಟ್ಸ್ ಫೋರಂ (ಮಾನವ ಹಕ್ಕುಗಳ ವೇದಿಕೆ) ಹುಟ್ಟುಹಾಕಿದರು. ಅವರ ನಾಯಕತ್ವದಲ್ಲಿ ಈ ಸಂಘಟನೆಯೂ ಬಹುಬೇಗ ರಾಜ್ಯಾದ್ಯಂತ ಹೆಸರು ವಾಸಿಯಾಗಿ ಹಲವು ಘಟಕಗಳನ್ನು ಹೊಂದಿತು. ಅಕ್ಟೋಬರ್ ೨, ೩ರಂದು ಅನಂತಪುರದಲ್ಲಿ ನಡೆದ ಸಭೆಗಳ ಸಮಯದಲ್ಲಿ ಬೇರೊಬ್ಬರಿಗೆ ಆ ಹುದ್ದೆಯನ್ನು ವಹಿಸಿಕೊಡುವವರೆಗೂ ಅವರು ಹೆಚ್‌ಆರ್‌ಎಫ್‌ನ ಕಾರ್ಯದರ್ಶಿಯಾಗಿದ್ದರು. ಆಂಧ್ರದಲ್ಲಿ ಮಾತ್ರವಲ್ಲದೆ ದೇಶದಲ್ಲಿ ಜನರ ಹೋರಾಟಗಳು ನಡೆಯುವಲ್ಲೆಲ್ಲಾ ಸಂಚರಿಸಿ ಜನರ ಸಮಸ್ಯೆಗಳ ಬಗ್ಗೆ ಸರ್ಕಾರಗಳಿಗೆ, ಸಮಾಜಕ್ಕೆ ಅರಿವನ್ನುಂಟು ಮಾಡುವುದೇ ಧ್ಯೇಯವಾಗಿಟ್ಟುಕೊಂಡಿದ್ದರು. ಕಾಶ್ಮೀರ, ಈಶಾನ್ಯ ರಾಜ್ಯಗಳ ರಾಷ್ಟ್ರೀಯತಾ ಹೋರಾಟಗಳು, ಜಾಗತೀಕರಣದ ಪರಿಣಾಮವಾಗಿ ಬದುಕಿನ ನೆಲೆಯನ್ನೇ ಕಳೆದುಕೊಳ್ಳುವ ಜನರ ಚಳುವಳಿಗಳು – ಇವೆಲ್ಲವೂ ಅವರ ಅಧ್ಯಯನದ ಹಾಗೂ ವಿಚಾರಣೆಯ ವಸ್ತುಗಳೇ.

ಜನಸಾಮಾನ್ಯರಿಗೆ ಕಾನೂನು ಹೋರಾಟದಲ್ಲಿ ನೆರವಾಗಲು ಬೆಂಗಳೂರು ವಿಶ್ವವಿದ್ಯಾಲಯದಿಂದ ಕಾನೂನು ಪದವಿ ಪಡೆದು 'ಗರೀಬರ ವಕೀಲ'ರಾದರು. ತಮ್ಮ ಆದಾಯಕ್ಕೆ ಒಂದು ಮಿತಿಯನ್ನು ವಿಧಿಸಿಕೊಂಡು ಅವರು ವಾದಿಸುತ್ತಿದ್ದ ಹಲವು ಕೇಸುಗಳು ವಕೀಲರ ಶುಲ್ಕವನ್ನು ಕೊಡಲಾರದ ಸ್ಥಿತಿಯಲ್ಲಿನ ಜನರವೇ. ಇವರ ವಾದವನ್ನು ಕೇಳುವುದಕ್ಕಾಗಿಯೇ ನ್ಯಾಯಮೂರ್ತಿಗಳು ಆಸಕ್ತಿಯಿಂದ ಕಾಯುತ್ತಿದ್ದ ಪ್ರಕರಣಗಳು ಹಲವು. ಇಂಥ ಅಸಾಮಾನ್ಯ ವ್ಯಕ್ತಿಗೆ ಬೆಂಗಳೂರು ವಿಶ್ವವಿದ್ಯಾಲಯದ ಕಾನೂನು ವಿಷಯದ ಮೌಲ್ಯಮಾಪಕರೊಬ್ಬರು ಒಂದು ವಿಷಯದಲ್ಲಿ ೩೫ ಅಂಕಗಳನ್ನು ದಯಪಾಲಿಸಿ ಪಾಸು ಮಾಡಿದ್ದರು.

ಬ್ರಾಹ್ಮಣ, ಅದರಲ್ಲಿಯೂ ಸಂಪ್ರದಾಯಸ್ಥ ಬ್ರಾಹ್ಮಣ ಕುಟುಂಬದಲ್ಲಿ ಹುಟ್ಟಿದ್ದ ಬಾಲಗೋಪಾಲ್ ಎಲ್ಲ ಸಂಪ್ರದಾಯಗಳನ್ನೂ ತಿರಸ್ಕರಿಸಿದ್ದರು. ಬ್ರಾಹ್ಮಣ್ಯದ ಕಡು ಟೀಕಾಕಾರರಾದ ಅವರು ಸಂಘಪರಿವಾರದ ಉಪಟಳಗಳನ್ನು ಬಯಲು ಮಾಡುವಲ್ಲಿಯೂ ಪ್ರಮುಖ ಪಾತ್ರವಹಿಸಿದ್ದರು. ಈ ಸಂದರ್ಭದಲ್ಲಿ ಹಲವು ಬಾರಿ ಕರ್ನಾಟಕಕ್ಕೂ ಭೇಟಿ ನೀಡಿದ್ದರು. ತಮ್ಮ ಬಂಧುವರ್ಗದ ಜತೆ ಅಷ್ಟೇನೂ ಸಂಬಂಧಗಳನ್ನು ಹೊಂದಿರದಿದ್ದ ಅವರಿಗೆ ಸಮಸ್ಯೆಗಳಲ್ಲಿ ಸಿಲುಕಿಹಾಕಿಕೊಂಡವರೆಲ್ಲರೂ ತಮ್ಮ ಬಂಧುಗಳೇ. ಹಾಗೆಂದು ಅವರೆಂದೂ ಬಡಜನರ ಬಗ್ಗೆ ದೊಡ್ಡ ದೊಡ್ಡ ಭಾಷಣಗಳನ್ನು ಮಾಡುತ್ತಿರಲಿಲ್ಲ. ಇಂಗ್ಲಿಷ್ ಹಾಗೂ ತೆಲುಗು ಭಾಷೆಗಳಲ್ಲಿ ಸಮಸ್ಯೆಗಳ ಬಗ್ಗೆ ಅವರು ಬರೆಯುತ್ತಿದ್ದ ಲೇಖನಗಳು ಅವರ ಪಾಂಡಿತ್ಯಕ್ಕೆ, ವಿಶ್ಲೇಷಣಾ ಕೌಶಲ್ಯಕ್ಕೆ ಸಾಕ್ಷಿ.

ಪ್ರಸಿದ್ಧ ರಾಜ್ಯಶಾಸ್ತ್ರಜ್ಞ ಪ್ರೊ॥ ಹರಗೋಪಾಲ್‌ರವರು ಉಲ್ಲೇಖಿಸಿದ ಸಂದರ್ಭವೊಂದು ಬಾಲಗೋಪಾಲ್ ಅವರನ್ನು ಸರಿಯಾಗಿ ಚಿತ್ರಿಸುತ್ತದೆ. ಜೆ.ಎನ್.ಯು.ದಲ್ಲಿ ಅವರು ಭಾಷಣ ಮಾಡುತ್ತಿದ್ದಾಗ ಅಲ್ಲಿನ ಪ್ರೊಫೆಸರರೊಬ್ಬರು ಮತ್ತೊಬ್ಬರ ಕಿವಿಯಲ್ಲಿ ಪಿಸುಗುಟ್ಟಿದರು: ''ನೋಡಿ, ಈತ ಬಹಳ ಯಥಾವತ್ತಾಗಿ ಮಾತನಾಡುತ್ತಿದ್ದಾರೆ.'' ಇದರಿಂದ ಕ್ರುದ್ಧರಾದ ಆ ಮತ್ತೊಬ್ಬರು ''ನಾನು, ನೀವು ನಮ್ಮ ಸಾವಿನ ನಂತರ ಏನೂ ಅಲ್ಲ. ಆದರೆ ಬಾಲಗೋಪಾಲ್ ಎಂದೆಂದಿಗೂ ಜನರ ಮನಸ್ಸಿನಲ್ಲಿ, ಆಚರಣೆಯಲ್ಲಿ ನಿಂತುಹೋಗುವಂಥವರು''.

ನಗರಗೆರೆ ರಮೇಶ್
ನಂ ೩೩೩, ೫ನೇ ಅಡ್ಡರಸ್ತೆ, ೫ನೇ ಮುಖ್ಯರಸ್ತೆ, ಪದ್ಮನಾಭನಗರ
ಬೆಂಗಳೂರು - [illegible]

(೪೮ನೇ ಪುಟದಿಂದ) **ದೇವರು, ಧರ್ಮ ಮತ್ತು ಮಹಿಳೆ**

ಕಾಣುತ್ತಿದ್ದೇವೆ. ಈ ಅಂಧಶ್ರದ್ಧೆಯನ್ನು ವಿಧಿಸುವಲ್ಲಿ, ಪಾಲಿಸುವಲ್ಲಿ ಮಹಿಳೆಯರದೇ ಮೇಲುಗೈ. ಪುರು[...] ಪ್ರಧಾನವಾದ ಭಾರತೀಯ ಸಮಾಜ ಮಹಿಳೆಯರಿಗೆಂದೇ ದೇವರ ಹೆಸರಿನಲ್ಲಿ ಧಾರ್ಮಿಕ ಕಟ್ಟಳೆಗಳನ್ನು [...] ಸದಿರುವುದೂ ಇದಕ್ಕೆ ಕಾರಣವಿರಬಹುದು. ನಾವು ಸ್ತ್ರೀವಾದಿಗಳಿರಲಿ, ಇಲ್ಲದಿರಲಿ ಈ ತಾರತಮ್ಯ ಸುಸ್ಪ[...] ಯಾರಾದರೂ ನಿಧನಹೊಂದಿದ ಕುಟುಂಬದಲ್ಲಿ ಸೊಸೆಯನ್ನು ಕರೆತರುವಂತಿಲ್ಲ. ಹೆಂಗಸರು ಮಾತ್ರ ಎ[...] ಪದ್ಧತಿಗಳನ್ನೂ ಸರಿಯಾಗಿಯೇ ಅನುಸರಿಸಬೇಕು, ಇಲ್ಲದಿದ್ದರೆ ಅವರು ಯಾವುದೇ ಶ್ರೇಯಸ್ಸಿ[...] ಪಾತ್ರರಾಗಲಾರರು... ಇತ್ಯಾದಿ, ಇತ್ಯಾದಿ. ಧಾರ್ಮಿಕ ವಿಧಿಗಳನ್ನು ಪುರುಷರಿಗೂ ವಿಧಿಸಿದ್ದರೂ ಅವುಗಳ[...] ಅವರು ಪಾಲಿಸದಿದ್ದಾಗ ಅವರಲ್ಲಿ ಯಾವ ತಪ್ಪಿತಸ್ಥ ಭಾವನೆಯೂ ಇರುವುದಿಲ್ಲ. ಯಾರೂ ಅವರನ್ನು ದೂಷಿಸುವು[...] ಎಂಬುದನ್ನು ಸಾಮಾನ್ಯವಾಗಿ ಕಾಣಬಹುದು. ಜಗತ್ತಿನ ಯಾವ ಧರ್ಮಗಳೂ ಈ ತಾರತಮ್ಯಕ್ಕೆ ಹೊರತಲ್ಲ.

**ದೇವರು ಮೈಮೇಲೆ ಬರುವುದು !**

ಗೌರಿ ೨೦ ವರ್ಷ ವಯಸ್ಸಿನ ಮುಗ್ಧ ಯುವತಿ. ೭ನೇ ತರಗತಿಯವರೆಗಿನ ವಿದ್ಯಾಭ್ಯಾಸ ಮುಗಿಸಿದ ಸಂತ[...] ೧೬ನೇ ವರ್ಷಕ್ಕೆ ಮದುವೆಯೂ ಆಗಿದೆ. ಗಂಡ ಸುರೇಶ ವೃತ್ತಿಯಿಂದ ರೈತ. ಮೈಮುರಿದು ದುಡಿದ ಮೇ[...] ಸಾಯಂಕಾಲ ಕುಡಿದು ಮನೆಗೆ ಮರಳುತ್ತಾನೆ. ಕುಡಿದ ಮತ್ತಿನಲ್ಲಿ ತಾನೇನು ಮಾಡುತ್ತೇನೆ ಎಂಬ ಪರಿ[...] ಆತನಿಗಿಲ್ಲ. ಗೌರಿಯನ್ನು ಮೈಮುರಿಯುವಂತೆ ಹೊಡೆಯುತ್ತಾನೆ, ಬಯ್ಯುತ್ತಾನೆ. ಆತನ ತಂದೆ, ತಾಯಿ ಇಬ್ಬರೂ[...] ಈ ವಿಷಯದಲ್ಲಿ ಅಸಹಾಯಕರು. ಇತ್ತೀಚೆಗೆ ಅವರ ಮನೆಯಲ್ಲೊಂದು ಪವಾಡ ! ಪ್ರತಿ ಮಂಗಳವಾರ ಗೌರಿ[...] ಮೈಮೇಲೆ ಎಲ್ಲಮ್ಮ ದೇವಿ ಬರುತ್ತಾಳೆ. 'ಯಲ್ಲಮ್ಮ' ಸುರೇಶ ಕುಡಿದು, ಹೊಡೆದರೆ ಅವನ ರಕ್ತ ಹೀರುತ್ತೇನೆಂ[...] ಹೇಳಿದ್ದಾಳೆ. ದೇವರು ಮೈಮೇಲೆ ಬಂದಾಗ ಗೌರಿ ಬೇರೆಯೇ ರೀತಿ ಕಾಣಿಸುತ್ತಾಳೆ. ಸುರೇಶ ಹೆದರಿ ಅಡ್ಡ ಬಿದ[...] ''ಕಾಪಾಡು, ನಾನು ಇನ್ನು ಕುಡಿಯುವುದಿಲ್ಲ'' ಎಂದಮೇಲೆ 'ಯಲ್ಲಮ್ಮ' ಗೌರಿಯನ್ನು ಬಿಟ್ಟುಹೋಗಿದ್ದಾ[...] ಕ್ರಮೇಣ ಪ್ರತಿ ಮಂಗಳವಾರ, ಶನಿವಾರ ಗೌರಿಯ ಮೈಮೇಲೆ ಬರುವ ಯಲ್ಲಮ್ಮನ ಖ್ಯಾತಿ ಸುತ್ತಮುತ್ತ ಪ್ರಸರಿಸಿದ[...] ಗೌರಿ 'ದೇವರೇ' ಆಗಿಬಿಟ್ಟಿದ್ದಾಳೆ. ಅವಳ ಆದಾಯವೂ ಹೆಚ್ಚಿದೆ, ಆದರೆ ಪತಿ ಕುಡಿಯುವುದನ್ನು ಬಿಟ್ಟಿದ್ದರೂ[...] ಅವಳ ಜೊತೆ ಭಯದಿಂದಲೇ ನಡೆದುಕೊಳ್ಳುತ್ತಾನೆ. ಮನೆಯವರು, ಮಕ್ಕಳು ತನ್ನ ಬಳಿ ಎಂದಿನಂತಿಲ್ಲ ಎಂ[...] ಬೇಸರ ಗೌರಿಗೆ. ಆದರೆ 'ಯಲ್ಲಮ್ಮ' ತನ್ನ ಮೇಲೆ ಬರದಂತೆ ತಡೆಯುವ ರೀತಿ ಆಕೆಗೂ ಗೊತ್ತಿಲ್ಲ.

ದೇವರು, ಮಾನಸಿಕ ಉದ್ವೇಗದ ಪರಾಕಾಷ್ಠೆ, ಆತ್ಮ ಮೈಮೇಲೆ ಬರುವುದು ಗ್ರಾಮೀಣ ಭಾರತದ[...] ಸಾಮಾನ್ಯ ಘಟನೆಗಳು. ಮನೋವೈಜ್ಞಾನಿಕವಾಗಿ ಇದು ಸುಪ್ತವಾದ ಒತ್ತಡದಿಂದ ಪಾರಾಗಲು, ಮನಸ್ಸು ತಾನ[...] ಕಂಡುಹಿಡಿದುಕೊಳ್ಳುವ ಪರಿಹಾರ. ಆ ತಕ್ಷಣವೇ ಒತ್ತಡ- ತಾಕಲಾಟಗಳಿಂದ ಪರಿಹಾರ ನೀಡಿದರೂ ಅದ[...] ಕ್ರಮೇಣ ದೀರ್ಘಾವಧಿಯಾದ ಖಿನ್ನತೆಯನ್ನು ಬೆಳೆಸುತ್ತದೆ. ದೇವರ ಮೇಲಿನ ನಂಬಿಕೆಯ ದುರುಪಯೋಗಕ[...] ದಾರಿ ಮಾಡುತ್ತದೆ. 'ದೇವರು' ಬಂದ ಅರ್ಚಕ ಎಷ್ಟೋ ಜನರಿಗೆ 'ಕೌನ್ಸೆಲಿಂಗ್' ಮಾಡಿ ಅವರ ಬದುಕಿ[...] ಸಹಾಯವಾಗಬಹುದಾದರೂ, ಅದು ಜನರ ಮುಗ್ಧತೆಯ ದುರುಪಯೋಗ ಎಂಬುದು ಸತ್ಯ.

**ದೇವರು - ಧರ್ಮ ನಮಗೇಕೆ ಬೇಕು ?**

ಮೇಲಿನ ಎಲ್ಲ ಚರ್ಚೆಗಳಿಂದ ದೇವರಿಂದ – ಧರ್ಮದಿಂದ ಮಹಿಳೆಗೆ ಎಷ್ಟೆಲ್ಲಾ ತೊಂದರೆಯಿದೆ ಎಂ[...] ಭಾವನೆ ನಮ್ಮನ್ನು ಒಂದು ಕ್ಷಣ ಕಾಡಬಹುದು. ಆದರೆ ಆರೋಗ್ಯಕರವಾದ ಹವ್ಯಾಸ, ಅಭ್ಯಾಸಗಳನ್ನು ಧರ್ಮ[...] ಮತ್ತು ದೇವರು ನಮಗೇ ಗೊತ್ತಿಲ್ಲದಂತೆ ನಮ್ಮಲ್ಲಿ ಬೆಳೆಸುತ್ತವೆ. ಇವು ಮಾನವ ಧರ್ಮವನ್ನು ಮೀರಿ ನಡೆದಾ[...] ಅನಾರೋಗ್ಯದಲ್ಲಿಯೂ ಕೇವಲ ಛಲದಿಂದ, ಭಯದಿಂದ ಧರ್ಮವನ್ನು ಪಾಲಿಸಲು, ದೇವರನ್ನು ಮೆಚ್ಚಿಸಲು ಯತ್ನಿಸಿದಾಗ ಧರ್ಮ ಅಧರ್ಮವಾಗುತ್ತದೆ, ದೇವರಿಗೆ ಮೈಲಿಗೆಯಾಗುತ್ತದೆ. ಅದಕ್ಕಾಗಿ ಈ ಅಂಶಗಳನ್ನು ಗಮನಿಸಿ.

* ದೇವರು ಎಂಬುದು ವೈಯಕ್ತಿಕ ನಂಬಿಕೆ. ಅದನ್ನು ಬೇರೆಯವರ ಮೇಲೆ ಹೊರಿಸಲು ಪ್ರಯತ್ನಿಸಬೇಡಿ.
* ಧಾರ್ಮಿಕ ಪದ್ಧತಿಗಳನ್ನು ಪಾಲಿಸಲಾಗದಿದ್ದಲ್ಲಿ ಖಂಡಿತ ತಪ್ಪಿತಸ್ಥ ಭಾವನೆ ಬೇಡ. ನಿಮ್ಮ ಆರೋಗ್ಯ, ವಯಸ[...] ಎಲ್ಲವೂ ಇಲ್ಲಿ ಮುಖ್ಯ. ''ನಾನು ೨೦ ವರ್ಷದಿಂದಲೂ ಇದೇ ರೀತಿ ಮಾಡುತ್ತಿದ್ದೇನೆ. ಆರೋಗ್ಯ ಎಷ್ಟೇ ಕೆಟ್ಟರೂ ಈ ಪದ್ಧತಿಯನ್ನು ಮಾತ್ರ ಬಿಡಲಾರೆ'' ಎಂಬ ಹಠ ಬೇಡ. ನಮ್ಮನ್ನು ಕಾಪಾಡುವ ಕರುಣಾಮಯಿ ದೇವರು ಪದ್ಧತಿಗಳನ್ನು ಪಾಲಿಸದಿದ್ದರೆ ಕೋಪಗೊಳ್ಳುತ್ತಾನೆ ಎಂಬುದಕ್ಕೆ ಯಾವುದೇ ಆಧಾರವಿಲ್ಲ. ಮಾನ[...] ಭಾವನೆಗಳನ್ನು ದೇವರಿಗೂ ಆರೋಪಿಸುವ ನಮ್ಮ ಸಹಜ ರೀತಿಯಷ್ಟೆ.
* ಬೇರೆಯವರ ಮೇಲೆ ಈ ಪದ್ಧತಿಗಳನ್ನು ಹೊರಿಸುವ ಯತ್ನ ಬೇಡ. ನಿಮ್ಮ ಪತಿ/ಪತ್ನಿ/ಅಕ್ಕ/ತಂಗಿ/ಅತ್ತೆ/ ಸೊಸೆ/ನಾದಿನಿ ಯಾರ ಮೇಲೂ ಈ ನಿಟ್ಟಿನಲ್ಲಿ ಆರೋಪ/ದೂಷಣೆ ಸಲ್ಲದು. ಅವರವರ ಧರ್ಮ/ಪಾ[...] ಅವರವರಿಗೆ ಎಂದು ಸುಮ್ಮನಿದ್ದುಬಿಡುವುದು ಆರೋಗ್ಯಕರ.
* ಮಾನವೀಯ ಮೌಲ್ಯಗಳಾದ ಸಹನೆ, ಸ್ನೇಹ, ಕರುಣೆ, ಸಂತೋಷ, ಪರಸ್ಪರ ಸೌಹಾರ್ದಯುತ ಸಂಬಂಧ[...] ಇವು ದೈನಿಕ ಹಿನ್ನೆಲೆಯಲ್ಲಿ ನಮ್ಮ ಗುರಿಯಾಗಬೇಕು.

ಡಾ॥ ಕೆ. ಎಸ್. ಪವಿತ್ರ
'ಶ್ರೀ ವಿಜಯ', ೬ನೇ ಅಡ್ಡರಸ್ತೆ, ರಾಜೇಂದ್ರನಗರ, ಶಿವಮೊಗ್ಗ - ೫೭೭ ೨೦೪



# ಜೀವನೋತ್ಸಾಹ ಎಂಬ ಟಾನಿಕ್ಕು

ನಮಗಿಂತಾ ಕೆಳಸ್ತರದವರನ್ನು, ಅಸಹಾಯಕರನ್ನು, ವಿಫಲಗೊಂಡವರನ್ನು, ದುಃಸ್ಥಿತಿಯಲ್ಲಿದ್ದವರಿಗೆ 'ಮನೋಬಲ' ನೀಡಿ ಸಂತೈಸಿ ಮಾರ್ಗದರ್ಶನ–ಸಾಂತ್ವನ ನೀಡುವ ಔದಾರ್ಯಪೂರ್ಣ ಮನಃಸ್ಥಿತಿಯನ್ನು ನಾವು ನಿರ್ಮಿಸಿಕೊಳ್ಳಬೇಕು. ಅಂತಹ ನಿರ್ಮಾಣಕಾರ್ಯಕ್ಕೆ ನಮ್ಮಲ್ಲಿ ಹುಟ್ಟಿಕೊಂಡ ಆನಂದವೇ ಉತ್ಸಾಹಕ್ಕೆ ಬೆಳಕಾಗಿ, ಅಂತಹ ಉತ್ಸಾಹಶೀಲತೆ ಬೆಳೆಸುವಲ್ಲಿಯೇ ಎಂತಹ 'ಪರಮಾನಂದ' ಗಳಿಸಬಹುದೆಂದು ವಾಸ್ತವದಲ್ಲಿ ತಿಳಿಯಬಹುದು. ಹಾಗಾಗಿ 'ಜೀವನೋತ್ಸಾಹ' ಎಂಬ ಟಾನಿಕ್ಕು ಎಲ್ಲರಿಗೂ ಅವಶ್ಯವಾಗಿ ಇರಬೇಕಾದ ಮತ್ತು ಬೆಳೆಸಿಕೊಳ್ಳಬೇಕಾದ ಮೌಲಿಕ ಗುಣಾಂಶ ಎನಿಸುತ್ತದೆ.

ಬಿ. ಪಿ. ಶಿವಾನಂದ ರಾವ್

ಜೀವನದಲ್ಲಿ ತೋರುವ ಅಥವಾ ತೋರಿಸಬೇಕಾದ ಉತ್ಸಾಹಶೀಲ ಸ್ವಭಾವವೇ ಜೀವನೋತ್ಸಾಹ. ಜೀವನ ಬೇರೆ, ಉತ್ಸಾಹಶೀಲತೆಯೇ ಬೇರೆ. ನಮಗೆಲ್ಲ ತಿಳಿದಿರುವಂತೆ ಜೀವನವು ಅವಸ್ಥಾಂತರಗಳಿಂದ ಕೂಡಿದೆ. ಬಾಲ್ಯ, ಯೌವನ, ಮುಪ್ಪು– ಈ ಮೂರು ಕಾಲಘಟ್ಟಗಳನ್ನು ಎಲ್ಲ ವ್ಯಕ್ತಿ ಆತ ಗಂಡು-ಹೆಣ್ಣು-ಜಾತಿ-ಧರ್ಮ-ಭಾಷೆ-ಶಿಕ್ಷಣ-ಆದಾಯ ಇದ್ಯಾವುದರ ಪರಿಭೇದವಿಲ್ಲದೆ ಅನುಭವಿಸಲೇಬೇಕಾದ ಶಾರೀರಿಕ ಹಾಗೂ ಮಾನಸಿಕ ಅವಸ್ಥೆಗಳು.

ಜೀವನ ಎಂದ ಮೇಲೆ ಅದು ಸುಖದ ಸುಪ್ಪತ್ತಿಗೆ ಅಲ್ಲ. ಅದು ಸುಖದುಃಖಗಳ ಆಗರ. ಲಾಭ-ನಷ್ಟಗಳ ಲೆಕ್ಕಾಚಾರ, ಕೊಡುಕೊಳ್ಳುವಿಕೆಯಂತಹ ವ್ಯವಹಾರ, ಪುರುಷಾರ್ಥಗಳಾದ ಧರ್ಮ-ಅರ್ಥ-ಕಾಮ-ಮೋಕ್ಷಗಳೆಂಬ ನಾಲ್ಕು ಸ್ಥಿತ್ಯಂತರಗಳನ್ನು ಸಾಧಿಸಿ ಬದುಕಿಗೊಂದು ಅರ್ಥ-ಲಾಲಿತ್ಯ-ಸಾರ್ಥಕ್ಯ ಪಡೆಯುವ 'ದಿವ್ಯಪಥ'. ಹೀಗೆ ಹತ್ತಾರು ವ್ಯಾಖ್ಯೆಗಳಿಂದ ಪ್ರಾಜ್ಞರು ವಿಶ್ಲೇಷಿಸಿದ್ದಾರೆ. ಬದುಕಿಗೆ ಗುರಿ ಅದು ಸ್ವಹಿತ-ಪರಮಾರ್ಥ ಎರಡರದ್ದೂ ಅನನ್ಯ ಸಂಬಂಧಗಳಿಂದ ಕೂಡಿದ ಕಾಲ ಮಾನದ ಸಾಧನಾಮಾರ್ಗ – ಹೀಗೂ ವಿಶ್ಲೇಷಿಸುತ್ತಾರೆ.

ಹಣ ಬೇಕಾದಷ್ಟು ಬ್ಯಾಂಕಿನ ತನ್ನ ಖಾತೆಯಲ್ಲಿದೆ ಎಂದಾಕ್ಷಣ 'ಮನೆ' ಸಿದ್ಧವಾಗುವುದಿಲ್ಲ! ಕಟ್ಟಲಿರುವ ಮನೆಗೆ ಆಕಾರ-ಅಳತೆ-ಕೋಣೆ-ಅಡಿಗೆಮನೆ, ಹಾಲ್ – ಹೀಗೆ ತಾನು ಅಲ್ಲಿ ತನ್ನವರೊಟ್ಟಿಗೆ ನೆಲೆಸಲು ನೆಮ್ಮದಿಯ ತಾಣವಾಗಿ ಸುರಕ್ಷಿತವಾಗಿ ಸಕಲ ಸೌಕರ್ಯ ಹೊಂದಿರಬೇಕೆಂಬ ಆಸೆಯಿಂದ ಒಂದು ನೀಲಿನಕ್ಷೆ ತಯಾರಿಸಿ, ಗೃಹನಿರ್ಮಾಣಕ್ಕೆ ತಗುಲಬಹುದಾದ ಖರ್ಚು ಲೆಕ್ಕ ಹಾಕಿ ಆದಾಯದ ದಾರಿ ಹುಡುಕುತ್ತಾನೆ. ನಿರ್ಮಾಣ - ಅದು ನಂತರದ ಕ್ರಿಯಾ ವಿಧಾನ.

ಹಾಗೆಯೇ ವ್ಯಕ್ತಿ ತನ್ನ ಕುಟುಂಬದ ಸದಸ್ಯರ ಮಧ್ಯೆ ಬೆಳೆದು ಅರಳಬೇಕಾಗುತ್ತದೆ. ಇಲ್ಲಿ ಉತ್ಸಾಹದ ಪ್ರಶ್ನೆ ಏಕೆ ಉದ್ಭವಗೊಳ್ಳುತ್ತದೆ ಎಂದರೆ ಪ್ರತೀ ವ್ಯಕ್ತಿ ಈ ನಿಸರ್ಗದಲ್ಲಿನ ಒಂದು ದಿವ್ಯಾನುಭವ ನೀಡುವ ಅದ್ಭುತ ಸೃಷ್ಟಿ, ಎಂದು ಸ್ವೀಕರಿಸಿದಾಗಲೇ 'ವ್ಯಕ್ತಿತ್ವ'ದ ಬೀಜ ಮೊಳೆಯಿತು ಎಂತಲೇ ಲೆಕ್ಕ.

ಯಾವಾಗ ವ್ಯಕ್ತಿಗೆ ತಾನು ಬಯಸಿದ ವಸ್ತು ಆ ಪ್ರಮಾಣದಲ್ಲಿ, ಆಶಿಸಿದ್ದ ಹೊತ್ತಲ್ಲಿ ಲಭಿಸುವುದಿಲ್ಲವೋ ಆಗ ಅವನು ತನ್ನ ಸುಖಸಂತೋಷಕ್ಕೆ 'ಇದು ಅಡ್ಡಿ - ತೊಂದರೆ, ಆದ್ದರಿಂದ ಈ ಕ್ರಿಯೆ ಸಂತೋಷದಾಯಕದ್ದಲ್ಲ; ನಾನು ಇಲ್ಲಿಂದ ಪಾರಾಗಬೇಕು' ಎಂಬ ಪ್ರಜ್ಞೆ ಆ ವ್ಯಕ್ತಿಯ ಬುದ್ಧಿಗಮ್ಯವಾದ ಎಲ್ಲ ದಿಕ್ಕುಗಳಲ್ಲಿಯೂ ಓಡುತ್ತ ಚಿಂತಿಸಿ ತಾನೇ ಒಂದು ಸುಗಮದ ಹಾದಿಗಾಗಿ ಚಿಂತಿಸಿ-ಪ್ರಯತ್ನಿಸಿ – ಅಂತೂ ಒಂದು ಸುರಳೀತ ಮಾರ್ಗ ಶೋಧಿಸಿಕೊಳ್ಳಲು ಉದ್ಯುಕ್ತಗೊಳ್ಳುವುದಿದೆ.

ಉತ್ಸಾಹಶೀಲತೆ ಕಳೆದುಕೊಳ್ಳಲು, ಕಳೆದುಕೊಂಡು ನೀರಸ ಬಾಳ್ವೆ ನಡೆಸಲು, ಅನ್ಯರಿಗೆ ಹೂವಾಗುವ ಬದಲು ಮುಳ್ಳಾಗಿ ಜೀವನ ನಡೆಸಲು ನೂರೆಂಟು ಮಾರ್ಗಗಳಿವೆ. 'ಆಸೆ ದುಃಖಕ್ಕೆ ಮೂಲ' - ಅಂತಂದ ಬುದ್ಧನ ತತ್ವದಲ್ಲಿ ಬದುಕಿನ ಪರಮ ಸತ್ಯ ಅಡಗಿದೆ ಎಂಬುದು ನನ್ನ ಖಚಿತಾಭಿಪ್ರಾಯ. ತಮಾಷೆ ಎಂದರೆ ಆಸೆಯನ್ನೇ ಪಡದೆ ಇದ್ದವರು ಈ ಭುವಿಯಲ್ಲಿ ಇಬ್ಬರೇ! ಒಬ್ಬನು ಇನ್ನೂ ಹುಟ್ಟಿಲ್ಲ! ಮತ್ತೊಬ್ಬ ಸತ್ತುಹೋಗಿದ್ದಾನೆ! ಈ ವ್ಯಾಖ್ಯೆಯ ಮತಿತಾರ್ಥ ಇಷ್ಟೇ. ಆಸೆಪಡದೆ ವ್ಯಕ್ತಿಗೆ ಈ ಭುವಿಯಲ್ಲಿ ಅಸ್ತಿತ್ವವೇ ಇಲ್ಲ! ಇನ್ನೊಂದು ಸತ್ಯಾಂಶವೆಂದರೆ ಆಸೆಪಡುವ ಗುಣ ವ್ಯಕ್ತಿಗೆ ಬದುಕಿನುದ್ದಕ್ಕೂ ಕಾಡಿಸುವ- ಪ್ರಚೋದಿಸುವ- ಲಭಿಸಿಕೊಳ್ಳಲು ಪ್ರಯತ್ನಿಸುವ ಬಗೆಗೆ ಬುದ್ಧಿ ತಿದ್ದಿ-ತೀಡಿ ಉತ್ತೇಜಿಸುತ್ತದೆ.

ಆಸೆ ಈಡೇರದಿದ್ದಾಗ ಮನುಷ್ಯನು ಸಹಜವಾಗಿ ನಿರಾಶೆಗೊಳ್ಳುತ್ತಾನೆ. ನಿರಾಸೆ ಅತೃಪ್ತಿಗೆ, ಅತೃಪ್ತಿಯು ಸಾಧನೆಗೆ, ಸಾಧನಾ ಬುದ್ಧಿ ಕೋಪಕ್ಕೆ, ಕೋಪವು ತಾಪಕ್ಕೆ, ತಾಪವು ಕ್ರೋಧಕ್ಕೆ, ಕ್ರೋಧವು ಸೇಡಿಗೆ, ಸೇಡು ಹಿಂಸೆಗೆ, ಹಿಂಸೆಯು ನಾಶಕ್ಕೆ, ನಾಶವು ಬದುಕಿನದೆಲ್ಲದರ ಅಧಃಪತನಕ್ಕೆ ಕಾರಣವಾಗುತ್ತದೆ.

ಈ ಸಮಾಜವು ಹೆಜ್ಜೆ ಹೆಜ್ಜೆಗೆ ಸ್ಪರ್ಧೆ ಸೃಷ್ಟಿಸಿದೆ. ಈ ಸ್ಪರ್ಧೆ ಸದಾ ಸರ್ವಥಾ ಆರೋಗ್ಯಕರ ಎಂದು ಹೇಳಲಾಗುವುದಿಲ್ಲ. ಸ್ಪರ್ಧೆ ಎಂದಾಕ್ಷಣ ಸ್ಪರ್ಧಿಸಿದ ಎಲ್ಲರೂ ಗೆಲ್ಲಲಾಗುವುದಿಲ್ಲ. ಗೆದ್ದವನಿಗೆ ಗೌರವ-ಧನ-ಕೀರ್ತಿ ಲಭಿಸುವುದುಂಟು. ಆತನ ಸಾಧನೆ ಕೊಂಡಾಡುತ್ತ ಪತ್ರಿಕೆ, ರೇಡಿಯೋ, ದೂರದರ್ಶನ, ಸಂಘ ಸಂಸ್ಥೆಗಳು ಬಹುತೇಕವಾಗಿ ಆತನ/ಆಕೆಯ ಸಾಧನೆಗಳನ್ನು ಬೃಹತ್ತು-ಮಹತ್ತು ಮಾಡಿ ಹೊಗಳುವುದುಂಟು.

ಆದರೆ ಸೋತಿರುವ ವ್ಯಕ್ತಿಗೆ 'ಮರಳಿ ಯತ್ನವ ಮಾಡು' ಎಂಬ ತಾರಕ ಮಂತ್ರ ಬೋಧಿಸಿ ಉತ್ತೇಜಿಸುವವರ್ಯಾರು? ಮತ್ತೆ ಪ್ರಯತ್ನಶೀಲನಾಗುವಂತೆ ಪ್ರೀತಿಧಾರೆ ಹರಿಸಿ ಉತ್ತೇಜಿಸುತ್ತ, ಹುರಿದುಂಬಿಸುತ್ತ ಜೀವನ್ಮುಖಿಯನ್ನಾಗಿ ಮಾಡುವ ವಿಕಸನಶಕ್ತಿ, ಆ ತಾಳ್ಮೆ, ಆ ಜಾಣ್ಮೆ, ಆ ಒಲುಮೆ ಎಲ್ಲರಿಗೂ ಸಿದ್ಧಿಸುವುದಿಲ್ಲ. ಹತ್ತರೊಟ್ಟಿಗೆ ಹನ್ನೊಂದು ಮಾಡಿ ಆತ್ಮಘಾತ ಮಾಡುವ ವ್ಯಕ್ತಿಗಳು ಇಂದಿನ ಸ್ವಾರ್ಥ ಸಮಾಜದಲ್ಲಿ ಬೇಕಾದಷ್ಟು ಜನ ಸಿಗುತ್ತಾರೆ.

ಎಷ್ಟೋ ವೇಳೆ ಆತ್ಮಾಭಿಮಾನ ಬುದ್ಧಿಯಿಂದ ಸೋಲನ್ನೂ ಅದು ಸಣ್ಣದಿರಲಿ, ದೊಡ್ಡದಿರಲಿ, ಆತ/ಆಕೆ ಒಪ್ಪಿಕೊಳ್ಳುವ ಮನಃಸ್ಥಿತಿ ಕಳೆದುಕೊಂಡುಬಿಡುತ್ತಾರೆ. ಒಪ್ಪಿಗೆಯೇ ಇಲ್ಲದಿದ್ದಾಗ ಸಹನೆ ಎಲ್ಲಿ ಸಾಧ್ಯ? ಸಹನೆಯೇ ಇಲ್ಲದಿದ್ದಾಗ ದೂರದೃಷ್ಟಿ, ಪುನರ್ ಪ್ರಯತ್ನದ ಕಲ್ಪನೆಯಾದರೂ ಎಲ್ಲಿ? – ಅಸಾಧ್ಯ.

ಹೀಗಾಗಿ ಅಂಥವರು ಅಂತರ್ಮುಖಿಯಾಗಿ ದುಃಖ ಅನ್ನಲಾರದೆ ಒಳೊಳಗೇ ಅತಿಯಾಗಿ ಅನುಭವಿಸಿ ಸಣ್ಣ ಸೋಲಿಗೂ ಭೀತಿ-ನಿರಾಸೆಯಿಂದ ಹತಾಶರಾಗಿಬಿಡುತ್ತಾರೆ. ಇಂಥವರು ಕೋಪಗೊಂಡು ಹಿಂಸಾಕೃತ್ಯಕ್ಕೆ ಹೇಸುವುದಿಲ್ಲ. ಅಥವಾ ತಾವೇ ಇದೆಲ್ಲ ನಮ್ಮ ಕರ್ಮಫಲ-ಪ್ರಾರಬ್ಧ ಅಂದುಕೊಂಡು ಜೀವನೋತ್ಸಾಹ ಕಳೆದುಕೊಂಡು ಕೆಲವು ಬಾರಿ ಭಾವೋದ್ವಿಗ್ನ ಸ್ಥಿತಿಯಲ್ಲಿ ಆತ್ಮಹತ್ಯೆ ಮಾಡಿಕೊಳ್ಳುವುದು ಉಂಟು. ತಾವು ಇಷ್ಟೆಲ್ಲ ಸಾಧಿಸಿ, ವಿದ್ಯೆ ಕಲಿತು,

ದೊಡ್ಡವರಾಗಲು, ಬುದ್ಧಿವಂತಿಕೆಯಲ್ಲಿ ಬದುಕುವ ಸನ್ನಿವೇಶ ನಿರ್ಮಿಸಿಕೊಡುವಲ್ಲಿ ತನ್ನ ತಾಯ್ತಂದೆ, ಕುಟುಂಬ ಸದಸ್ಯರು, ಗುರುವರ್ಗ, ಸ್ನೇಹಿತರು, ಬಂಧುವರ್ಗ ಇವರೆಲ್ಲರ ಅಷ್ಟೋ-ಇಷ್ಟೋ ತೋರಿದ ತ್ಯಾಗ - ನೀಡಿದ ಪ್ರೀತಿ-ದಯೆ - ಕಟ್ಟಿಕೊಂಡ ಆಕಾಂಕ್ಷೆ ಇವುಗಳಿಗೆ ಏನೂ ಬೆಲೆಯೇ ಇಲ್ಲವೇ ? ಯಾರು ಯಾರಿಗಾಗಿ ಜೀವ ಹಿಡಿದಿಡಬೇಕು; ಯಾರು ಯಾಕಾಗಿ ಜೀವ ತ್ಯಜಿಸಬೇಕು ? ಇಂತಹ ಪ್ರಶ್ನೆಗಳನ್ನು ಅವರ ಅಂತರಾತ್ಮದಲ್ಲಿ ಹುಟ್ಟಿಸಿಕೊಳ್ಳುವಲ್ಲೇ ವಿಫಲರಾಗುತ್ತಾರೆ.!

ತಾನು ಬುದ್ಧಿಪೂರ್ವಕವಾಗಿ ತಪ್ಪನ್ನು ಸರಿಪಡಿಸಿಕೊಂಡು, ಸೋಲನ್ನು ಸಹಿಸಿಕೊಂಡು ಬದುಕಿನಲ್ಲಿ ಏನನ್ನಾದರೂ ಸಾಧಿಸಿ ಕೀರ್ತಿ-ಧನ-ಶ್ರೇಯಸ್ಸು ಸಂಪಾದಿಸಲು ನಿಷ್ಠೆಯಿಂದ ಪ್ರಯತ್ನಿಸುತ್ತೇನೆಂಬ ಪ್ರತಿಜ್ಞೆಗೆ ಸಜ್ಜಾಗುವಂತೆ ಅನ್ಯರು, ಸಂಬಂಧಿಸಿದವರು ಪ್ರಚೋದಿಸಬೇಕು. ನಮಗಿಂತ ಹೆಚ್ಚು ದುಃಖಿತರ, ಅಸಹಾಯಕರ, ನೋವುಂಡವರ, ಅಂಗವಿಕಲರ, ತ್ಯಾಗ ಜೀವಿಗಳ, ಛಲವಂತರ ತಾಜಾ ತಾಜಾ ಉದಾಹರಣೆ ಕೊಟ್ಟು ಸಂತೈಸಬೇಕು.

ಜೀವನೋತ್ಸಾಹವನ್ನು ಸದಾ ಜೀವಂತವಾಗಿಟ್ಟುಕೊಳ್ಳಲು ವ್ಯಕ್ತಿಗೆ ಪ್ರಥಮತಃ ಇರಬೇಕಾದ ಗುಣಾಂಶವೆಂದರೆ 'ಆನಂದ ರಸ' ಹುಟ್ಟಿಸುವ ಮನೋಭಾವ. ತಾನು ನಗುನಗುತ್ತ, ನೋವಿದ್ದರೂ ಸಹನಶೀಲ ಬುದ್ಧಿಯಿಂದ ಅನ್ಯರ ತಪ್ಪನ್ನು ಕ್ಷಮಿಸುತ್ತ, ಬೆಂದ-ಬೇಯುತ್ತಿರುವ ಬದುಕನ್ನು ಬೆಂಗಾಡು ಆಗಲಿಕ್ಕೆ ಬಿಡದಂತೆ ಪ್ರೀತಿ-ವಿಶ್ವಾಸ-ಮಮಕಾರ ಭಾವನೆಯಿಂದ ಅನ್ಯರನ್ನು ಉತ್ತೇಜಿಸುತ್ತ ನಿಷ್ಕಲ್ಮಶ ಮನೋಭಾವದ ನಡವಳಿಕೆ ನಿಚ್ಚಳವಾಗಿ ಅನುಸರಿಸಬೇಕು. ಸದಾ ಅದಿಲ್ಲ-ಇದಿಲ್ಲ, ಅದು ಹೋಯ್ತು-ಇದು ಹೋಯ್ತು, ಅವನು ಹಾಗೆ, ಇವನು ಹೀಗೆ ಎಂದು ಟೀಕಿಸುತ್ತ, ಅಪಹಾಸ್ಯ ಮಾಡುತ್ತ ಆತ್ಮಾವಲೋಕನೆಯ ಪ್ರಜ್ಞೆ ಮೂಡಿಸಿಕೊಳ್ಳದಿದ್ದಾಗ ಅಸಹನೆ-ಅತೃಪ್ತಿ-ಕೋಪ ತಾಪಗಳು, ದ್ವೇಷಾಸೂಯೆ ನಮ್ಮ ಚಿತ್ತಾಂತರಂಗದಲ್ಲಿ ಉತ್ಸಾಹದ ಚಿಲುಮೆಯನ್ನೇ ಧ್ವಂಸಗೊಳಿಸಿಬಿಡುತ್ತದೆ. ಹಾಗಾಗದಂತೆ ವಿಶೇಷತಃ ನಮಗಿಂತಾ ಕೆಳಸ್ತರದವರನ್ನು, ಅಸಹಾಯಕರನ್ನು, ವಿಫಲಗೊಂಡವರನ್ನು, ದುಃಸ್ಥಿತಿಯಲ್ಲಿದ್ದವರಿಗೆ 'ಮನೋಬಲ' ನೀಡಿ ಸಂತೈಸಿ ಮಾರ್ಗದರ್ಶನ-ಸಾಂತ್ವನ ನೀಡುವ ಔದಾರ್ಯಪೂರ್ಣ ಮನಃಸ್ಥಿತಿಯನ್ನು ನಾವು ನಿರ್ಮಿಸಿಕೊಳ್ಳಬೇಕು. ಅಂತಹ ನಿರ್ಮಾಣಕಾರ್ಯಕ್ಕೆ ನಮ್ಮಲ್ಲಿ ಹುಟ್ಟಿಕೊಂಡ ಆನಂದವೇ ಉತ್ಸಾಹಕ್ಕೆ ಬೆಳಕಾಗಿ, ಅಂತಹ ಉತ್ಸಾಹಶೀಲತೆ ಬೆಳೆಸುವಲ್ಲಿಯೇ ಎಂತಹ 'ಪರಮಾನಂದ' ಗಳಿಸಬಹುದೆಂದು ವಾಸ್ತವದಲ್ಲಿ ತಿಳಿಯಬಹುದು. ಹಾಗಾಗಿ 'ಜೀವನೋತ್ಸಾಹ' ಎಂಬ ಟಾನಿಕ್ಕು ಎಲ್ಲರಿಗೂ ಅವಶ್ಯವಾಗಿ ಇರಬೇಕಾದ ಮತ್ತು ಬೆಳೆಸಿಕೊಳ್ಳಬೇಕಾದ ಮೌಲಿಕ ಗುಣಾಂಶ ಎನಿಸುತ್ತದೆ.

ಬಿ. ಪಿ. ಶಿವಾನಂದ ರಾವ್
ಸಂಖ್ಯೆ. ೨೯, ಡಿಫೆನ್ಸ್ ಕಾಲೋನಿ
ಸಹಕಾರನಗರ ಅಂಚೆ, ಬೆಂಗಳೂರು - ೫೬೦ ೦೯೨



# ಸಾವಿನ ಮುಖ ನೋಡಿ...

ಮೊನ್ನೆ ಮೊನ್ನೆ ಅವರೊಳಗೆ ಒಬ್ಬರು
ಆಕಸ್ಮಿಕವಾಗಿ ಸತ್ತರು
ಹೋಗಲಿ, ಸಾವಿಗೆ ಹೆಸರು
ಮುಖ್ಯವಾಗುವುದಿಲ್ಲ.

ಅವರೊಡನೆಯೂ ನಗುನಗುತ ಇದ್ದವರು
ಗುಟ್ಟಾಗಿ ಹೇಳಿದ್ದರು
ಬಾಲ್ಯದಲ್ಲಿಯೇ ನನಗೆ
ಎಚ್ಚರವಿರಲಿ, ಅವರೆಲ್ಲ ಕ್ರೂರಿಗಳೆಂದು
ಮತ್ತು ಅವರ ಪತನಕ್ಕಾಗಿ
ನಾವು ಹಿಗ್ಗಬೇಕೆಂದು

ಕುತೂಹಲವಿತ್ತು, ಕೇರಿಯೊಳಗೆ ನಡೆದೆ
ಕಳೇಬರ ನೋಡಿದೆ
ಸತ್ತಮೇಲೆ ಅಲ್ಲಿಯೂ
ಜೀವವಿರಲಿಲ್ಲ.

ಸಾವಿನ ಸಂಗತಿಗೆ ಬೆರಗಾಗುತ್ತಲೇ
ಮಕ್ಕಳು ಆಟವಾಡಿಕೊಂಡಿದ್ದರು,
ಒದ್ದೆಯಾಗದಂತೆ ಕಣ್ಣುಗಳ ಒರೆಸಿಕೊಳ್ಳುತ
ಗಂಡಸರು ಖಬರಸ್ಥಾನದಲಿ
ಗೋರಿ ತೋಡುತ್ತಿದ್ದರು.

ಹೆಂಗಸರು ಬಿಕ್ಕಿಬಿಕ್ಕಿ ಅಳುತ್ತಿದ್ದರು,
ಅವರ ಕಣ್ಣುಗಳಲ್ಲೂ
ಕಂಬನಿಯೇ ಹರಿಯುತ್ತಿತ್ತು
ಆ ಸಾವಿನ ಮುಖದಲ್ಲೊಮ್ಮೆ
ನನ್ನ ಮುಖ ಕಂಡಿತು.

ಬದುಕಿನಲ್ಲಾದರೆ ಸರಿ,
ಸಾವಿನ ಬಳಿ ಕರುಣೆ ಬೇಡುವುದು ಹೇಗೆ ?
ಹಾಗಾಗಿಯೇ, ಯಾರದಾದರೇನು
ಬದುಕನ್ನು ನಾನು ಪ್ರೀತಿಸಬೇಕು !

ಗಣೇಶ ಹೊಸ್ಮನೆ
ಜಾನ್ಮನೆ - ೫೮೧ ೩೧೫, ಶಿರಸಿ (ಉತ್ತರ ಕನ್ನಡ)

# ಎಸ್. ಎಂ. ಪಂಡಿತ

ಎಸ್. ಎಂ. ಪಂಡಿತರು (೧೯೧೬-೧೯೯೩) ಗುಲಬರ್ಗಾದಲ್ಲಿ ಜನಿಸಿದರು. ಮುಂಬೈನ ಜೆ. ಜೆ. ಸ್ಕೂಲ್ ಆಫ್ ಆರ್ಟ್ಸ್ ಮತ್ತು ನೂತನ ಕಲಾ ಶಾಲೆಯಲ್ಲಿ ತಮ್ಮ ಕಲಾಶಿಕ್ಷಣವನ್ನು ಪಡೆದರು. ಪಂಡಿತರು ರಚಿಸಿದ ಕಲಾಕೃತಿಗಳ ವೈಶಿಷ್ಟ್ಯಗಳು ಹಲವಾರು. ಒಂದೊಂದು ಮಾಧ್ಯಮಕ್ಕೆ ಮತ್ತು ಕೃತಿಗೆ ತಕ್ಕಂತೆ ಭಿನ್ನತೆಯನ್ನು ಅವು ಹೊಂದಿವೆ. "ಪಂಡಿತರು ಕೆಲಸದ ಒತ್ತಡದಿಂದಾಗಿ ಹೊರಗೆ ಎಲ್ಲಿಯೂ ಹೆಚ್ಚಾಗಿ ಕಾಣುತ್ತಿರಲಿಲ್ಲ. ಅವರನ್ನು ನಾವು ಯಾವುದೋ ಒಂದೊಂದು ದೊಡ್ಡ ದೊಡ್ಡ ಕಾರ್ಯಕ್ರಮಗಳಲ್ಲಿ ದೂರದಿಂದ ನೋಡಿದರೆ ಖುಷಿ (ಆನಂದ) ಆಗುತ್ತಿದ್ದವು. ಅವರ ದರ್ಶನದಿಂದಲೇ ನಮಗೆ ಎಷ್ಟು ಆನಂದವಾಗುತ್ತಿತ್ತು" ಎಂಬ ಮಾತನ್ನು ಅನೇಕ ಹಿರಿಯ - ಯುವ ಕಲಾವಿದರು, ಕಲಾವಿಮರ್ಶಕರು, ಲೇಖಕರು ಹೇಳಿರುವುದುಂಟು. ಅವರಿಗೆ ಲಭಿಸಿರುವ ಪ್ರಶಸ್ತಿಗಳು ನೂರಾರು.

ಡಾ॥ ಮೋಹನ್ ಬಿ. ಪಂಚಾಳ
ಅತಿಥಿ ಉಪನ್ಯಾಸಕರು, ದೃಶ್ಯಕಲಾ ವಿಭಾಗ, ಕನ್ನಡ ವಿಶ್ವವಿದ್ಯಾಲಯ
ಹಂಪಿ, ಹೊಸಪೇಟೆ ತಾಲ್ಲೂಕು, ಬಳ್ಳಾರಿ ಜಿಲ್ಲೆ


ಕರ್ಣಾರ್ಜುನರ ಯುದ್ಧ


ಶಕುಂತಲ ಪತ್ರಲೇಖನ


ನಳ - ದಮಯಂತಿ


ದುಷ್ಯಂತ - ಶಕುಂತಲೆ

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. G. Ramakrishna

**HOSATHU** Kannada Monthly /NOVEMBER 2009 Rs. 12
Regd. KRNA / BGE / 7 / 2009-2011. WPP No. 14. Posted at Bangalore PSO Mysore Road BG-26
on the 28th of every month Licenced to post without prepayment. RNI Regn. No. KARKAN/1999/614..